# ಧೂಮಕೇತು

[ಸಾಮಾಜಿಕ ಕಾದಂಬರಿ]

ಬರೆದವರು

ಶ್ರೀ. ಕಡೆಂಗೋಡ್ಲು ಶಂಕರಭಟ್ಟ

ಪ್ರಕಾಶಕರು

ಯು. ಆರ್. ಶೆಣ್ಯೈ ಎಂಡ್

ರಥಬೀದಿ, ಮಂಗಳೂರು.

# ಧೂಮಕೇತು

## ಒಂದನೆಯ ಪ್ರಕರಣ

ಶ್ರೀಧರರಾಯನು ತನ್ನ ಮನೆಯ ಮುಖಮಂಟಪದಲ್ಲಿ, ಮಲಗುವ [illegible] ಮೇಲೆ ಒರಗಿಕೊಂಡು, ಮುಂಗಡೆಯ ಮೇಜಿನ ಮೇಲೆ ರಾಶಿ[illegible]ಯಾಗಿ ಬಿದ್ದಿದ್ದ ಪತ್ರಗಳನ್ನು ಒಂದೊಂದಾಗಿ ತೆಗೆದು ಓದಿ ಅಲ್ಲಿಯೆ [illegible] ಅವನ ದೇಹಕ್ಕೆ ಉತ್ಸಾಹರಸವನ್ನು ಹರಿಯಿಸುವ ಏಕ[illegible]ಧನವಾದ ಸಿಗರೇಟು ಬಾಯಿಯಲ್ಲಿತ್ತು ಹೊಗೆಯು ಒಂದು [illegible] ಹೊರಟಾಗ ಒಂದು ಪತ್ರ ಮುಗಿಯಿತು, ಮತ್ತೊಂದರ ವಾಚನ [illegible]ಂಬು ಪತ್ರದ ವಾಚನವಾಯಿತು ಹೀಗೆ ಹತ್ತೆಂಟು ಸಿಗರೇಟುಗಳು [illegible] ಬೂದಿಯಾಗಿ ನೆಲಕ್ಕೆ ಚೆಲ್ಲಿದಾಗ ಅವನ ಪತ್ರವಾಚನವು ಮುಗಿಯಿತು [illegible] ಪೂರ್ಣ ಮುಗಿಯಲಿಲ್ಲ, ಒಂದು ಮಾತ್ರ ಬಾಕಿಯಾಗಿತ್ತು ಅದ[illegible]ದುವಾಗಲೇ ಅವನಿಗೆ ದೀರ್ಘಾಲೋಚನೆ ಬಂದುದು

ಆತನ ತಲೆಯೊಳಗೆ ಆಲೋಚನೆ ನುಗ್ಗುವುದೂ ಹೊಗೆಯು ಕುದಿ ಬಾಯಿಯೊಳಗೆ ಪ್ರವೇಶಿಸುವುದೂ ಒಂದೇ ವೇಳೆಯಲ್ಲಿ ಶ್ರೀಧರ ತುದಿ ಹೊಸೆಯನ್ನು ಜಗಿದ, ಜಗಿದಷ್ಟು ಭಾವನೆಗಳ ವೇಗ ಹೆಚ್ಚಿತು ಪತ್ರವನ್ನು ಥೊಪ್ಪನೆ ಮೇಜಿನ ಮೇಲೆ ಒಗೆದ

ರಾಧಮ್ಮ ಅಡಿಗೆಕೋಣೆಯೊಳಗಿದ್ದಳು ಈ ಸದ್ದನ್ನು ಕೇಳಿ, ಸೌಟನ್ನು ಹಿಡಿದುಕೊಂಡೇ ಓಡಿ ಬಂದಳು

'ಏನೋ ಯಾರ ಪತ್ರ ಅದು?' ಎಂದು ಕುತೂಹಲದಿಂದ ಕೇಳಿದಳು

'ನಿನ್ನ ಮಗನದು' ಎಂದ ಶ್ರೀಧರ

'ನಿನ್ನ ಅಣ್ಣನದಲ್ಲವೆ?'

'ಹೌದು, ಕಾನೂನಿನ ಪ್ರಕಾರ ನನ್ನ ಅಣ್ಣನವನು, ಆತನ ಪತ್ರ ಇದು'

'ಕಾನೂನಿನ ಪ್ರಕಾರ ನಿಮ್ಮ ಲೆಕ್ಕಾಚಾರ ಮುಗಿದಿದೆಯಲ್ಲ ನಿಜವಾಗಿಯೂ ವೆಂಕು ನಿನ್ನ ಅಣ್ಣನಲ್ಲವೆ?'

ಇದಕ್ಕೂ ಶ್ರೀಧರ ಒಪ್ಪಬೇಕಾಯಿತು

'ಪತ್ರದಲ್ಲಿ ಏನಿದೆ? ವೆಂಕುಗೆ ಕ್ಷೇಮವೆ?'

'ಕ್ಷೇಮಕ್ಕೇನೂ ಕಡಿಮೆಯಿಲ್ಲ ದೇಹದ ಭಾರ ಹೆಚ್ಚಿದೆ, ಬೊಜ್ಜು ಬೆಳೆದಿದೆ . ಆದರೆ . ಕೆಲಸ ದೊರೆಯಲಿಲ್ಲ'

ರಾಧಮ್ಮ 'ಹೂಂ' ಎಂದು ಸಿಟ್ಟುಸಿರು ಕರೆದಳು

'ಮತ್ತೇನು ಬರೆದಿದ್ದಾನೆ?' ಎಂದು ಪ್ರಶ್ನಿಸಿದಳು

'ಅದನ್ನು ಕೇಳು, ನೂರು ರುಪಾಯಿಗಳನ್ನು ಕಳುಹಿಸಬೇಕಂತೆ. ನಾನು ಅವನ ಒಕ್ಕಲು ತಿಂಗಳೊಂದಕ್ಕೆ ಐವತ್ತೊ ನೂರೊ ಕಳುಹಿಸಬೇಕು. ಹೆಚ್ಚಾಗಬಾರದೆಂಬ ನಿರ್ಬಂಧವಿಲ್ಲ ಆ ಉದಾರ ಮನುಷ್ಯನದು. ಪ್ರತಿ ಪತ್ರದಲ್ಲಿಯೂ ಒಕ್ಕಣೆ ಒಂದೇ ಗೇಣಿಚೀಟಿನ ಲಿಖಿತದಂತೆ. ಸಲಬೇಕಾದ ಮೊಬಲಗಿನಲ್ಲಿ ಮಾತ್ರ ವ್ಯತ್ಯಾಸ. ನಾನು ಚಿರಂಜೀವಿ . ತಿಂಗಳು ತಿಂಗಳು 'ಮಾಲಿಖಾನೆ'ಯನ್ನು ಕಳುಹಿಸುವುದರಿಂದ ನಾನ್ನು ಚಿರಂಜೀವಿಯಾಗಿರಬೇಕು. ಪತ್ರ ದೊರೆತ ಮಾರುದಿನವೇ ಹಣವನ್ನು ಕಳುಹಿಸಬೇಕು'

ರಾಧಮ್ಮನಿಗೆ ಸಿಟ್ಟೂ ಮರುಕವೂ ಏಕಕಾಲದಲ್ಲಿ ಬಂದುವು ಕೋಪದ ಚಿಹ್ನೆಯಾಗಿ ಕೈಯಲ್ಲಿದ್ದ ಸೌಟು 'ಜಣ್' ಎಂದು ನೆಲಕ್ಕೆ ಉರುಳಿತು. ಮರುಕವು ಗದ್ಗದ ಧ್ವನಿಯಿಂದ ಮಾತಾಡಿಸಿತು

'ಹಾಗೆ ಹೇಳಬಾರದು ನೀನು. ಕಷ್ಟದಲ್ಲಿದ್ದಾನೆ ನಮ್ಮ ವೆಂಕು. ಹೋಗಿ ಒಂದೆರಡು ವರ್ಷಗಳಾದುವು. ಕೈಹಿಡಿದವಳ ಮೋರೆ ನೋಡಲಿಲ್ಲ ಹೆತ್ತವಳನ್ನು ಕಾಣಲಿಲ್ಲ ಕೆಲಸ ಸಿಕ್ಕಲಿಲ್ಲ ಊರೂರು ಅಲೆದಾಡಿ ನೆತ್ತರನ್ನು ಆರಿಸುತ್ತಿದ್ದಾನೆ. ದೇವರ ದಯೆಯಿಂದ ನಿನಗೇನೋ ವ್ಯಾಪಾರದಲ್ಲಿ ಒಳ್ಳೆಯ ಲಾಭ ಬರುತ್ತಿದೆ. ನಿನ್ನ ಕರುಳದು ಸಹಾಯಮಾಡು, ಕಷ್ಟದಲ್ಲಿ

ಕೈಬಿಡಬೇಡ. ವೆಂಕಟುಗೆ ಉದ್ಯೋಗ ದೊರೆತ ಮೇಲೆ, ಆತನಿಗೆ ಕೊಟ್ಟ ಹಣವನ್ನು ಬಡ್ಡಿಯ ಸಮೇತ ಹಿಂದೆ ಪಡೆಯಬಹುದು ಶ್ರೀಧರ! ಅನ್ನವಿಲ್ಲದೆ ಎಷ್ಟು ದಿವಸವಾಯಿತೋ ಏನೋ'

'ದೇವರ ದಯೆಯೇ ನನಗೆ ಮೋಸಕೊಟ್ಟಿತು ತಾಯಿ! ಅದರೊಂದರ ಬಾಧೆ ಇಲ್ಲದಿರುತ್ತಿದ್ದರೆ ನಾನು ಹೀಗಾಗುವುದಿತ್ತೆ? ಪ್ರತಿ ಮಾಸದಲ್ಲಿ, ಅನ್ನ ವಿಲ್ಲದೆ, ನಿದ್ರೆಯಿಲ್ಲದೆ, ಜವರೊಡನೆ ರಕ್ತ ಸುರಿಸಿ ಸಂಪಾದಿಸಿದ ಹಣವನ್ನು, ಅಣ್ಣನೆಂದು ರುಜುಪಡಿಸುವುದಕ್ಕಾಗಿ ವಂಕಟುಗೆ ಕಳುಹಿಸುವಂತೆ ಮಾಡುವ ದೇವರ ದಯೆ ಇಲ್ಲದಿರುತ್ತಿದ್ದರೆ, ಈಗ ಬಡಕಲಾದ ನನ್ನ ದೇಹ ಇಂದು ದುಂಡಗಾಗಿ ಚೆಂಡಿನಂತೆ ಹಾರುತ್ತಿತ್ತು ಅವರೆ ಮಾಡುವುದೇನು? ದೇವರ ದಯೆ ನನಗಾಯಿತು ಲಾಭ ಅವನಿಗಾಯಿತು'

'ನೀನು ಶತಮೂರ್ಖ ಶ್ರೀಧರ ಅಲ್ಲದಿದ್ದರೆ ಆ ಬಡ ಅಣ್ಣನ ವಿಷಯ ವಾಗಿ ಇಂತಹ ಎಷ್ಟುರವನ್ನು ಆಡುತ್ತಿರಲಿಲ್ಲ'

'ಶತ ಏಕೆ? ನಾನು ಸಹಸ್ರಮೂರ್ಖ! ಮೂರ್ಖನಲ್ಲದಿರುತ್ತಿದ್ದರೆ, ನಾನೂ ಅವನಂತೆ ಇರಬೇಕಾಗಿದ್ದಿತಲ್ಲವ? ಬಿ ಎ ಪರೀಕ್ಷೆಯಲ್ಲಿ ಉತ್ತೀರ್ಣ ನಾಗಿ ಉದ್ಯೋಗದಲ್ಲಿದ್ದ. ತಿಂಗಳಿಗೆ ಬರುತ್ತಿದ್ದ ಅರುವತ್ತು ರುಪಾಯಿ ಯಿಂದ ದೊರಕುವ ಕೀರ್ತಿ ಸಾಲದೆಂದಾಯಿತು ದೊಡ್ಡ ಧುರೀಣನಾಗದೆ ನಿರ್ವಾಹವೇ ಇಲ್ಲವೆಂದಾಯಿತು ಹಲವರಿಂದ 'ಭೇಷ್! ಭಲೆ!' ಎನ್ನಿಸಿ ಕೊಳ್ಳಬೇಕಾಯಿತು ಚಳವಳಿಕ್ಕೆ ಸೇರಿದ ಲೋಕೋದ್ಧಾರಾರ್ಥವಾಗಿ ಅವತಾರ ಹೊಂದಿದ ಮಹಾಪುರುಷರಿಗೆ ತಿಂಗಳ ಅರುವತ್ತು ರುಪಾಯಿ ಯಾವ ಲೆಕ್ಕ? ಅದನ್ನು ಕಾಲಿಂದ ಒದೆದ ಬೀದಿ ಬೀದಿ ಅಲೆದಾಡಿದ ಲೋಕೋದ್ಧಾರದ ಹುಚ್ಚು ಇವನೊಬ್ಬನಲ್ಲಿದ್ದರೆ ಸಾಕು, ಇತರರಿಗೆ ಅಂಟು ವುದು ಬೇಡ, ಎಂದು ಸರಕಾರದವರು ಸೆರೆಮನೆಯಲ್ಲಿಟ್ಟು ಒಂದು ವರ್ಷ ಮುದ್ದು ಮಾಡಿದರು ಹೊರಬಂದ ತಂದೆ ಗಳಿಸಿಟ್ಟಿದ್ದ ಹಣವನ್ನು ಮೂರು ವರ್ಷದೊಳಗೆ ಧ್ವಂಸಮಾಡಿದ, ತಿಂದು ತೇಗಿದ ಆತನಲ್ಲಿದ್ದ ದೈವಿಕ ಶಕ್ತಿಯು, ಲೋಕನಾಯಕ ಶಕ್ತಿಯು, ಹಣದೊಡನೆ ಕರಗಿಹೋದ ಮೇಲೆ ಶತಮೂರ್ಖನಾದ ತಮ್ಮನ ನೆನಪು ಬಂತು. ಇದರಿಂದಲೇ ನಾನಿಂದು 'ಚಿರಂಜೀವಿ'ಯಾಗಿರಬೇಕಾದುದು'

'ಒಂದು ಜೀವದ ಪಾಡು ಹೇಗೂ ಆದೀತು. ಕೈಹಿಡಿದ ಹೆಣ್ಣಿನ ಗತಿಯೇನಾಗಬೇಕು ಹೇಳು'

'ಕೈಹಿಡಿದ ಹೆಣ್ಣುಜೀವಕ್ಕಾಗಿ ಆ ಗಂಡುಜೀವ ಏನು ಮಾಡುತ್ತಿದೆ? ಹೇಳು. ಮೊದಲನೆಯ ಹೆಂಡತಿ ತೀರಿಹೋದ ಮೇಲೆ, ಈ ಮಹಾಪುರುಷನು ಮಾಡಿದ ಮಹಾಕಾರ್ಯವೆಂದರೆ ಒಂದೇ ಒಂದು - ಸ್ವಾರ್ಜಿತವಿಲ್ಲದೆ ಮದುವೆಯಾದುದು ಹುಡುಗಿ ಕೊಡುವ ಕುರುಡು ತಂದೆಗಳಿದ್ದಾರೆ, ಮಂತ್ರ ಹೇಳುವ ಬರಡು ಭಟ್ಟರಿದ್ದಾರೆ, ಎಂಬ ಧೈರ್ಯದಿಂದ ಕನ್ನಿಕೆಗೆ ಕೈ ನೀಡಿದುದು'

'ತನ್ನದು ಎನ್ನುವ ಒಂದು ಕೂಸಿಲ್ಲದ ಕಾರಣ, ನನ್ನ ಬಲಾತ್ಕಾರದಿಂದ ಮದುವೆಯಾದ'

'ಇಂಥ ಹುಚ್ಚರಿಗೆ 'ತಮ್ಮದು' ಎನ್ನುವ ಹುಚ್ಚೊಂದಿದ್ದರೆ ಸಾಲದೆ? ಮಕ್ಕಳೂ ಬೇಕೆ? ಅಯ್ಯೋ ತಾಯಿ ಲೋಕದಲ್ಲಿ ಈಗಿರುವ ಹುಚ್ಚರ ಸಂಖ್ಯೆ ಕಡಿಮೆಯೆಂದು ಭಾವಿಸಿರುವೆಯಾ? ಎಂದೂ ಅಲ್ಲ'

'ನಿನ್ನ ಹೃದಯದಲ್ಲಿರುವುದು ದ್ವೇಷದ ವಿಷ ಮಾತ್ರ'

'ಸತ್ಯ ವಾಕ್ಯಕ್ಕೆ ದ್ವೇಷದ ಛಾಯೆ ಬಿದ್ದೇಬಿಡುತ್ತದೆ. ಯಾರೇನು ಮಾಡಲಾದೀತು? ನನ್ನಲ್ಲಿರುವ 'ದ್ವೇಷ'ವನ್ನು ಹೋಗಲಾಡಿಸುವುದು ಅತಿ ಸುಲಭ. ವೆಂಕು ಸ್ವಾವಲಂಬಿಯಾಗಲಿ ತನ್ನ ಹಸುವನ್ನು ಅನ್ಯರ ಕೊಟ್ಟಿಗೆಯಲ್ಲಿ ಕಟ್ಟುವ ಔದಾರ್ಯವನ್ನು ಬಿಟ್ಟುಬಿಡಲಿ ಆತನು ಸ್ವತಂತ್ರನಾದ ಮರುದಿನ – ಅಲ್ಲ, ಮರುಕ್ಷಣದಲ್ಲಿ ನನಗೇ ದ್ವೇಷವಿಲ್ಲ. ಮತ್ತೆ ಬಂದು ನಮ್ಮ ಮನೆಯಲ್ಲೇ ಇದ್ದುಕೊಳ್ಳಲಿ. ನಾನು ಬರುತ್ತೇನೆಂದು ತಂತಿ ಬಿಡಲಿ. ಉಗಿಬಂಡಿಯ ನಿಲ್ದಾಣಕ್ಕೆ ಹೋಗಿ, ಹಸ್ತಲಾಘವವಿತ್ತು, ಪುಷ್ಪಮಾಲಿಕೆ ತೊಡಿಸಿ, ಮೋಟರ್ ಬಂಡಿಯಲ್ಲಿ ಕುಳ್ಳಿರಿಸಿ, ಮಹಾರಾಜರನ್ನು ಕರೆತರುವ ರೀತಿಯಲ್ಲಿ, ನಾನೇ ಆತನನ್ನು ಇದಿರುಗೊಂಡು • ಜಯಕಾರದೊಡನೆ ಕರೆತರುವುದಿಲ್ಲವೆ?'

'ಪಿತ್ರಾರ್ಜಿತದಲ್ಲಿ ನಿಮಗೇನೋ ವಿಭಾಗವಾಗಿದ್ದಿರಬಹುದು. ತಾಯಿಯ ಪ್ರೀತಿಯಲ್ಲಿ ವಿಭಾಗವಾಗಿಲ್ಲ'

'ನಿನ್ನ ಪ್ರೀತಿಯು ಅವನೊಬ್ಬನಿಗೇ ಸಂದುಹೋಗಲಿ ತಾಯಿ; ನನ್ನ

ಆಕ್ಷೇಪವಿಲ್ಲ ಇದು ಹಣದ ಪ್ರಪಂಚ. ಹೃದಯವು ಬಿಳಿ ನಾಣ್ಯಗಳ ಟಂಕಸಾಲೆಯೇನೂ ಅಲ್ಲ ಆದುದರಿಂದ ಪ್ರೀತಿ – ಅಪ್ರೀತಿಗಳು ಯಾರನ್ನೂ ಬದುಕಿಸಲಾರವು, ಕೊಲ್ಲಲಾರವು. ನನ್ನ ವ್ಯಾಪಾರದಲ್ಲಿ ಈಗೇನೂ ಲಾಭ ಬರುವುದಿಲ್ಲ. 'ಪುರಾಣಕಾಲದ ಭ್ರಾತೃಸ್ನೇಹವನ್ನಿಟ್ಟುಕೊಂಡಿದ್ದೇನೆ ಸ್ವಾಮಿ. ಅಣ್ಣನಿಗೆ ತಿಂಗಳಿಗೆ ನೂರು ರುಪಾಯಿಗಳನ್ನು ಕಳುಹಿಸುತ್ತೇನ ಸ್ವಾಮಿ. ದಯಮಾಡಿ ನಮ್ಮಂಗಡಿಗ ಬನ್ನಿ' ಎಂದರೆ ಗಿರಾಕಿ ಬರಲೊಲ್ಲ. ನಮ್ಮ ಮನೆ ಯೆಂದರ ಬಕಾಸುರನ ಹೊಟ್ಟೆ ಎಷ್ಟಿದ್ದರೂ ಧ್ವಂಸ ಮಾಡಿಬಿಡುತ್ತದೆ. ಪಾರ್ವತಿ ಹಸೆ ಹಿಡಿದು ವರ್ಷಗಳಾದುವು ಡಾಕ್ಟರರ ವೇತನ ಕೊಡಲು ಕೈಯಲ್ಲಿ ದುಡ್ಡಿಲ್ಲ ನನ್ನ ಮಾನ, ಮರ್ಯಾದ, ನಿನ್ನ ಪುತ್ರವಾತ್ಸಲ್ಯ, ದಯೆ, ಭಕ್ತಿ, ನನ್ನ ಭ್ರಾತೃಪ್ರೇಮ – ಇವು ಯಾವುವೂ ಹಣವನ್ನು ಕೈಗೆ ಬರಿಸುವುದಿಲ್ಲ ತಾಯಿ ಪ್ರಪಂಚವು ಇಂತಹದು ನೋಡು'

'ಹಾಗಾದರ ಅವನ ಪತ್ರಕ್ಕೆ ಉತ್ತರವೇನು?'

'ನೀನೇ ಹೇಳು – ನಾನು ಯಾವ ಉತ್ತರವನ್ನು ಕೊಟ್ಟೇನು? ಕೊಡಲು ಸಾಧ್ಯ?'

'ವಿಷ ಕುಡಿಯಲೂ ಕಾಸಿಲ್ಲದೆ . .'

'ನಾನಿಷ್ಟು ಹಣವನ್ನು ಇದುವರೆಗೆ ಕಳುಹಿಸಿದ್ದೇನೆ. ಅದರಲ್ಲಿ ಒಂದು ಕಾಸೂ ದೊರಯಲಿಲ್ಲವೆಂದರೆ?'

'ಅಯ್ಯೋ ನಿನ್ನ ಮನಸ್ಸೇ!'

'ಹೌದು; ಇದು ನನ್ನ ಹೃದಯ ಸಂಸಾರದ ಕಷ್ಟ ನಿಷ್ಠುರಗಳನು ಅರಿಯದ ಹೆಡ್ಡು ಹೆಣ್ಣಿನ ಮನಸ್ಸಲ್ಲ'

ಅಷ್ಟರಲ್ಲಿ ಯಾರೋ ಬರುವ ಸದ್ದಾಯಿತು. 'ಮಾತು ನಿಲ್ಲಿಸು ಸೀತಮ್ಮ - ನಿನ್ನ ಅತ್ತಿಗೆ ಬರುತ್ತಿದ್ದಾಳೆ' ಎಂದು ರಾಧಮ್ಮ ಶ್ರೀಧರನ ಆವೇಶ ವನ್ನು ತಡೆದಳು

ಸೀತಮ್ಮ ಬರುವುದರಲ್ಲಿದ್ದಳು. ಆದರ ಅತ್ತೆ ಮೈದನರ ಮಾತು ತನ್ನ ಆಗಮನದಿಂದ ಎಳೆದ ದಾರದಂತೆ ತುಂಡಾದುದರಿಂದ, ಅವರ ಸಂಭಾಷ ಣೆಗೆ ವಿಘ್ನತರುವುದೇಕೆಂದು ಆಕೆ ಒಳಕೋಣೆಯನ್ನು ಹೊಕ್ಕು ಮಾಯ ವಾದಳು.

ಶ್ರೀಧರ – ಆಕೆಗೆ ತಿಳಿದರೇನಂತೆ? ನಾನಾಡಿದ ಸಂಗತಿ ನಿಜವಲ್ಲವೇ?

ರಾಧಮ್ಮ – ಹಿಡಿದ ಛಲವನ್ನು ಬಿಡುವ ಸಂಪ್ರದಾಯ ನನಗಿಲ್ಲ ನನ್ನ ಬಾಳು ಇನ್ನೊಂದು ವರ್ಷವೋ ಎರಡೋ! ಆ ವರೆಗೆ ಅಣ್ಣತಮ್ಮಂದಿರು ಒಡನಾಡಿ ಸುಖದಲ್ಲಿರುತ್ತಿದ್ದರೆ ನೆಮ್ಮದಿಯಿಂದ ಸಾಯುತ್ತಿದ್ದೆ.

ಶ್ರೀಧರನ ಪ್ರತಿಪಾದನೆಗೆ ಇದು ಉತ್ತರವಾಗಿರಲಿಲ್ಲ ವಕೀಲರು ಎಷ್ಟು ಒದರಿ ವಾದಿಸಿದರೂ ತಮಗೊಪ್ಪಿದ ತೀರ್ಮಾನವನ್ನು ಕೊಡುವ ನ್ಯಾಯಾಧೀಶರಂತೆ ರಾಧಮ್ಮ ಕೊಟ್ಟ ತೀರ್ಪಿದು

ಶ್ರೀಧರನು ಕುರ್ಚಿಯಿಂದೆದ್ದು ಒಳಗೆ ನಡೆದನು ತನ್ನ ಕೋಟನ್ನು ಸುಲಿದು ಬಿಸುಟನು ಶರಟಿನ ಮೇಲೆ ದಿವ್ಯವಾದೊಂದು ಶಾಲನ್ನು ಹಾಕಿಕೊಂಡನು ತಲೆಗೊಂದು ಟೊಪ್ಪಿಗೆಯಿಟ್ಟು ಕನ್ನಡಿಯ ಮುಂದೆ ನಿಂತು, ಮೀಸೆಯನ್ನು ಹುರಿಮಾಡಿ, ಹೊರಬರುವಷ್ಟರಲ್ಲಿ, ದೂರದಲ್ಲಿದ್ದ ಸೀತಮ್ಮನ ರೂಪವು ಗೋಚರವಾಯಿತು ಹೂಬುಟ್ಟಿಯನ್ನು ಹಿಡಿದುಕೊಂಡು ಸೀತಮ್ಮ ಮನೆಯ ಹಿಂದಿನ ಹೂದೋಟಕ್ಕೆ ಹೋಗುತ್ತಿದ್ದಳು

ಶ್ರೀಧರನು ಅಂಗಳಕ್ಕಿಳಿದು ಒಂದು ಬಾರಿ ಆ ಕಡೆ ನೋಡಿ, 'ಇದೇ ಆ ಹೆಣ್ಣುಜೀವ!' ಎಂದುಕೊಂಡು ಬೀದಿಗಿಳಿದನು

ಆಗ ತಾನೆ ಹುರಿಮಾಡಿದ್ದ ಮೀಸೆಯ ತುದಿ ಬಾಯೊಳಗೆ ಹೊಕ್ಕಿತು. ಶ್ರೀಧರನ ಆಲೋಚನಾತತ್ಪರತೆಯ ಸ್ಥಿತಿಯಿದು ಎಂದು ಬೇರೆ ಹೇಳಬೇಕಾಗಿಲ್ಲ

# ಎರಡನೆಯ ಪ್ರಕರಣ

ಚಿಕ್ಕ ಜನರ ನಿವಾಸಕ್ಕೆ ಯೋಗ್ಯವಾದ ಚೊಕ್ಕ ಮನೆಯೊಂದು ಮಂಗಳೂರಿನ ಕಿರಿ ಬೀದಿಯೊಂದರಲ್ಲಿ ಕಂಗೊಳಿಸುತ್ತಿದೆ. ಬೀದಿ ಕಿರಿದು, ಸಾಲ ದುದಕ್ಕೆ ಅದರೆರಡೂ ಪಕ್ಕಗಳಲ್ಲಿ ರಾಶಿರಾಶಿಯಾಗಿ ಬಿದ್ದ ಕಸರು. ಬೀದಿಯ ಉದ್ದಕ್ಕೂ ಮನೆಗಳು ಕಿಕ್ಕಿರಿದಿವೆ ಅವುಗಳನ್ನು ಮನೆಗಳೆನ್ನುವುದಕ್ಕಿಂತಲೂ ಗೂಡುಗಳೆನ್ನುವುದೇ ವಾಸಿ ಒಂದರ ಪಕ್ಕದಲ್ಲಿ ಇನ್ನೊಂದು, ಅದರ ಬನ್ನಿಗೆ ಮತ್ತೊಂದು ಭೂರಿದಕ್ಷಿಣೆಗಾಗಿ ಗುಂಪುಕೂಡಿ, ಒಬ್ಬರನ್ನೊಬ್ಬರು ಉಪ ಮರ್ದಿಸಿ, ಮುಂದೆ ಮುಂದೆ ನುಗ್ಗುನೂಕಾಗಿ ನೆರೆದ ಬ್ರಾಹ್ಮಣರ ನೆರವಿ ಯಂತೆ ಆ ಮನೆಗಳಿವೆ ಎನ್ನಿ ಇವುಗಳ ಮಧ್ಯದಲ್ಲಿ ಮೇಲೆ ಹೇಳಿದ ಒಂದೇ ಒಂದು ಮನೆ ರಮ್ಯವಾದ ಮನೆ ಆಧುನಿಕ ಸಭ್ಯತೆಯ ಗುರುತುಗಳಾವುವೋ ಅವೆಲ್ಲ ಆ ಮನೆಯಲ್ಲಿವೆ ಇದಿರಲ್ಲೊಂದು ಹೂದೋಟ ಜಗಲಿಯ ಸುತ್ತಲೂ ಹೂ-ಕುಡಿಕೆಗಳು. ಇದಿರ ಗೋಡೆಯಲ್ಲಿ ನೇತಾಡುವ ಶೃಂಗಾರ ಚಿತ್ರಪಟಗಳು ನಾಲ್ಕಾರು ಕುರ್ಚಿಗಳು ಮನೆಯೊಳಗೆ ಮೂರು ನಾಲ್ಕು ಚಿನ್ನದ ಕರಡಿಗೆಗಳಂತಹ ಕೋಣೆಗಳು ಪ್ರತಿಯೊಂದು ಕೋಣೆಗೂ ದೊಡ್ಡ ದೊಡ್ಡ ಕಿಟಿಕಿಗಳು. ಕಿಟಿಕಿ ಬಾಗಿಲಿಗೆ ಬಣ್ಣದ ಪರದೆಗಳು. ನೆಲಕ್ಕೆ ಸಿಮೆಂಟಿನ ಸಾರಣೆ ಒಂದೆರಡು ಕೋಣೆಗೆ ನುಣ್ಣನೆಯ ಬಣ್ಣದ ಇಟ್ಟಿಗೆ. ಗೋಡೆಗೆ ಸುಣ್ಣದ ಗಾರೆ. ಇಂತಹ ಮನೆಯೊಳಗೆ ತೃಪ್ತಿ, ಸುಖ, ಶಾಂತಿ ಗಳಿಲ್ಲದಿದ್ದರೆ ಮತ್ತೆಲ್ಲಿರಬೇಕು?

ಅಲ್ಲಿದ್ದವರೂ ಇಬ್ಬರೇ – ಒಬ್ಬಳು ಮುದುಕಿ. ಆರೂಢ ಯೌವನೆ ಯಾದ ಒಬ್ಬಳು ಸುಂದರಿ

ಕಾವ್ಯಾವೇಶ ಹೊಂದಿ, 'ಮಲ್ಲಿಕಾಸ್ಮಿತರುಚಿರೆ, ಕುಂದಕುಟ್ಮಲರದನೆ' ಎಂದೀಕೆಯ, ತರುಣಿಯ, ರೂಪವಿಜೃಂಭಣವನ್ನು ಬಣ್ಣಿಸಬೇಕೆಂದು ಇಚ್ಛೆ ಯುಳ್ಳ ರಸಿಕಶಿಖಾಮಣಿಗಳು ಬೇಕಾದರೆ ಹಾಗೆಯೇ ಬಣ್ಣಿಸಿಕೊಳ್ಳಲಿ! ಆದರೆ, ಕಾವ್ಯಾವೇಶದ ರೋಗ ಹಿಡಿಯದ ಸಾಮಾನ್ಯ ಮನುಷ್ಯರಿಗೆ ಆಕೆಯ 'ಲಾವಣ್ಯ'ದ ಕುರಿತಾಗಿ ಇಷ್ಟೇ ಭಾವನೆಯಾದೀತು. – ಸೊಬಗಿಗಿಂತ ನೋಡಿ

ಹೆಚ್ಚು; ವಿನಯಕ್ಕಿಂತ ಹೊರಗಿನ ನಯ ಅಧಿಕ, ರಸಕ್ಕಿಂತ ಮಾತು ಹೆಚ್ಚು; ಆಕಾರವು ತೋರಿಸುವುದಕ್ಕಿಂತ ಆದ ಪ್ರಾಯವೂ ಹೆಚ್ಚು ಇದರೊಂದಿಗೆ ಅಹಂಕಾರ, ಅಧಿಕಾರಲಾಲಸೆಗಳು ಹುಬ್ಬಿನ ಜರ್ಬಿನಲ್ಲಿ, ಕಡೆಗಣ್ಣಿನ ಸುಳಿ ದಾಟದಲ್ಲಿ, ತುಟಿಗಳ ಕುಣಿದಾಟದಲ್ಲಿ ಕಂಡುಬರುತ್ತಿವ ಕುಲೀನೆಯಲ್ಲಿ ದಿದ್ದರೂ ನಡತೆಯನ್ನು ಕಾಪಾಡುವ ಕುತೂಹಲ, ಇದಕ್ಕ ಆಗಾಗ ಒದಗುತ್ತಿದ್ದ ಆತಂಕಗಳು ಇವುಗಳ ಹೋರಾಟದಲ್ಲಿ ಸಿಲುಕಿ ದಾರಿಯೇನೆಂದು ತಿಳಿಯದ ಹೆಣ್ಣು ಆಕೆ!

ಸಾಯಂಕಾಲವಾಗಿದೆ. ಬೀದಿಯ ದೀಪದ ಕಂಬದಲ್ಲಿ ಬೆಳಕಾಗಿದೆ.

ಈ ಮನೆಯ ಕಡೆಗೆ ಸುಂದರಾಕಾರದ ಪುರುಷ ವ್ಯಕ್ತಿಯೊಂದು ಹೋಗುತ್ತಿತ್ತು.

ಹೊರಗಿದ್ದ ಮುದುಕಿ, 'ನೋಡೇ! ಅವರು ಬಂದರು' ಎಂದಳು.

ಒಳಗಿದ್ದ ಯುವತಿ ಥಟ್ಟನ ಹೊರಕ್ಕೆ ಹಾರಿ ಅಂಗಳಕ್ಕಿಳಿದಳು, 'ಒಹೋ! ನೀವೇ?' ಎಂದು ಮುಂದೆ ಅಡಿಯಿಡದೆ ಜಗಲಿಗೆ ಹತ್ತಿದಳು ಈ 'ನೀವು' ವಿಶೇಷದ 'ನೀವು' ಅಲ್ಲ – ಸಲಿಗೆಯ ಪರಿಚಯದ 'ನೀವು'; ತಾವಾಗಿ ಬೆನ್ನಹಿಂದೆ ಬರುವ 'ನೀವು' – ಎಂಬಂತೆ ಆ ತರುಣಿ ಒಳಗೆ ಮೇಜು ಕುರ್ಚಿಗಳಿದ್ದ ಕೋಣೆಯಲ್ಲಿ ಕುಳಿತಳು

, ಆ ವ್ಯಕ್ತಿ ಕೋಣೆಯೊಳಕ್ಕೇ ಬಂದಿತು

'ಬನ್ನಿ ಕುಳಿತುಕೊಳ್ಳಿ' ಎಂದು ಕುರ್ಚಿಯಿಂದ ಸ್ವಲ್ಪವೂ ಅತ್ತಿತ್ತ ಅಲುಗಾಡದೆ ಆ ತರುಣಿ ಆಜ್ಞೆಕೊಟ್ಟಳು.

ವ್ಯಕ್ತಿ ಕುಳಿತುಕೊಂಡಿತು

'ಚಂಚಲಾ! ನಿನ್ನನ್ನು ನೋಡದೆ ಬಹಳ ದಿವಸ – ಅಲ್ಲ – ಯುಗವಾಯಿತು'

'ಓಹೋ! ಇಂದು ಗದ್ಯದಲ್ಲಿ ಮಾತಾಡುವುದಲ್ಲ, ಪದ್ಯದಲ್ಲೆ ಮಾತನಾಡಬೇಕೆಂದು ನಿಶ್ಚಯಿಸಿದಂತೆ ತೋರುತ್ತದೆ'

'ಅಲ್ಲ ಚಂಚಲಾ! ನನ್ನ ತಾಪತ್ರಯ ನಿನಗೆ ಗೊತ್ತಿದೆ; ಅಡಚಣೆ ಗೊತ್ತಿದೆ'

'ನೀವು ಹೇಳಿದುದಷ್ಟು ಗೊತ್ತಿದೆ'

'ನನ್ನ ಹೃದಯವೇ ನಿನ್ನ ಮುಷ್ಟಿಯೊಳಗಿದೆ ಚಂಚಲಾ! ಇಂಥ ಮಾತುಗಳೇಕೆ?

'ಹಾಗೆ ಭಾವಿಸಿದ್ದೇನೆ'

'ಇದನ್ನು ಕಾರ್ಯದಲ್ಲಿ ನೋಡುವ'

'ನೀವು ಬರೆದ ಪತ್ರಗಳಲ್ಲಂತೂ ಖಂಡಿತ ನೋಡಿದ್ದೇನೆ'

'ಹೆಚ್ಚು ಪ್ರಸ್ತಾಪಿಸುವುದಕ್ಕೆ ಅವಕಾಶವಿಲ್ಲ ನಿನ್ನಲ್ಲಿ ನಿಸ್ಸಂಕೋಚವಾಗಿ ಕೇಳುತ್ತೇನೆ ಈ ಮಾತನ್ನು .' ಎಂದು ಅವನು ಮುಂದುವರಿಸಿದ.–'ಒಂದು ವೇಳೆ ನಾನು ನಗರವನ್ನು ಬಿಟ್ಟು ಸಮೀಪದ ಒಂದು ಹಳ್ಳಿಯಲ್ಲಿ ಒಬ್ಬನಾಗಿ ನಿವಾಸಮಾಡತೊಡಗಿದರೆ . ?'

'ನಗರದ ಹವೆ ಕೆಟ್ಟಿದೆ, ನಿಮಗೆ ಒಳ್ಳೆಯ ಆರೋಗ್ಯ ಸಂಪಾದನೆ ಯಾದೀತು'

'ಹಾಗಲ್ಲ, ನಾನೊಬ್ಬನೇ ಅಲ್ಲ. ಇನ್ನೊಬ್ಬ ಅಡಿಗೆಯವ, ಇಬ್ಬರು ಏನೂ ಅರಿಯದ ಪಶುಗಳು . ಎಂದರೆ ಹೆಂಗುಸರು . . ಮತ್ತೆ ನೀನೇ ಹೇಳು ಯಾರೆಂಬುದನ್ನು ಇಷ್ಟು ಜನರು ಮಾತ್ರ ಏಕಾಂತಸ್ಥಳದಲ್ಲಿ ವಾಸ ಮಾಡಬಹುದೆ? ಎಂದು ನನ್ನ ಪ್ರಶ್ನೆ'

'ಯಾಕೆ ಇರಬಾರದು? ಬ್ರಿಟಿಷರ ರಾಜ್ಯ, ಹಳ್ಳಿಯಾದರೇನು? ಪ್ರಾಣಕ್ಕೆ ಅಪಾಯವಿಲ್ಲ'

'ಆ ಮೂರನೆಯವಳು ಯಾರಾಗಿರಬೇಕು ಎಂಬುದನ್ನು ನೀನೇ ಹೇಳು'

'ಮೂರನೆಯ ಮೂಢಪಶು!'

'ಛೀ! ಹಾಗೆಂದೂ ಅಲ್ಲ ಆ ಹೆಂಗುಸರನ್ನು ಮಾತ್ರ ಪಶುಗಳೆಂದು ಹೇಳಿದೆನಲ್ಲದೆ, ನಿನ್ನನ್ನೂ ಹಾಗೆ ಕರವನೇ?'

ಚಂಚಲೆಯೂ ನಕ್ಕಳು, ಆ ವ್ಯಕ್ತಿಯೂ ನಕ್ಕಿತು. 'ನೀವು ಕೇಳಿದ ಒಗ ಟನ್ನು ನೀವೇ ಬಿಚ್ಚಿದಿರಲ್ಲವೆ? ಇರಲಿ, ನನ್ನನ್ನೂ ಅಲ್ಲಿಗೆ ಎಳೆಯುವುದೇಕೆ? ಎಂದವಳು ಕೇಳಿದಳು.

'ತೋರಿಕೆಯ ಮಟ್ಟಿಗೆ ಹಾಗೆಯೆ. ಆದರೆ, ಹೃದಯವು ಹೃದಯ ದೊಂದಿಗೆ, ಮಾತು ಮಾತಿನೊಂದಿಗೆ, ನಿದ್ರಾ ಜಾಗರಗಳಲ್ಲಿಯೂ ಬೆರೆ

ತಿದ್ದರೆ ಮಾತ್ರ, ಸಹವಾಸದ ಸಂಪೂರ್ಣ ಸುಖಾನುಭವವಾಗುತ್ತದೆ. ಇಲ್ಲ ವಾದರೆ ಸುಖವಲ್ಲಿಂದ? ನಡುನಡುವೆ ಹಬ್ಬದೂಟ, ನಡುನಡುವೆ ಉಪವಾಸ-ಎಂದಾದರೆ ನಾಲಗೆಗೆ ಯಾವ ರುಚಿ ಇದ್ದೀತು ಹೇಳು! ಉಪವಾಸದ ಕಾಲದಲ್ಲಿ ಔತಣದ ನೆನಪಿಸಿಂದಾಗುವ ಕ್ಲೇಷ, ಮೃಷ್ಟಾನ್ನ ಭೋಜನ ಕಾಲದಲ್ಲಿ, ನಿರರ್ಥ ಕವಾದ ತವಕ. ಇವೆರಡರ ನಡುವೆ, ವಸ್ತುವಿನ ನಿಜವಾದ ರುಚಿಯ ಅನುಭವ ವಾಗುವುದೇ ಇಲ್ಲ'

'ಇರಲಿ, ನಾವಿಬ್ಬರೇ ಯಾಕೆ ಇರಬಾರದು?'

'ಕಾರಣವಿಷ್ಟೆ –ಸಮಾಜವೆಂಬ ಸಹಸ್ರ ನಯನದ ಭೂತವಿದೆ ಅದು ಹತ್ತು ದಿಕ್ಕುಗಳಿಂದಲೂ ನೋಡುತ್ತಿದೆ. ಹೀಗಾಗಿ, ನೀನು ನಮ್ಮ ನಗರದ ಮನೆಗೆ ಬರುವುದಾಗಲಿ, ನಾನು ಯಾವಾಗಲೂ ಇಲ್ಲಿಗೆ ಬರುವು ದಾಗಲಿ ಅಸಂಭವವಾಗಿದೆ ನಿನ್ನ ಪ್ರೇಮವು ನನ್ನದೇ ಆದರೂ ಕಳ್ಳ ನಡೆಯಲ್ಲಿ ಬಂದು ಅದನ್ನನುಭವಿಸಬೇಕು. ನಾವಿಬ್ಬರೇ "ಹಳ್ಳಿಯಲ್ಲಿ ವಾಸಿಸುವುದಂತೂ ಇದಕ್ಕಿಂತಲೂ ಭಯಂಕರ. ಹುಡುಗಿಯೊಬ್ಬಳನ್ನು ಕುಲಗೆಟ್ಟ, ನೀತಿಗೆಟ್ಟ, . ಹಾಗೆ ಮಾಡಿದ . ಹೀಗೆ ಮಾಡಿದ... ಎನ್ನಿಸಿಕೊಳ್ಳಬೇಕಲ್ಲವೆ? ಇದು ನಿನಗೂ ಅಪವಾದ ಹೇತು. ನನಗೂ ಅಪ ವಾದ ಕಾರಣ'

' 'ಹುಂ.. '

'ಆದುದರಿಂದ ಒಂದು ಉಪಾಯ ಹೂಡಿದ್ದೇನೆ'

'ಏನದು?'

'ನನಗೆ ಬೇಕಾದವಳು . . . ಬೇಡದಿದ್ದರೂ ಬೇಕಾಗಿ ಪರಿಣಮಿಸಿದವಳು ಒಬ್ಬಳಿಗೆ ಅಸ್ವಾಸ್ಥ್ಯ. ದೀರ್ಘಕಾಲದ ರೋಗ . . . ಗುಣವಾಗುವಂತಿಲ್ಲ . . ಎಷ್ಟು ಮದ್ದುಮಾಡಿ ಆಯಿತೋ ದೇವನೆ ಬಲ್ಲ ಡಾಕ್ಟರರು ಹೇಳುತ್ತಾರೆ–ಇನ್ನೊಂದು ವರ್ಷ ಕಾಲಹರಣ ಮಾಡಬಹುದೆಂದು. ಹವೆಯ ಬದಲಾ ವಣೆಗಾಗಿ ಆಕೆಯನ್ನು ಹಳ್ಳಿಗೆ ಕಳುಹಿಸುತ್ತೇನೆ. ಆಕೆಯ ಶುಶ್ರೂಷಗೆ ಒಬ್ಬಳನ್ನು ಇರಿಸುತ್ತೇನೆ. ರೋಗಿಣಿಯ ಉಪಚಾರಕ್ಕೆ ದಾದಿಯೊಬ್ಬಳು ಬೇಕೆಂದು ಡಾಕ್ಟರರಿಂದ ಹೇಳಿಸುತ್ತೇನೆ. ದಾದಿಯ ಕೆಲಸಕ್ಕೆ ನಿನ್ನನ್ನು ನೇಮಿಸುವಾತ ನಾನೇ! ಇದು ಅಪಮಾನವೆಂದು ಭಾವಿಸಬೇಡ ಚಂಚಲಾ!

ಉಪಾಯವಿಲ್ಲ ನೋಡು. ಸಮಾಜದ ನಿಂದಾಬಾಣಗಳಿಂದ ಆತ್ಮಸಂರಕ್ಷಣ ಮಾಡಿಕೊಳ್ಳುವುದಕ್ಕೆ ಮನುಷ್ಯನಿಗೆ ವಜ್ರಪಂಜರವಿದ್ದರೂ ಸಾಲದು. ತೆಳು ವಸ್ತ್ರದ ನಿಲುವಂಗಿಯಾದರೂ ಬೇಡವೇ? ನೀನೇ ಹೇಳು'

'ಹೌದು'

'ಆ ಎರಡು ಪ್ರಾಣಗಳು . . ಆ ನಿರ್ಗಂಧ ಕುಸುಮಗಳು . ಬೇರೆ ಕುಟೀರದಲ್ಲಿರುವುವು ಅವರ ರೋಗ-ಅವರ ಶುಶ್ರೂಷ ಅವರಿಗೇ. ನೀನು ದಿನಕ್ಕೆರಡು ಸಲ ರೋಗಿಣಿಯನ್ನು ನೋಡಿ ಬಂದರಾಯಿತು. ಬಳಿಯಲ್ಲೆ ಚಿಕ್ಕ ಮನೆಯೊಂದಿರುವುದು . . ತಿಳಿಯಿತೇ?'

'ಅಮ್ಮ ಏನೆನ್ನುತ್ತಾಳೊ'

ಆಗ ಆ ಮುದುಕಿ-ಕಾಶೀಬಾಯಿ, ಓಡಿ ಬಂದು 'ಏನು ಕರೆದಿರೇ?' ಎಂದಳು ಆಕೆ ಕಿವುಡಿಯೆಂದೇ ಪ್ರತೀತಿಯಿದ್ದರೂ ಎಷ್ಟು ಗುಟ್ಟಾಗಿ ಆಡಿದರೂ ತನ್ನ ವಿಷಯವನ್ನು ಕೇಳುವಷ್ಟು ಶ್ರವಣಶಕ್ತಿ ಆ ಕಿವುಡಿನೊಳಗೂ ಇತ್ತು ಆಕೆಗೆ.

'ಹೌದು! ಇವರು ಏನೇನೋ ಆಡುತ್ತಿದ್ದಾರೆ. ನಿನ್ನ ಸಮ್ಮತಿ ಹೇಗಿದೆ; ತಿಳಿಯಬೇಕಷ್ಟೆ' ಎಂದು ಚಂಚಲೆ ಉತ್ತರಕೊಟ್ಟಳು.

ಆಗಂತುಕ ವ್ಯಕ್ತಿ ಎಲ್ಲವನ್ನೂ ವಿವರಿಸಿ ಹೇಳಿದನು. ಇಲ್ಲದ ಆಸೆಯನ್ನು ಆಕೆಯ ಮನಸ್ಸಿನಲ್ಲಿ ಕೆದರಿ ಹಾಕಿದನು ತನ್ನ ಕೈಗೆ ನೋಟುಗಳ ಗಂಟುಗಳೇ ದಿನಂಪ್ರತಿ ಬೀಳುವ ಶುಭನಿರೀಕ್ಷಣೆಯಿಂದ ಅವಳು 'ನಿಮ್ಮ ಇಷ್ಟದಂತೆಯೇ ನನ್ನದು' ಎಂದಳು.

ಈ ಒಂದು ವಿಷಯದಲ್ಲಿ ಮೂರು ಮಂದಿಗಳ ಅಭಿಪ್ರಾಯವೂ ಒಂದಾದ ಮೇಲೆ, ಬೇರೆ ಸಂಗತಿಗಳಲ್ಲಿ ಮುದಿ ಕಾಶಿಬಾಯಿಯ ಇಷ್ಟಾನಿಷ್ಟಗಳನ್ನು ಕೇಳುವ ಕುತೂಹಲ ಇರಲಿಲ್ಲ. 'ನೀವೀಗ ಹೋಗಿರಿ. ಮುಂದಿನ ಸಂಗತಿಗಳು ನಡೆಯುವಾಗ ಎಲ್ಲವನ್ನೂ ತಿಳಿಸುತ್ತೇವೆ. ನಿಮ್ಮ ಒಪ್ಪಿಗೆಯಿಲ್ಲದೆ ಯಾವುದನ್ನೂ ಮಾಡುವುದಿಲ್ಲ' ಎಂದರು.

'ಹಹ್ಹಹ್ಹಾ . . ಹಾಗೆಯೇ ಆಗಲಿ' ಎಂದು ಆ ಮುದಿ ಕಾಗೆ ಆಚೆಕಡೆಗೆ ಹಾರಿತು.

o o o o o o

'ಅವರು ಮತ್ತೇನು ಮಾಡಬೇಕು? ಸ್ಥಿತಿಗತಿಗಳನ್ನು ಕಂಡಲ್ಲವೇ ದೂರುವುದು? ಸಣ್ಣ ಪ್ರಾಯ, ತುಂಬಿದ ದೇಹ, ಬಿಸಿ ನೆತ್ತರು, ಹೆಂಡತಿ ಆಜನ್ಮ ರೋಗಿಣಿ–ಇದ್ದರೂ ಇಲ್ಲದಂತೆಯೆ . . ಇಂಥವರು ಹೀಗೆ ಮಾಡಿದರೆ ತಪ್ಪೇನು?' ಎಂದು ದಾರಿ ತಪ್ಪಿದವರಲ್ಲಿ ಸಹಾನುಭೂತಿ ತೋರಿಸುವವರ ಸದಯಾಂತಃಕರಣಕ್ಕೆ ಶ್ರೀಧರನೂ ಒಬ್ಬ ಸತ್ಪಾತ್ರನು!

ರಾತ್ರಿ ಏಳು ಗಂಟೆಗೆ ಬಂದವನು ಚಂಚಲೆಯ ಮನೆಯಿಂದ ಹೊರಡುವಾಗ ಗಂಟೆ ಒಂಬತ್ತಾಗಿತ್ತು.

ಬೀಳ್ಕೊಡುವ ಸಮಯದಲ್ಲಿ ಚಂಚಲೆ ಬೀದಿಯ ವರೆಗೆ ಹೋದಳು.

'ಇನ್ನೊಮ್ಮೆ ಬೇಕಾದಾಗ ಬರುತ್ತೇನೆ. ವಿಲಂಬವಾದರೆ ತಪ್ಪು ತಿಳುವಳಿಕೆ ಮಾಡಬಾರದು' ಎಂದು ಅಭಯವಿತ್ತು ಶ್ರೀಧರನು ಹೊರಟನು

## ಮೂರನೆಯ ಪ್ರಕರಣ

ಸಾಯಂಕಾಲ ಐದು ಗಂಟೆಯ ಸಮಯಕ್ಕೆ ಶ್ರೀಧರರಾಯನು ಮನೆಗೆ ಬಂದು ಉಪಾಹಾರವನ್ನು ಸ್ವೀಕರಿಸಿದ ಮೇಲೆ 'ಬಾಬೂ!' ಎಂದು ಕೂಗಿದನು. ಬಾಬು ಅಲ್ಲಿರಲಿಲ್ಲ ಪುನಃ ಕರೆದ, ಮತ್ತೂ ಬರಲಿಲ್ಲ. ಮತ್ತೊಮ್ಮೆ ಕೂಗಿದಾಗ ಬೀದಿಯ ತುದಿಯಿಂದ 'ಓ' ಎನ್ನುವ ಸ್ವರ ಕೇಳಿಬಂತು. ರಾಯನು ಬೀದಿಗಿಳಿದ. ಬಾಬು ಎಂಬ ಹೆಸರಿಗೆ ಅಧಿಕಾರಿಯಾದ ಆಳು 'ಏನು ಬುದ್ಧೀ' ಎಂದು ಇದಿರು ನಿಂತ.

'ನನಗೆ ಏನೂ ಬುದ್ಧಿಯಿಲ್ಲ. ನೀನು ಮಾತ್ರ ಬುದ್ಧಿವಂತ' ಎಂದು ರಾಯನು ಸಿಟ್ಟಾದನು.

'ಹಾಗಲ್ಲ ದೇವರೇ! ಅಮ್ಮನವರು ಒಂದು ಚೀಟು ಕೊಟ್ಟು ಕಳುಹಿ

*

ಸಿದರು. ಅದನ್ನು ರಾಮಣ್ಣನವರಿಗೆ ಕೊಡಬೇಕೆಂದರು. ಹಾಗೆ ಹೋಗುತ್ತಿದ್ದೆ'

'ಯಾವ ಅಮ್ಮನವರು? ಮಾರಿಯಮ್ಮನವರೇ?'

'ಅಲ್ಲ ಬುದ್ಧಿ! ಸೀತಮ್ಮನವರು ನಮ್ಮ ವೆಂಕಣ್ಣನವರ ಹೆಂಡತಿ'

'ನೋಡೋಣ ಚೀಟನ್ನು' ಎಂದು ಶ್ರೀಧರ ಕೈನೀಡಿದ.

ಬಾಬು ಸಂದೇಹಪಟ್ಟ. 'ಸಿಟ್ಟಾಗಬಾರದು ದೇವ್ರು. ರಾಮಣ್ಣನವರಿಗೇ ಅದನ್ನು ಕೊಡಬೇಕೆಂದು ಅಮ್ಮನವರ ಅಪ್ಪಣೆ'

'ಯಾವ ಸತ್ತ ರಾಮಣ್ಣನವರೋ!'

'ಖಾವಂದರ ಕಚೇರಿಯ ಗುಮಾಸ್ತರು'

'ಇಲ್ಲಿ ಕೊಡು; ನಾನು ಅವರಿಗೆ ಅದನ್ನು ಕೊಡುತ್ತೇನೆ'

ಬಾಬು ಮತ್ತೂ ಸಂದೇಹಪಟ್ಟ. ರಾಯನು ಕಿಡಿಯಾಗಿ 'ಅದೇನೂ ಅಂಥ ಚಿಂತಾಮಣಿ ಅಲ್ಲವಷ್ಟೆ ಅಮ್ಮನವರು ಪತ್ರವನ್ನು ಕೊಟ್ಟೆಯೋ ಎಂದು ಕೇಳಿದರೆ, ಕೊಟ್ಟೆನೆನ್ನು. ನೀನೆ ಕೊಟ್ಟುದೊ? ಎಂದು ಪ್ರಶ್ನಿಸಿದರೆ ಹೌದೆನ್ನು. ನನ್ನ ಸೇವಕ ನೀನು, ಅಮ್ಮನವರ ಸೇವಕನಲ್ಲ, ಎಂದು ತಿಳಿದಿರಬೇಕು' ಎಂದು ಕೊಂಡೇ ಕೈನೀಡಿದನು

ಬಾಬುವಿನ ನೊಂಟದಲ್ಲಿ ಮುರುಡಿಸಿದ್ದ ಚೀಟು ಹೊರಬಂತು. ಶ್ರೀಧರನು ಅದನ್ನು ತೆಗೆದುಕೊಂಡು 'ಹೋಗೋ ಬಾಬು! ಡಾಕ್ಟರ್ ವೆಂಕೋಬರಾಯರನ್ನು ಕೂಡಲೆ ಬರಹೇಳು' ಎಂದು ಆಜ್ಞೆಕೊಟ್ಟ.

'ಅವರು ಮನೆಯಲ್ಲಿ ಇಲ್ಲದಿದ್ದರೆ?'

'ಕಚೇರಿಗೆ ಓಡು'

'ಕಚೇರಿಯಲ್ಲಿ ಇಲ್ಲದಿದ್ದರೆ?'

'ಎಲ್ಲಿದ್ದಾರೋ ಅಲ್ಲಿಗೆ ಓಡು'

'ಆಯಿತು ಬುದ್ಧೀ' ಎಂದು ಬಾಬು ಡಾಕ್ಟರರ ಮನೆಯ ಕಡೆಗೆ ಧಾವಿಸಿದ. ಶ್ರೀಧರನು ಪತ್ರವನ್ನು ಓದತೊಡಗಿದ.

ಓದಿ ಮುಖ ಕೆಂಪಾಯಿತು. ಮತ್ತೊಮ್ಮೆ ಓದಿದ, ಕಣ್ಣಿನಿಂದ ಕಿಡಿ ಉದುರಿತು

ನನ್ನ ಮನೆಯಲ್ಲಿ ಬಿಟ್ಟಿ ಕೂಳು! ತೊತ್ತಿನ ಬಾಳು! ಅಣ್ಣನ ಮನೆಗೆ

ಹೋಗುತ್ತಾಳೆ! ಮೂವತ್ತೈದು ರುಪಾಯಿ ಸಂಬಳದ ಅಣ್ಣನ ಮನೆಯಲ್ಲಿ ಪಂಚಭಕ್ಷ್ಯ ಪರಮಾನ್ನವನ್ನು ಉಣ್ಣುತ್ತಾಳೆ! ನೋಡೋಣ ಏನು ಮಾಡುತ್ತಾಳೆಂದು ಕಲಿಸುತ್ತೇನೆ ಈ ಮಕ್ಕಳಿಗೆ ಬುದ್ಧಿಯನ್ನು!' ಹೀಗೆ ಆಲೋಚಿಸುತ್ತಿದ್ದ ಶ್ರೀಧರನಿಗೆ ಡಾಕ್ಟರರ ಗಾಡಿ ಸಮೀಪದಲ್ಲಿಯೇ ಬಂದುದು ಗೊತ್ತಾಗಲಿಲ್ಲ ಮೀಸೆತುದಿ ಬಾಯಿಯೊಳಗೆ ಪ್ರವೇಶಿಸಿದ್ದ ಸಮಯವಲ್ಲವೇ?

'What's the matter Mr. Shridhar Rao!' ಎನ್ನುತ್ತಾ ಡಾಕ್ಟರರು ಕೆಳಗಿಳಿದರು.

'ನಮ್ಮಂಥವರ ನಾಲ್ಕು ಕುಟುಂಬಗಳಿಲ್ಲದಿದ್ದರೆ ನಿಮ್ಮ ಹೊಟ್ಟೆ ಹೇಗೆ ತುಂಬೀತು ಹೇಳಿ'

'ನಾಲ್ಕು ಕುಟುಂಬಗಳಿಂದ ನನ್ನ ಹೊಟ್ಟೆ ತುಂಬದು ಶ್ರೀಧರರಾವ್! ಅದು ದೊಡ್ಡ ಹೊಟ್ಟೆ'

ಡಾಕ್ಟರರು ಸತ್ಯವನ್ನೆ ಹೇಳಿದುದು. ಹೊಟ್ಟೆಯ ಭಾರವನ್ನು ಎತ್ತಿಕೊಂಡು ನಡೆಯಲಾರದೆ ಅವರು ಉಬ್ಬಸಪಡುತ್ತಿದ್ದರು ಇಬ್ಬರೂ ಹೂದೋಟದಲ್ಲಿದ್ದ ಒಂದು ಶಿಲಾಸನದಲ್ಲಿ ಕುಳಿತುಕೊಂಡರು.

'ವಿಶೇಷವೇನೂ ಇಲ್ಲ, ನಿತ್ಯಗಟ್ಟಳೆಯೆ ಪಾರ್ವತಿಯ ಅನಾರೋಗ್ಯದ ಕಾರಣದಿಂದ ನಿಮ್ಮನ್ನು ಬರಿಸಿದೆ'

'ಸರಿ, ಬರಿಸಿದುದೇನೋ ಲೇಸು ಪುನಃ ಪುನಃ ಪರೀಕ್ಷಿಸಲೇನಿದೆ ಶ್ರೀಧರರಾವ್? ಕ್ಷಯರೋಗ ಅದು ಬಹಳ ಜಾಗ್ರತೆಯಿಂದ ಶುಶ್ರೂಷೆ ಮಾಡಿದರೆ ಗುಣವಾಗಲೂ ಸಾಕು'

'ಆ ಕುರಿತು ನನಗೆ ಯೋಚನೆಯೆ ಇಲ್ಲ, ಡಾಕ್ಟರರೇ! ಎಂದು ಕ್ಷಯರೋಗವೆಂದು ತಿಳಿದೆನೋ ಅಂದೇ ಆಸೆ ಬಿಟ್ಟಿದ್ದೇನೆ ನಿಮ್ಮಲ್ಲಿ ಕೇಳಲಿರುವ ಮಾತೇ ಬೇರೆ'

'ಏನದು?'

'ರೋಗಿಣಿ ಈ ಮನೆಯಲ್ಲಿರುವುದು ಒಳ್ಳೆಯದೇ? ಹಳ್ಳಿಯ ವಾಸದಲ್ಲಿರುವುದು ಒಳ್ಳೆಯದೇ?'

'ಒಳ್ಳೆಯದೇನು? ಕೆಟ್ಟುದೇನು? ದಿನಹರಣ – ಅಷ್ಟೆ!'

'ಇರುವಷ್ಟು ದಿನ ಸುಖವಾಗಿರಲಿ ಪ್ರಾಣಿ!'

'ನನ್ನಿಂದೇನೂ ಆಕ್ಷೇಪವಿಲ್ಲ!'

'ನೀವು ತಾಯಿಯ ಮುಂದೆ, ಪಾರ್ವತಿಯ ಮುಂದೆ, ಹಾಗೆಯೇ ಹೇಳಬೇಕು'

'ನೀವೇ ನನ್ನಿಂದ ಮದ್ದು ಕೊಡಿಸುತ್ತೀರಿ'

'ಮಿಸ್ಟರ್ ವೆಂಕೋಬರಾವ್! ನಿಜ ಹೇಳುವುದಿದ್ದರೆ, ನನಗೀ ಕುಟುಂಬದ ತಾಪತ್ರಯ ಸಾಕಾಗಿದೆ. ಇದು ಮನೆಯಲ್ಲ, ದನಗಳ ಹಟ್ಟಿ. ದಿನಂಪ್ರತಿ ಜಗಳ, ದಿನಂಪ್ರತಿ ಕಣ್ಣೀರು, ದಿನಂಪ್ರತಿ ಸಿಟ್ಟುಸಿರು ತಾಯಿ ಅತ್ತಿಗೆ ಒಂದು ಕಡೆ, ಪಾರ್ವತಿ ಇನ್ನೊಂದೆಡೆ. ಹೀಗಾಗಿ ಪ್ರತಿದಿನ ರಣಾಗ್ರ (Pitched battle) ತಪ್ಪುವುದಿಲ್ಲ. ಇದನ್ನು ನಿವಾರಿಸುವುದಕ್ಕೆ ಒಂದೇ ಒಂದು ಉಪಾಯವೆಂದರೆ ಅತ್ತೆನಾದಿನಿಯರ ಸೇವೆಯನ್ನು ವಿಭಾಗಿಸುವುದು. ಏನಾದರೊಂದು ನೆವ ಹೇಳಿ ಅತ್ತೆಯನ್ನು ಒಂದು ಧ್ರುವಕ್ಕೆ - ಅತ್ತಿಗೆಯನ್ನು ಇನ್ನೊಂದು ಧ್ರುವಕ್ಕೆ, ಕಳುಹಿಸಿಬಿಡುವುದು. ಹೀಗೆ ಮಾಡದಿದ್ದರೆ ಪಾರ್ವತಿಗೂ ಕ್ಷೇಮವಿಲ್ಲ ನಮಗೂ ಇಲ್ಲ ಒಂದು ದಿನ ಅವಳ ರೋಗ ನಮ್ಮನ್ನು ಅಂಟಬಹುದು, ಅಷ್ಟೆ'

'ಅಯ್ಯೋ! ಇದರ ವ್ಯವಸ್ಥೆಗೆ ನನ್ನಲ್ಲಿ ಕೇಳುವುದೇನಿದೆ?'

'ಅಕ್ಕಸಾಲಿಗ ಕಿವಿ ಚುಚ್ಚಿದರೆ ನೋಯುವುದಿಲ್ಲವಂತೆ. ಒಮ್ಮೆ 'ಸ್ಟೆತೆಸ್ಕೋಪ'ನ್ನು ಇಟ್ಟು ಪಾರ್ವತಿಯನ್ನು ಪರೀಕ್ಷಿಸಿದಂತೆ ನಟಿಸಿರಿ. ಈ ರೋಗಕ್ಕೆ ಮನೆ ಬದಲಾಯಿಸುವುದೆ ಮದ್ದೆಂದು ತಿಳಿಸಿರಿ. ಆಗ ನನ್ನ ಮಾತಿಗೂ ಬೆಲೆ ಬಂದೀತು. ತಾಯಿ ಒಪ್ಪಿಯಾಳು, ಪಾರ್ವತಿ ಸಮ್ಮತಿಸಿಯಾಳು, ಮತ್ತೆಲ್ಲ ನಡೆಯಿಸಿಕೊಂಡು ಹೋಗುವ ಭಾರ ನನಗೆ'

'ಹೊರಡಿ ಹಾಗಾದರೆ! ನಿಮ್ಮ 'ಪ್ರಿಸ್ಕ್ರಿಪ್ಷನ'ನ್ನು ನನ್ನ ಬಾಯಿಯಿಂದ ಉಗುಳಿಬಿಡುತ್ತೇನೆ' ಎಂದು ಡಾಕ್ಟರರು ಎದ್ದರು ಇಬ್ಬರೂ ಪಾರ್ವತಿ ಮಲಗಿದ್ದ ಕೋಣೆಯ ಕಡೆಗೆ ನಡೆದರು

ತನ್ನ ಕಡೆಗೆ ಯಾರೋ ಬರುವ ಸದ್ದಾಗಿ ಪಾರ್ವತಿ ಹಾಸಿಗೆಯಲ್ಲಿಯೇ ಎದ್ದು ಕುಳಿತಳು.

ಶ್ರೀಧರರಾಯನು ಪಾರ್ವತಿಯ ಬಳಿಗೆ ಬಂದು 'ಪಾರ್ವತಿ! ಡಾಕ್ಟರರನ್ನು ಕರೆತಂದಿದ್ದೇನೆ' ಎಂದನು.

'ಏತಕ್ಕಾಗಿ?'

ಆಗ ಡಾಕ್ಟರರೂ ಸಮೀಪಕ್ಕೆ ಬಂದು, ಅಲ್ಲಿದ್ದ ಕುರ್ಚಿಯಲ್ಲಿ ಹಿಡಿಯಷ್ಟು ತಮ್ಮ ದೇಹವನ್ನು ತುರುಕಿಸಿದರು.

'ಈ ದಿನ ಬೆಳಗ್ಗೆ ನೀನು ಕೆಮ್ಮುವಾಗ ಏನೋ ವಿಶೇಷವಿದ್ದಂತೆ ತೋರಿತು'

'ಅಯ್ಯೋ! ಈ ದಿನ ಬೆಳಗ್ಗೆ ನಾನು ಕೆಮ್ಮಲೇ ಇಲ್ಲವಲ್ಲ!'

ಡಾಕ್ಟರರು ಕೋಣೆಯ ಒಂದು ಮೂಲೆಗೆ ಮುಖ ತಿರುಗಿಸಿ ನಗತೊಡಗಿದರು. ಶ್ರೀಧರನಿಗೆ ಗಲಿಬಿಲಿಯಾಯಿತು. ಮುಖ ಕೆಂಪಾಯಿತು.

'ಅಲ್ಲ – ಕೆಮ್ಮಿನಲ್ಲಿ ಅಲ್ಲ ಸ್ವರದಲ್ಲಿ ಏನೋ ಒಂದು ವಿಶೇಷತೆ'

'ಸ್ವರವೂ ಹಾಗೆಯೇ ಈ ದಿನ ಸ್ವಲ್ಪ ಚೆನ್ನಾಗಿದೆ. ನಿನ್ನೆ ಒಂದು ಮಾತಾಡುವಾಗ ಆಯಾಸವಾಗುತ್ತಿತ್ತು. ಇಂದು ಹಾಗಿಲ್ಲ. ಡಾಕ್ಟರರನ್ನು ಕರೆದುದು ಒಳ್ಳೆಯದೇ ಆಯಿತೆನ್ನಿ. ಆದರೆ ನಿಷ್ಕಾರಣವಾಗಿ ಅವರಿಗೆ ಕಷ್ಟ ಕೊಡಬೇಕಾಯಿತಲ್ಲಾ! ಎಂದಿಷ್ಟು ವ್ಯಸನ'

'ನಮಗೇನು ಕಷ್ಟ? ನಮ್ಮ ವೃತ್ತಿಯೆ ಇದು'

ಇಷ್ಟು ಮಾತಾಡಲು ಎಡೆದೊರೆಯದಿರುತ್ತಿದ್ದರೆ, ಕಟ್ಟಿಡಲು ಪ್ರಯತ್ನಿಸುತ್ತಿದ್ದ ಡಾಕ್ಟರರ ನಗು ಎಂದೋ ಬಿಚ್ಚಿಹೋಗುತ್ತಿತ್ತು.

'ಹೇಗೂ ಇರಲಿ, ನನ್ನ ಅಜ್ಞಾನದಿಂದ ಡಾಕ್ಟರರನ್ನು ಕರೆಯಿಸಿದ್ದೇನೆ ಈ ದಿನ ನಾಡಿ ಹೇಗಿದೆಯೆಂದು ಪರೀಕ್ಷಿಸಿ ಹೋಗುತ್ತಾರೆ'

'ನನ್ನ ರೋಗವೇನೆಂದು ಪರಮಾತ್ಮನೊಬ್ಬನೇ ಬಲ್ಲ ಒಬ್ಬೊಬ್ಬರು ಒಂದೊಂದು ಬಗೆಯಾಗಿ ಹೇಳುತ್ತಾರೆ. ಡಾಕ್ಟರರೆಷ್ಟೋ ರೋಗಗಳೂ ಅಷ್ಟೇ ನನ್ನಲ್ಲಿವೆ. ಕಾಲ ಬರುವಾಗ ಡಾಕ್ಟರರೂ ಇಲ್ಲ; ಯಾರೂ ಇಲ್ಲ; ಆಗಲಿ' ಎಂದು ಕೈಯನ್ನು ನೀಡಿದಳು.

ಡಾಕ್ಟರರು ಐದು ನಿಮಿಷ ಪರೀಕ್ಷಿಸಿದಂತೆ ನಟಿಸಿ, 'ಶ್ರೀಧರರಾಯರೇ! ನನ್ನ ಅಭಿಪ್ರಾಯವನ್ನು ಹೇಳಿಬಿಡಲೇ?' ಎಂದು ನಸುನಗುವನ್ನು ಹಿಂದೊತ್ತಿ ಕೇಳಿದರು.

'ಸ್ಪಷ್ಟವಾಗಿ ಹೇಳಿರಿ ವೆಂಕೋಬರಾಯರೇ!'' ಎನ್ನುತ್ತಾ ದೂರದಲ್ಲಿದ್ದ ರಾಧಮ್ಮನನ್ನೂ ಶ್ರೀಧರನು ಒಳಗೆ ಕರೆದನು.

'ನನ್ನ ಅಭಿಪ್ರಾಯದಂತೆ ರೋಗದ ಬಲ ಅರ್ಧಾಂಶ ಇಳಿದಿದೆ. ಬೇಗನ ವಾಸಿಯಾಗಬೇಕಾದರೆ, ಯಾವುದಾದರೊಂದು ಹಳ್ಳಿಯಲ್ಲಿ ಸ್ವಚ್ಛ ವಾಯುವಿನ ಸೇವನೆಯನ್ನು ಮಾಡಿಕೊಂಡು ಸ್ವಲ್ಪಕಾಲ ಇರಬೇಕಾದೀತು. ಹೆಚ್ಚಿನ ಮದ್ದೂ ಅನುಪಾನವೂ ಬೇಕಾಗಿಲ್ಲ. ಈಗ ಇರುವುದೇ ಸಾಕು. ಶುದ್ಧ ವಾಯುಸೇವನೆಯೆಂದರೆ, ಈ ರೋಗಕ್ಕೆ ರಾಮಬಾಣ. ಅದರಲ್ಲಿಯೂ ಹಳ್ಳಿಯ ಹವೆಯೆಂದರೆ ಮತ್ತಷ್ಟು ಲೇಸು. ನಾನು ಹೇಳಬೇಕಾದುದನ್ನು ಹೇಳಿದೆ. ಬೇಸರವುಂಟೇ ಶ್ರೀಧರರಾವ್?'

ಶ್ರೀಧರ: ಬೇಸರವೇನು ಡಾಕ್ಟರ್ ಸಾಹೇಬರೇ! ಇದ್ದುದನ್ನು ಇದ್ದಂತೆ ಹೇಳದೆ ನರಬಲಿ ಕೊಡುವ ಡಾಕ್ಟರರಿದ್ದಾರೆ, ನೀವು ಹಾಗಲ್ಲ. ಸ್ಪಷ್ಟವಾಗಿ ಬಿಚ್ಚಿ ಹೇಳಿದಿರಿ.

ಡಾಕ್ಟರ್:– ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನಮ್ಮ ?

ರಾಧಮ್ಮ ತಾವು ಹೇಗೆ ಹೇಳುತ್ತೀರೋ ಹಾಗೆ!

ಡಾಕ್ಟರ್ – ನನ್ನ ಕೆಲಸವಾಯಿತು, ಈಗ ಹೋಗುತ್ತೇನೆ.

ಶ್ರೀಧರ – ಅಂಗಳದ ತುದಿಯ ವರೆಗೆ ನಾನೂ ಬರುತ್ತೇನೆ.

ಇಬ್ಬರೂ ಹೀಗೆ ಮಾತಾಡಿಕೊಂಡು ನಡೆದರು.

ಡಾಕ್ಟರ್ – ಬದುಕಿದೆ ಶ್ರೀಧರರಾಯರೇ! ಕೋರ್ಟಿನಲ್ಲಿ ಸಾಕ್ಷಿಯಾಗಿ ನಿಲ್ಲುವ ಬಡ ಹಳ್ಳಿ ಕುರುಬನಿಗೂ ಸಾಕ್ಷ್ಯ ಕೊಡುವುದಕ್ಕೆ ಇಷ್ಟು ಕಷ್ಟವಾಗದು. ಅಷ್ಟು ಸಂಕಷ್ಟವಾಯಿತು ನನಗೆ!

ಶ್ರೀಧರ· ನನ್ನನ್ನು ಬದುಕಿಸಿದ ಪುಣ್ಯ ಬಂತು ಡಾಕ್ಟರರೇ ನಿಮಗೆ!

ಡಾಕ್ಟರ್:– ಪುಣ್ಯವೇನು? 'ಫೀಸು' ಬಂತೆಂಬುದು ನಿಜ ಆದರೆ ಒಂದು ವಿಷಯವನ್ನು ತಿಳಿಸಿಬಿಡುತ್ತೇನೆ. ಹಳ್ಳಿಯ ವಾಸದಲ್ಲಿರುವುದೂ ಕೆಟ್ಟದಲ್ಲ ಅಲ್ಲಿ ನೀವು ಒಮ್ಮೊಮ್ಮೆಯಾದರೂ ಇರಬೇಕಾಗುವುದಷ್ಟೆ . . .

ಶ್ರೀಧರ.– ಅವಶ್ಯವಾಗಿ . . .

ಡಾಕ್ಟರ್:– ನೀವು ಮಾತ್ರ ಇದ್ದರೆ ಸಾಲದು

ಶ್ರೀಧರ – ಒಬ್ಬಳು ದಾದಿ ಬೇಕು.

ಡಾಕ್ಟರ್·- ಸಂದೇಹವೇನು? ಅವಳು ಹೇಗಿರಬೇಕೆಂದು ಬಲ್ಲೆಯಾ?

ಶ್ರೀಧರ·- ಹೇಗೆ?

ಡಾಕ್ಟರ್:- ಅಡಗೂಳಜ್ಜಿಯಂತೆ ಇರಬಾರದು ಕಂಡೆಯಾ?

ಶ್ರೀಧರ:- ಮತ್ತೆ ಹೇಗಿರಬೇಕು?

ಡಾಕ್ಟರ್ - ಅದೊಂದನ್ನೂ ಅರಿಯದವನೇ ನೀನು? ಪ್ರಾಯದವಳು, 'ಕೀರವಾಣಿ'; 'ಬಿಂಬೋಷ್ಠೆ', 'ಗೌರಾಂಗಿ', 'ಚಂಪಕ ನಾಸಿಕೆ'! ಇಂಥವಳು ಪರಿಚರ್ಯೆ ಮಾಡಿದರೆ ಮಾತ್ರ, ರೋಗ ಗುಣವಾದೀತು ಬಲ್ಲೆಯಾ?

ಹೀಗೆಂದು ಡಾಕ್ಟರರು 'ಹೊ ಹ್ಹೊ ಹ್ಹೋ' ಎಂದು ನಗತೊಡಗಿದರು. ನಗುವ ರಭಸಕ್ಕೆ ಘಟಾಕಾರದ ಅವರ ಲಂಬೋದರವು 'ಸ್ಪ್ರಿಂಗಿ'ನಲ್ಲಿ ಕೂರಿಸಿದಂತೆ ಕೆಳಗೂ ಮೇಲೂ ಹಾರತೊಡಗಿತು. ಶ್ರೀಧರನೂ ನಕ್ಕು 'ಏನು ಮಹಾರಾಯರೇ! ಸಂಸಾರವೆಂಬ ಬೋನಿನಲ್ಲಿ ಸೆರೆಬಿದ್ದ ಹೆಗ್ಗಣದಂತೆ ಕಿರಿಚುತ್ತಿದ್ದೇನೆ. ನನ್ನನ್ನೂ ತಮಾಷೆ ಮಾಡುತ್ತಿರುವಿರಲ್ಲ' ಎಂದು ಉತ್ತರಕೊಟ್ಟ.

'ಎಲ್ಲ ತಮಾಷೆ ಶ್ರೀಧರರಾವ್! ಇರಲಿ. ನನ್ನ ಇಂದಿನ ನಟನೆ ಹೇಗೆ?' ಎಂದು ಡಾಕ್ಟರರು ಕೇಳಿದರು.

'ತಮಾಷೆಯೇನೆಂದು ತಿಳಿಯದವನೇ ನಾನು? ಈದಿನ ನನ್ನನ್ನೂ ಬದುಕಿಸಿದಿರಿ' ಎಂಬ ಶಿಫಾರಸು ಡಾಕ್ಟರರಿಗೆ ದೊರೆಯಿತು.

ಡಾಕ್ಟರರು ಗಾಡಿಹತ್ತಿ ಬೀಳ್ಕೊಂಡರು ಶ್ರೀಧರನು ಹಿಂದೆ ಬಂದು 'ಗ್ಯಾಸ್‌ಲೈಟಿ'ನ ಬೆಳಕಿಗೆ ಹಿಡಿದು ಹಿಂದಿನ ಪತ್ರವನ್ನು ಇನ್ನೊಮ್ಮೆ ಓದಿನೋಡಿ, ರೋಷಾವೇಶಗೊಂಡನು.

ಇದನ್ನು ಹರಿದು ಬಿಸುಡಲೇ? ಎಂದೊಮ್ಮೆ ತೋರಿತು. 'ಬೇಡ ಒಂದು ಕಾಲಕ್ಕೆ ಉಪಯೋಗವಾಗಬಹುದು' ಎಂದು ಅದನ್ನು ಕಪಾಟಿನೊಳಗ ತನ್ನ ಬೇರೆ ದಾಖಲೆಗಳೊಡನೆ ಭದ್ರವಾಗಿರಿಸಿದನು.

## ನಾಲ್ಕನೆಯ ಪ್ರಕರಣ

ಶ್ರೀಧರರಾಯನಿಗೆ ಒಂದು 'ಕಚೇರಿ'ಯಿತ್ತು. ಬರಿಯ ವ್ಯಾಪಾರಿ ಯಾದವನಿಗೆ ತನ್ನದೊಂದು ಕಚೇರಿಯಿದೆ – ಎನ್ನುವ ದೌಲತ್ತಾದರೂ ಏಕೆ? ಎಂದು ಯಾರೂ ಕೇಳಬಹುದು. ಆತನು ವ್ಯಾಪಾರಿ ಮಾತ್ರವಲ್ಲ. ಲೋಕ ದಲ್ಲಿ ಎಷ್ಟೆಲ್ಲ ಕಂಪೆನಿಗಳಿರಬಹುದೋ ಅವೆಲ್ಲವುಗಳ ಪ್ರತಿನಿಧಿಯಾಗಿದ್ದನು. ಗಿರಣಿ ಬಟ್ಟೆಗಳ, ನೂಲಿನ, ಗಾಜಿನ ಸಾಮಾನುಗಳ, ವಿಮೆಯ - ಎಲ್ಲ ತರದ ಎಲ್ಲ ಕಂಪನಿಗಳ ವ್ಯಾಪಾರ ಪ್ರಾತಿನಿಧ್ಯದಲ್ಲಿ ಭಾಗವಹಿಸಿ, ಧನಸಂಪಾದನೆ ಮಾಡುತ್ತಿದ್ದನಾದ ಕಾರಣ, ಆತನ ಎಲ್ಲ ಚಟುವಟಿಕೆಗಳ ಕೇಂದ್ರಸ್ಥಳವಾಗಿ ಕಚೇರಿಯೊಂದನ್ನು ಏರ್ಪಡಿಸಿದ್ದನು. ನಗರದ ವ್ಯಾಪಾರಿ ಜನಸಮೂಹ ಮಧ್ಯದಲ್ಲಿ, ಎರಡು ನೆಲೆಯ ಒಂದು ಕಟ್ಟಡಕ್ಕೆ ಅವನೆ ಒಡೆಯ. ಗೋಡೆ ಯಲ್ಲಿ ನೇತಾಡುತ್ತಿದ್ದ ಹತ್ತೆಂಟು ಹಲಗೆಗಳು (ಬೋರ್ಡುಗಳು) ಆತನ ವ್ಯವಹಾರ ಕುಶಲತೆಯನ್ನು ಲೋಕಕ್ಕೆ ಸಾರಲಿರುವ ಹೆಗ್ಗುರುತುಗಳಾ ಗಿದ್ದುವು ದಿನಕ್ಕೆ ನೂರಾರು ಜನರ ಆಗಮನ – ನಿರ್ಗಮನಗಳು, 'ಗುಡ್ ಮಾರ್ನಿಂಗು'ಗಳು, 'ಶೇಕ್‌ಹೇಂಡು'ಗಳು, ಕಾಫಿ, ಟಿಫೀನು, ಬಗೆಬಗೆಯ ವಿನೋದ ಚೇಷ್ಟೆ – ಇವುಗಳಿಂದಾಗಿ ಆತನ ಕಚೇರಿಯೆಂದರ ಜೇನುಹುಟ್ಟಿನಂತೆ ಅನವರತವೂ ಝುಂಕಾರದಿಂದ ಕೂಡಿದ್ದಿತು.

ಕಚೇರಿಯಲ್ಲಿ ಮೂರು ನಾಲ್ಕು ಮಂದಿ ಗುಮಾಸ್ತರು, ಇಬ್ಬರು ಕಲಸದ ಆಳುಗಳು. ವ್ಯಾಪಾರವು ಲಾಭದಾಯಕವಾಗಿರದಿದ್ದಾಗ ಶ್ರೀಧರನು ಸ್ವತಃ ಒಳ್ಳೆಯ ದಕ್ಷತೆಯಿಂದ ಮುಂಡದಲ್ಲಿ ಕುಳಿತುಕೊಳ್ಳುತ್ತಿದ್ದನು. ಆದಾಯವು ಅಧಿಕವಾದಂತೆ ದೇಹದ ಬೊಜ್ಜು ಬೆಳೆಯತೊಡಗಿದಂತೆ, ಅದನ್ನು ತನ್ನ ಸಂಬಳ ತಿನ್ನುವ ನೌಕರರಿಗೆ ಬಿಟ್ಟು, ದೇಹದ ಸ್ಥೂಲತೆಯನ್ನು ಹೆಚ್ಚಿಸುವ ಒಂದೇ ಒಂದು ಕೆಲಸವನ್ನು ತಾನಿಟ್ಟುಕೊಂಡು, ಕಚೇರಿಯನ್ನೇರ್ಪ ಡಿಸಿ, ಹತ್ತೆಂಟು ಕಂಪೆನಿಗಳ ಪುರೋಹಿತನಾಗಿ, ಮಲಗುವ ಕುರ್ಚಿಯ ಮೇಲೆ ಒರಗಿಕೊಂಡು 'ಬಢಾ' ಸಾಹೇಬನಂತೆ ಸುಖಮಗ್ನನಾಗಿ ಇರತೊಡಗಿದನು.

ಆದುದರಿಂದಲೆ ಶ್ರೀಧರನಿಗೊಂದು ಕಚೇರಿಯೂ ಅದರಲ್ಲಿ ನಾಲ್ಕಾರು

ಜನ ಗುಮಾಸ್ತರೂ ಇರಬೇಕಾಯಿತು. ಮಾಳಿಗೆಯ ಒಂದು ಬದಿಯಲ್ಲಿ ದೊಡ್ಡದೊಂದು ಕವಾಟು. ಅದರಲ್ಲಿ ಆತನ ಎಲ್ಲ ಲೆಕ್ಕಪತ್ರಗಳು ಅಡಗಿಕೊಂಡಿದ್ದುವು. ಕಿಟಿಕಿಗೆ ಒಂದರಂತೆ ನಾಲ್ಕಾರು ಮೇಜುಗಳು, ಕುರ್ಚಿಗಳು ಒಂದೊಂದಕ್ಕೆ ಒಂದೊಂದು ಮೇಜಿನ ದೆವ್ವ – ಎಂದರೆ ಗುಮಾಸ್ತ. ಕೆಲಸಗಳೇನಾದರೂ ಇರಲಿ, ಇಲ್ಲದಿರಲಿ, ನಿಮಿಷಕ್ಕೆ ಹತ್ತಾರು ಸಲ ಅಡಿಯಾಳುಗಳನ್ನು ಕೂಗಿ ಕರೆಯುವುದು ಶ್ರೀಧರನ ಪದ್ಧತಿ ಸಂಬಳ ತಿನ್ನುವ ಆಳುಗಳನ್ನು ಏನೆಂದರೂ ನಂಬಬಾರದು. ಅವರ ಸ್ವಭಾವ 'ಸಿಮೆಂಟಿ'ನಂತೆ, ಹಸಿ ಹೊಸತನವಿರುವಾಗ ಮೆದುವಾಗಿ ಯಾವ ಕೆಲಸಕ್ಕೂ ಒವಗುತ್ತದೆ, ಗಟ್ಟಿಯಾದೊಡನೆ ಅಂಟಾಗಿ, ಯಜಮಾನರ ಹೊಡೆತಕ್ಕೂ ಹೆದರುವುದಿಲ್ಲ ಎಂಬುದು ಶ್ರೀಧರನ ಸಿದ್ಧಾಂತ. ಆದುದರಿಂದಲೇ ಸೇವಕರ ಸ್ವಭಾವವು ಧೃಷ್ಟತೆಯಾಗಿ ಮಾರ್ಪಡುವ ಅವಕಾಶವನ್ನೇ ಆತನು ಕೊಡಲಾರನು. ನಿಮಿಷಕ್ಕೆ ನೂರು ಸಲ ಅವರನ್ನು ಅಕಾರಣವಾಗಿ ಕರೆವ ಪರಿಪಾಟಿಯೂ ಅದಕ್ಕಾಗಿಯೆ. ತನ್ನ ಕರೆಗಳಿಂದ ಅವರು ಬೇಸರ ಹೊಂದುತ್ತಾರೆಯೆ? ಮಾತುಕತೆಗಳಲ್ಲಿ ಅವಿನಯ ತೋರಿಸುತ್ತಾರೆಯೆ? ಸೇವಕಸೇವ್ಯಭಾವವು ಇರಬೇಕಾದ ತೆರದಲ್ಲಿರುವುದೇ? ಎಂದು ಪರೀಕ್ಷಿಸುವುದಕ್ಕೆ ಯಾವ ಯಾಂತ್ರಿಕ ಸಾಧನವೂ ಇಲ್ಲವಾದ ಕಾರಣ, ಹತ್ತೆಂಟು ಸಲ ಕರೆದು ಮಾತಾಡಿಸಿ, ಮನಸ್ಸಿನ ಒಳಗು ಹೊರಗು ಪಡುಮೂಡುಗಳು ಹೇಗಿವಯೆಂದು ತಿಳಿದು, ತನಗೆ ಅತೃಪ್ತಿಕರವಾದ ಮನೋವ್ಯತ್ಯಾಸವನ್ನು ತೋರಿಸುವವರ ಹೆಸರ ಕೆಳಗೆ ಕಪ್ಪು ಗೆರೆಯೆಳೆಯುವುದು ಅವನದೊಂದು ಸಂಪ್ರದಾಯ. ಹೀಗಾದುದರಿಂದ, ನಾಳೆ ಏನಾಗುವುದೋ ಎಂದು ಆತನ ಕೆಳನೌಕರರು ಯಾವಾಗಲೂ ನಡುಗುತ್ತಿದ್ದರು.

ಈ ದಿನ ಮಧ್ಯಾಹ್ನ ಮೂರು ಘಂಟೆಗೆ 'ಆಫೀಸಿ'ಗೆ ಬಂದು ಬೇರೆ ಬೇರೆ ಕರಣಿಕರಿಗೆ ಬೇರೆ ಬೇರೆ ಕೆಲಸ ಹೇಳಿ, ರಾಮಣ್ಣನನ್ನು ಶ್ರೀಧರನು ತನ್ನ ಬಳಿಗೆ ಕರೆದನು. ರಾಮಣ್ಣ ಇದಿರಲ್ಲಿ ನಿಂತ, ಐದು ನಿಮಿಷ ಸುಮ್ಮನೆ ನಿಂತ. ಅನಂತರ ಬಳಿಯಲ್ಲಿಯೇ ಇದ್ದ ಕುರ್ಚಿಯಲ್ಲಿ ಕುಳಿತ. ಇದುವರೆಗೆ ಯಾವುದೋ ಒಂದು ಗ್ರಂಥಾವಲೋಕನದಲ್ಲಿ ತತ್ಪರನಾಗಿದ್ದು, ರಾಮಣ್ಣನ [illegible] ಲಕ್ಷ್ಯ ಬೀರದವನಿಗೆ, ರಾಮಣ್ಣ ಕುರ್ಚಿಯ ಮೇಲೆ ಕುಳಿತಾಗ

ಆ ಕಡೆಗೆ ದೃಷ್ಟಿ ಬಿತ್ತು. ನೋಡಿ ಸದ್ದಾಗದ ಒಂದು ನಿಟ್ಟುಸಿರನ್ನು ಕರೆದನು. ಹೇಳದೆ ತಾನು ಕುಳಿತುದು ತಪ್ಪೆಂದು ಒಡೆಯನಿಗೆ ಸಿಟ್ಟು ಬಂತೇನೋ ಎಂಬ ಸಂದೇಹ ರಾಮಣ್ಣನಲ್ಲಿ ಉಂಟಾಗಿದ್ದರೂ ಏನು ಬೇಕಾದರೂ ಆಗಲಿ ಎಂಬ ಅಲಕ್ಷ್ಯಭಾವದಿಂದ ಕುಳಿತುಬಿಟ್ಟನು.

'ರಾಮಣ್ಣ!'

'ಏನು ಭಾವ?'

ಇದು ಶ್ರೀಧರನಿಗೆ ಆಕ್ಷೇಪಕರವಾದ ಸಂಬೋಧನೆ. ರಾಮಣ್ಣನ ತಂಗಿ ಶ್ರೀಧರನ ಜ್ಯೇಷ್ಠ ಸೋದರನ ಹೆಂಡತಿಯಾದರೂ, ಆದುದರಿಂದಲೇ ಆತನು ತನಗೆ ಭಾವನಾಗಿದ್ದರೂ, ಈ ಹೇಯ ಸಾಂಸಾರಿಕ ಸಂಬಂಧಗಳ ಸ್ಮರಣೆಯು ವ್ಯಾಪಾರಕ್ಷೇತ್ರದ ಗರ್ಭಗುಡಿಯೊಳಗೆ ಬರಲಾಗದೆಂದು ಶ್ರೀಧರನ ಅಭಿಪ್ರಾಯ. ನೀರಿನಲ್ಲಿ ಮುಳುಗಿದರೂ ಅನಾರ್ದ್ರವಾಗಿರುವ ನಲಿನೀಪತ್ರದಂತೆ, ವ್ಯಾಪಾರ ವ್ಯವಹಾರದಲ್ಲಿರುವವರು ನೊರೆಯ ಹಂಗುಗಳಿಂದ ಅಲಿಪ್ತರಾಗಿರಬೇಡವೇ? ಶ್ರೀಧರನ ಹುಬ್ಬು ಗಂಟಿಕ್ಕಿತು.

ಹೇಳದೆ ಕುಳಿತುದು ತಪ್ಪೆಂದು ತೋರಿಸುವುದಕ್ಕೆ 'ಕುಳಿತುಕೋ ರಾಮಣ್ಣ!' ಎಂದನು ಶ್ರೀಧರ.

ರಾಮಣ್ಣ:- ಮೊದಲೆ ಕುಳಿತುಕೊಂಡೆ.

ಶ್ರೀಧರ - ನಾನು ಹೇಳದಿದ್ದರೇನು? ನೀನು ಕುಳಿತುಕೊಳ್ಳಲು ಯಾರ ಆಕ್ಷೇಪ? ಚೆನ್ನಾಯಿತು; ಇರಲಿ; ನಮ್ಮ 'ಬ್ಯಿಸಿನೆಸ್' ಹೇಗಿದೆ?

ರಾಮಣ್ಣ - ಚೆನ್ನಾಗಿಯೇ ಇದೆ ಭಾವ.

ಶ್ರೀಧರ:- ನಮ್ಮ ಭಾವ ಮಾತ್ರ ಚೆನ್ನಾಗಿದ್ದರೆ ಸಾಲದು. ಖರ್ಚು ಕಳೆದು ಆದಾಯ ಬರುತ್ತದೊ?

ರಾಮಣ್ಣ:- ಬರಬೇಕು. ಲೆಕ್ಕಪತ್ರಗಳು ಆದಾಯವನ್ನು ತೋರಿಸುತ್ತವೆ.

ಶ್ರೀಧರ:- ಚೆನ್ನಾಯಿತು. ಬ್ಯಿಸಿನೆಸ್ ಏನೋ ಚೆನ್ನಾಗಿ ನಡೆಯುತ್ತದೆ. ಆದರೂ ಸಾಲದು ನೋಡು. ಜವಳಿ ಅಂಗಡಿಯು ಲಾಭವನ್ನೆಲ್ಲ ಧ್ವಂಸಮಾಡಿ ಕುಳಿತಿರುತ್ತದೆ. 'ಏಜೆನ್ಸಿ'ಗಳಿಂದ ಸ್ವಲ್ಪ ಮಟ್ಟಿಗೆ ಆದಾ

ಅವುಗಳನ್ನೆಲ್ಲ ಬಲಪಡಿಸಬೇಕು. ಲೋಕದಲ್ಲಿಯೇ ಹಾಗೆ—ವ್ಯಾಪಾರವು ಮುಂದಗತಿಗೆ ಇಳಿದಿರುವುದರಿಂದ, ಈಗಿನ ಕಾಲದಲ್ಲಿ ಅಂಗಡಿ ಮಾರಾಟಕ್ಕೆ ದುಡ್ಡು ಹಾಕುವುದೆಂದರೆ; ಗೊಡ್ಡೆಮ್ಮೆಗೆ ಹುರುಳಿ ಹಾಕಿದಂತೆ.

ರಾಮಣ್ಣ.– ಹೌದು ಭಾವ!

ಶ್ರೀಧರ – ರಾಮಣ್ಣ! ನಿನ್ನಲ್ಲಿ ನನಗೆ ಹೆಚ್ಚಿನ ಆಸೆಯಿದೆ. ಇಂಗ್ಲಿಷನ್ನು ಬಲ್ಲೆ ನೀನು. ಜನರನ್ನು ವಶೀಕರಣ ಮಾಡುವ ಶಕ್ತಿಯಿದೆ ಯೌವನವಿದೆ. ನೀನು ಇನ್ನೂ ಹೆಚ್ಚಾದ ಉತ್ಸಾಹದಿಂದ ಕೆಲಸ ಮಾಡಬೇಕು.

ರಾಮಣ್ಣ – ಸರಿ.

ಶ್ರೀಧರ.– ಕೂಪಮಂಡೂಕದಂತೆ ಬಿದ್ದಲ್ಲಿಯೇ ಬಿದ್ದಿದ್ದರೆ ನಮ್ಮ ಉದ್ಯೋಗವು ವಿಸ್ತರಿಸುವಂತಿಲ್ಲ.

ರಾಮಣ್ಣನಿಗೆ ಯೋಚನೆ ಹಿಡಿಯಿತು.

ಶ್ರೀಧರ – ಸಂದೇಹಪಡಬೇಡ ರಾಮು! ನೀನು ನಾಲ್ಕಾರು ತಿಂಗಳು ಮಾರಾಟಕ್ಕಾಗಿಯೂ 'ವಿಮೆ'ಗೆ ಜನರನ್ನು ಸೇರಿಸುವುದಕ್ಕಾಗಿಯೂ ದೇಶ ಸಂಚಾರ ಮಾಡಬೇಕು ವ್ಯಾಪಾರದೃಷ್ಟಿಯಿಂದ ಮಾತ್ರವಲ್ಲ – ಅನುಭವ ಸಂಪಾದನ ದೃಷ್ಟಿಯಿಂದಲೂ ದೇಶಾಟನವು ನಿನ್ನಂತಹ ತರುಣೋತ್ಸಾಹಿಗಳಿಗೆ ಅವಶ್ಯ. ,ಹತ್ತೂರು ತಿರುಗಾಡಿದವನು, ಹತ್ತಾರು ಕಾಡುಗಳಲ್ಲಿ ಅಲೆದ ಬೇಟೆನಾಯಿಯಂತೆ, ಕುಶಾಗ್ರಮತಿಯಾಗುತ್ತಾನೆ ನೋಡು. ಹಣದ ವಿಚಾರವಾಗಿ ಗೊಡವೆ ಬೇಡ. ನಿನ್ನ ತಿಂಗಳ ಸಂಬಳ ೩೫ ರುಪಾಯಿ, ಗೃಹಕೃತ್ಯಕ್ಕೆ ಸಲುವುದು ಪ್ರಯಾಣದ ವೆಚ್ಚ, ಊಟ, ತಿಂಡಿಗಳ ವೆಚ್ಚ– ಬೇರೆ ಲಾಗುವಾಡು ಖರ್ಚುಗಳು, ಎಲ್ಲ ನನ್ನ ಲೆಕ್ಕಕ್ಕೆ!

ರಾಮಣ್ಣ:– ಹಣದ ವಿಷಯದಲ್ಲಿ ನನಗೆ ಯೋಚನೆಯಿಲ್ಲ ಭಾವ.

ಶ್ರೀಧರ.– ಮತ್ತೆ ಯಾವುದರ ವಿಷಯದಲ್ಲಿ ಯೋಚನೆ?

ರಾಮಣ್ಣ:– ಮನೆ . . .

ಶ್ರೀಧರ:– ನಿನ್ನ ಮನೆ, ನನ್ನ ಮನೆ ಎಂದು ಭೇದವಿಟ್ಟೇನೆ ರಾಮು? ನಾನಿಷ್ಟು ಸಮೀಪದಲ್ಲಿರುವಾಗ ಮನೆಗೇನು ಹೆದರಿಕೆ?

ರಾಮಣ್ಣ:– ಮನೆಯಲ್ಲಿ ನಾನೊಬ್ಬನೇ ಗಂಡು!

ಶ್ರೀಧರ – ನಾವಿಲ್ಲವೆ ಇಲ್ಲಿ? ದಿನಕ್ಕೆರಡು ಬಾರಿ ಅಲ್ಲಿಯ ವರೆಗೆ ಹೋಗಿ ಯೋಗಕ್ಷೇಮ ವಿಚಾರಿಸಿಕೊಂಡು ಬರುತ್ತೇವೆ.

ರಾಮಣ್ಣ - ನನ್ನ ಆರು ತಿಂಗಳ ಮಗುವಿಗೆ ರೋಗ ತಪ್ಪುವುದೇ ಇಲ್ಲ

ಶ್ರೀಧರ – ಡಾಕ್ಟರ್ ವೆಂಕೋಬರಾಯರಿಗೂ ನನಗೂ ಕೊರಳಲ್ಲಿ ಜೀವ ದಿನಂಪ್ರತಿ ನಿಮ್ಮಲ್ಲಿಗೆ ಹೋಗಿಬರಬೇಕೆಂದರೂ ಬಂದಾರು. ನಿಮ್ಮ ಮನೆಯಲ್ಲಿ ಆ ಮುದಿ ಅತ್ತೆಯೂ ಇದೆಯಲ್ಲ. ಹೆಂಡತಿ ಒಬ್ಬಳೇ ಎಂದು ಚಿಂತಿಸುವುದಕ್ಕೂ ಅವಕಾಶವಿಲ್ಲ. ಇಷ್ಟೂ ಸಾಲದಿದ್ದರೆ, ನಮ್ಮ ವೇದೆ ತಿಮ್ಮನನ್ನು ಮನೆ ಕಾಯಲು ಕಳುಹಿಸುತ್ತೇನೆ

ರಾಮಣ್ಣ – ನಿನ್ನ ಉಪಕಾರಕ್ಕೆ ಮಿತಿಯಿಲ್ಲ ಭಾವ! ಆದರೆ ತಂಗಿ ಸೀತಮ್ಮನ ಮತ್ತು ಭಾವನ ವಿಚಾರದಲ್ಲಿ ನೊಂದಿದ್ದೇನೆ.

ಶ್ರೀಧರ – ನಾನಿರುವಷ್ಟು ಕಾಲ ನಿನ್ನ ತಂಗಿಗೇನು ಕೊರತೆ? ನಿನ್ನ ತಂಗಿ ನನ್ನ ತಂಗಿಯೇ.

ರಾಮಣ್ಣ - ಅಣ್ಣನೆಂದೆನಿಸಿಕೊಂಡು ನಾನು ಜೀವಂತನಾಗಿರುವಾಗ ನನ್ನ ಕರ್ತವ್ಯಭಾರವು ಇದ್ದೇ ಇದೆಯಲ್ಲ?

ಶ್ರೀಧರ.– ನಿನ್ನ ಭಾವನ – ವೆಂಕಣ್ಣನ ಯೋಗ್ಯತೆ ನಿನಗೇ ಗೊತ್ತಿದೆ. ಅವನ ದ್ವಿತೀಯ ವಿವಾಹ ಆದುದೇ ನನ್ನಿಂದಾಗಿ ನಿನ್ನ ತಂಗಿಗೆ ಪ್ರಾಯ ವಾಗಿತ್ತು. ವರ ದೊರೆಯಲಿಲ್ಲ ನಾನೇ ನಿಮ್ಮಲ್ಲಿವರೆಗೆ ಬಂದು, ಹುಡು ಗಿಯ ಪ್ರಸ್ತಾವವೆತ್ತಿ, ನೀನು 'ನನ್ನ ಜನ' ಎಂದು ಭಾವಿಸಿ, ಮದುವೆಯ ಯಾವತ್ತೂ ವೆಚ್ಚಗಳನ್ನು ನಾನೇ ವಹಿಸಿ, ಮರ್ಯಾದೆಯನ್ನುಳಿಸಲಿಲ್ಲವೇ? ಮದುವೆಯಾದ ಹುಡುಗಿಯ ಸಮೇತ ನಮ್ಮಲ್ಲೇ ಇದ್ದು, ನೂರಾರು ಕೆಲಸಗಳಲ್ಲಿ ಮನಮೆಚ್ಚುವ ಯಾವುದಾದರೊಂದನ್ನು ಮಾಡಿಕೊಂಡು, ಇಲ್ಲಿಯೆ ಇರಯ್ಯ ಎಂದು ಒತ್ತಾಯಪಡಿಸಿದರೂ ಅವನೇನು ಕೇಳಿದನೆ? ಹಟಮಾರಿಯಾದ ನಿನ್ನ ಭಾವ ಪರಸ್ಥಲಕ್ಕೆ ಪಲಾಯನ ಮಾಡಿದರೂ ನಾನೇನು ಅತ್ತಿಗೆಯನ್ನು ದಾರಿಯಲ್ಲಿ ಬಿಟ್ಟೆನೇ? ಅವಳಿಗೆ ನಮ್ಮಲ್ಲಿ ಯಾವು ದಕ್ಕೆ ಕಡಿಮೆಯಾಗಿದೆ? ಉಡುವುದಕ್ಕೆ ಧರ್ಮಾವರದ ಸೀರೆ ತೊಡುವು ದಕ್ಕೆ, ಕಿವಿ ತುಂಬ, ಕೊರಳು ತುಂಬ, ಕೈ ತುಂಬ ಆಭರಣ. ಮರ್ಯಾದೆಯ

ಊಟ; ಅತ್ತೆ ಅಕ್ಕಂದಿರ ಗೆಳೆತನ . . . ಇದಕ್ಕಿಂತ ಹೆಚ್ಚು ನಾನೇನು ಕೊಡಬಹುದು ರಾಮು?

ರಾಮಣ್ಣ:– ತಂಗಿಗೇನೋ ಬೇಸರು ಒಂದು ವರ್ಷ ನನ್ನೊಡನೆ ಇರಬೇಕೆಂಬ ಆಸೆಯಿದೆ. ನನ್ನ ಹೆಂಡತಿ ಇನ್ನೂ ಅವಳಿಗೆ ಸಂಪೂರ್ಣ ಪರಿಚಿತೆಯಲ್ಲ. ಅತ್ತೆ ಸ್ವಲ್ಪ ಬಾಯಾಳಿ. ಅವರ ಮಧ್ಯದಲ್ಲಿ ಒಬ್ಬಳನ್ನೇ ಬಿಟ್ಟು ಹೋದರೆ, ಆಕೆಗೆ ಆತ್ಮೀಯತೆ ಬರುವುದಾದರೂ ಹೇಗೆ?

ಶ್ರೀಧರ.– ನಿನ್ನದು ಹೆಣ್ಣು ಮನಸ್ಸು ರಾಮು! ಇಂತಹ ಸಣ್ಣ ಯೋಚನೆಗಳನ್ನು ಕಟ್ಟಿಕೊಂಡರೆ, ಲೋಕದಲ್ಲಿ ತಲೆಯೆತ್ತಿ ಬಾಳುವುದು ಹೇಗೆ? ಅಭಿವೃದ್ಧಿ ಹೊಂದಲಾಶಿಸುವ ತರುಣರು ಕ್ಷುದ್ರ ಬಂಧನಗಳನ್ನು ಕಡಿದು ಒಗೆಯಬೇಕು. ಇಂದಲ್ಲದಿದ್ದರೆ, ಇನ್ನಾರು ತಿಂಗಳಲ್ಲಿ ಸೀತಮ್ಮ ನಿನ್ನೊಡನೆಯೇ ಬಂದು ವಾಸಿಸುತ್ತಾಳೆ.

ರಾಮಣ್ಣ.– 'ಸೀತಮ್ಮ ನಿನ್ನಲ್ಲಿರಲಿ' ಎಂದು ಭಾವನ ಕಾಗದ ನನಗ ಬಂದಿದೆ.

ಶ್ರೀಧರ:– ಏನು ರಾಮಣ್ಣ! ಇದು ಸಂದೇಹವೋ ಅಭಿಮಾನವೋ? ತನ್ನ ಹೆಂಡತಿಯನ್ನು ತಾನೇ ಸಂರಕ್ಷಣೆ ಮಾಡದಿದ್ದವನಲ್ಲಿ ಏನಿದ್ದರೇನು?

ರಾಮಣ್ಣ – ಹಾಗೆ ಹೇಳಬಾರದು ಭಾವ! ತನಗೆ ಉದ್ಯೋಗವಿಲ್ಲ, ಕಷ್ಟದಲ್ಲಿದ್ದಾನೆ. ಹೆಂಡತಿಯ ಅಣ್ಣನಿಗೆ, ತಂಗಿಯ ಮೇಲ್ವಿಚಾರಣೆಯನ್ನು ಒಪ್ಪಿಸಿದ್ದಾನೆ. ಇದರಲ್ಲೇನು ತಪ್ಪು?

ಶ್ರೀಧರ:– ತಪ್ಪೇನೂ ಇಲ್ಲ, ನಮ್ಮಲ್ಲಿ ಆಕೆಯ ಸೌಖ್ಯಕ್ಕೆ ಏನು ಕಡಿಮೆಯಾಗಿದೆಯಂತೆ?

ರಾಮಣ್ಣ:– ಕಡಿಮೆಯೇನೂ ಆಗಲಿಲ್ಲ. ಆದರೆ ಹೊರೆಹೊತ್ತ ಹೆಗಲ ಮೇಲೆ ಮತ್ತಷ್ಟು ಹೊರೆ ಹೊರಿಸಬಾರದು.

ಶ್ರೀಧರ – ನಾನು ಹೊರೆಹೊರುವುದಕ್ಕೆ ಇರುವವನು. ವಿಧಿ ನನ್ನ ಹಣೆಯಲ್ಲಿ ಹಾಗೆಯೇ ಬರೆದಿದ್ದಾನೆ ಆಕೆ ಹೆಣ್ಣು ಹೆಂಗುಸು. ಗಂಡಾದರೆ ಏನೂ ಮಾಡಿಯಾನು. ಅಣ್ಣನ ವಿಷಯದಲ್ಲಿ ನನಗೆ ಒಂದಿಷ್ಟೂ ಆಲೋಚನೆ ಇಲ್ಲ. ಸೀತಮ್ಮನ ವಿಷಯದಲ್ಲಿ ಹಾಗಲ್ಲ. ನಾನೇ ಮದುವೆ

ಮಾಡಿಸಿದ ಹುಡುಗಿ. ನನ್ನೊಡನೆ ಇಷ್ಟು ವರ್ಷ ಬಳೆದು ಬಂದವಳು. ಸುಗುಣೆ; ಮಾನವತಿ; ಉದ್ಯೋಗಶೀಲೆ. ಅವಳ ಆರೈಕೆ ನನಗೆ ಹೆಚ್ಚಾಗದು ರಾಮು!

ರಾಮಣ್ಣ :- ಭಾವನಿಗೆ ನೂರು ರುಪಾಯಿಗಳನ್ನು ಕೂಡಲೆ ಕಳುಹಿಸಿ ಕೊಡಬೇಕಂತೆ. ಒಮ್ಮೆ ಬರೆದ; ಅದಕ್ಕೆ ನನ್ನ ಉತ್ತರವಿಲ್ಲ. ಎರಡನೆಯ ಬಾರಿ ಬರೆದ, ಉತ್ತರವಿಲ್ಲ 'ಮರ್ಯಾದೆ ಹೋಗುವ ಕಾಲ ಬಂದಿದೆ, ಹಣ ಬಾರದಿದ್ದರೆ ಆತ್ಮಹತ್ಯೆ ಮಾಡುತ್ತೇನೆ' ಎಂದು ಬರೆಯುತ್ತಾನೆ ಈಗ. ಯಾರ ಕಾಲಿಗಾದರೂ ಅಡ್ಡಬಿದ್ದು, ರುಪಾಯಿ ತೆಗೆದು ಕಳುಹಿಸಬೇಕು. ತಿಂಗಳು ತಿಂಗಳು ಸ್ವಲ್ಪ ಸ್ವಲ್ಪವಾದರೂ ಕೊಟ್ಟು ಸಾಲ ತೀರಿಸಬೇಕು. ಮಂಗಳೂರನ್ನು ಬಿಟ್ಟರೆ ಇದು ಹೇಗಾದೀತು?

ಶ್ರೀಧರ – ಥೂ ರಾಮು! ನಮ್ಮ ಅಣ್ಣನ ಆತ್ಮಹತ್ಯೆಯೆ? ನೂರು ಬಾರಿ ಆತ ಆತ್ಮಹತ್ಯೆ ಮಾಡಿಕೊಂಡುದೂ ಆಯಿತು, ಬದುಕಿದುದೂ ಆಯಿತು. ಆತ್ಮಹತ್ಯ ಮಾಡುವ ಬೆದರಿಕೆ ಹುಟ್ಟಿಸುವುದು ಹಣ ಸುಲಿಯುವ ಸುಲಭೋಪಾಯವೆಂದು ನಿನಗ ತಿಳಿದಿಲ್ಲ. ನೀನು ಮೂಢಜಂತು. ಅಣ್ಣನ ಆತ್ಮಹತ್ಯೆಯ ರೋಗಕ್ಕೆ ನೀನೂ ಮದ್ದುಮಾಡತೊಡಗಿದರೆ, ಕೊರಳುದ್ದ ಸಾಲದಲ್ಲಿ ಮುಳುಗಿ ಒಂದು ದಿನ ನಾನು ಬೇಡವೆಂದರೂ, ನೀನಾಗಿ ಪರ ಸ್ಥಲಕ್ಕೆ ಪಲಾಯನ ಮಾಡುವ ಸಂದರ್ಭ ಬಂದೀತೆಂಬುದನ್ನು ಮರೆಯ ಬೇಡ.

ರಾಮಣ್ಣ.– ನೀವು ಭಾವನ ರೋಗಪರೀಕ್ಷೆ ಮಾಡಿದಿರಿ. ನಾನೂ ಒಮ್ಮೆ ಪರೀಕ್ಷಿಸಿಬಿಡಬೇಕೆಂಬಾಶೆಯಿದೆ

ಶ್ರೀಧರ – ಅಂಥ ಆಶೆಯಿದ್ದರೆ ಅದೂ ನೆರವೇರಲಿ. ನೂರು ರುಪಾಯಿ ಬೆಲೆ ಬಾಳುವ ಆತ್ಮವನ್ನು ಕೊಂಡುಕೊ. ಇತರರ ಕಾಲಿಗೆ ಅಡ್ಡಬಿದ್ದು ಮೂಗು ಮುರಿಯಕೊಳ್ಳಬೇಕಾಗಿಲ್ಲ ನಾನೂ ಆ ನೂರು ರುಪಾಯಿಯ ಆತ್ಮವನ್ನು ಕೊಂಡುಕೊಳ್ಳುವ ಗಿರಾಕಿ ಇಬ್ಬರೂ ಕಳುಹಿಸೋಣ.

ರಾಮಣ್ಣ :– ಹುಂ . . . ಆಲೋಚಿಸುತ್ತೇನೆ.

ಶ್ರೀಧರ :– ಇತರರ ಜೀವನದ ಸುಖದುಃಖಗಳಲ್ಲಿ ಅನವಶ್ಯವಾಗಿ ಪ್ರವೇಶಿಸುವವರಿಗೆ ಅಧಿಕಪ್ರಸಂಗಿಗಳೆಂದು ಹೆಸರು. ನಿಮ್ಮ ಮಟ್ಟಿಗೆ

ನಾನು ಸಮೀಪದ ಬಂಧುವಾದುದರಿಂದ, ಅಥವಾ ನಾನು ಹಾಗೆ ಭಾವಿಸು ವುದರಿಂದ, ಕೇಳಲಾಗದ ವಿಷಯಗಳನ್ನು ಕೇಳಿದೆನೆಂದು ಬೇಸರಿಸಬಾರದು. ನನಗೆ ಅಧಿಕಪ್ರಸಂಗಿಯೆಂಬ ನಾಮಕರಣವಾದರೂ ಚಿಂತೆಯಿಲ್ಲ ನಿಮಗೆ ಕಷ್ಟವಿರುವಾಗ, ಆಮೆಯಂತ ಕೈಕಾಲುಗಳನ್ನು ಮುದುಡಿಸಿಕೊಂಡಿರುವ ಸ್ವಾರ್ಥವನ್ನಿನ್ನೂ ಕಲಿಯಲಿಲ್ಲ ರಾಮು!

ರಾಮಣ್ಣ – ಮತ್ತೇನೂ ಅಲ್ಲ ಭಾವ!

ಶ್ರೀಧರ.– ಮನಸ್ಸಿನಲ್ಲಿರುವುದನ್ನೆಲ್ಲ ಹೇಳಿಬಿಡು

ರಾಮಣ್ಣ – ಗಂಡನು ಪರಸ್ಥಳದಲ್ಲಿರುವಾಗ, ನನ್ನ ತಂಗಿ ನಿಮ್ಮಲ್ಲಿಯೆ ಇರುವುದು ಸರಿಯಲ್ಲವೆಂದು ಕೆಲವರು ಅಲ್ಲಲ್ಲಿ ಆಡಿಕೊಳ್ಳುತ್ತಿದ್ದಾರೆ.

ಶ್ರೀಧರ.– ಸರಿ, ಮುಖ್ಯವಿಷಯವನ್ನೆ ಹೇಳಿದೆ. ಜನರ ಮಾತೇ? ಅಪವಾದ ಹೇಳದೆ ಪಂಚಪ್ರಾಣಗಳನ್ನು ಉಳಿಸಿಕೊಳ್ಳಲಾರದ ಜನರಿದ್ದಾರೆ ಈ ಲೋಕದಲ್ಲಿ. ಯಾರೇನು ಮಾಡಲಾಗುತ್ತದೆ? ಅಂಥ ಜನರಲ್ಲಿ ಹೀಗೆ ಕೇಳು ಅಣ್ಣನಿಗೆ ತಮ್ಮ ಮದುವೆ ಮಾಡಿಸುವುದು ಸರಿಯೆ? ಪಾಲಾಗಿ ಬೇರೆಯಾದ ಅಣ್ಣ ದರಿದ್ರನಾಗಿ ತಮ್ಮನ ಮನೆಗೆ ಬರುವಾಗ, ತಮ್ಮ ಅವನಿಗೆ ಆಶ್ರಯಕೊಡುವುದು ಯುಕ್ತವೆ? ಆ ತಮ್ಮ ಅಣ್ಣನಿಗೆ ಬೇಕಾದಂತೆ ಹಣ ಕಳುಹಿಸುವುದು ನ್ಯಾಯವೆ? ಇದಕ್ಕೆ ಏನೆನ್ನುತ್ತಾರಂತೆ ಆ ಚಾಡಿಗಾರರು? ಮನೆಯಲ್ಲಿ ಮುದಿ ತಾಯಿಯಿದ್ದಾಳೆ. ನನ್ನ ಹೆಂಡತಿಯೆ ಇದ್ದಾಳೆ ಏಳೆಂಟು ಕೋಣೆ ತುಂಬುವಷ್ಟು ಮಕ್ಕಳುಮರಿಗಳಿವೆ. ಹೋಗುವವರು ಬರುವವರು ತಪ್ಪುವುದಿಲ್ಲ. ತಾಪತ್ರಯದ ಇರುಬೆಯಲ್ಲಿ ನೊಂದು ಈ ಮೂವತ್ತೈದು ವರ್ಷದ ಪ್ರಾಯದಲ್ಲಿಯೇ ಮುದುಕನಾಗಿದ್ದೇನೆ . . ದೇವರೇ! ಎಂಥ ದುರ್ಜನರನ್ನು ಈ ಪ್ರಪಂಚಕ್ಕೆ ಕಳುಹಿಸಿದೆ?

ರಾಮಣ್ಣ – ಜನರು ಹೇಳುತ್ತಾರಲ್ಲದೆ, ನಮಗೇನೂ ಈ ತಪ್ಪು ತಿಳಿ ವಳಿಕೆಯಿಲ್ಲ.

ಶ್ರೀಧರ.– ನೀವೂ ತಪ್ಪಾಗಿ ತಿಳಿದರೆ ವ್ಯಸನವಿಲ್ಲ ರಾಮು! ಪರೋಪ ಕಾರ ಮಾಡಬೇಕೆಂದು ಹಾರಿಬೀಳುವವರಿಗೆ ಲೋಕವು ಮಾಡುವ ಪ್ರತೀ ಕಾರವಿದು.

ರಾಮಣ್ಣ.– ಕೇಳಿದ ಮಾತನ್ನು ಹೇಳಿದೆನಲ್ಲದೆ ಕಲ್ಪಿಸಿ ಹೇಳಲಿಲ್ಲ.

ಶ್ರೀಧರ – ಸ್ವತಃ ಅಭಿಪ್ರಾಯವನ್ನು ಕೊಡದೆ, ಪರರ ಮಾತುಗಳನ್ನೆ ಒತ್ತಿ ಹೇಳಿದರೆ ಸಾಕು. ಅರ್ಥವಾಗುವವರಿಗೆ ಆದೀತು ನನ್ನ ಕುರಿತಾಗಿ ಲೋಕವು ಹೇಳುವ, ಕೇಳುವ, ಅಸಂಭಾವ್ಯ, ಸಂಭಾವ್ಯ, ಕಲ್ಪಿತ, ಅಕಲ್ಪಿತ, ವಾಕ್ಯಗಳು ಎಷ್ಟಿವೆಯೊ? ಅವೆಲ್ಲವನ್ನೂ ಬರೆದಿಟ್ಟರೆ, ದೊಡ್ಡ ಪುರಾಣವಾದೀತು. ಲೋಕವನ್ನು ಮರ್ದಿಸಿ ಮುಂದೆ ಬಂದ ಮನುಷ್ಯ ನಾನು. ಲೋಕವೂ ನನ್ನನ್ನು ಮರ್ದಿಸುತ್ತದೆ ತಂತಮ್ಮ ಭಾವನೆಗೆ ಅನುಸಾರವಾಗಿ ಜನರು ಹೇಗೂ ಆಡಿಕೊಳ್ಳಲಿ, ಭಾವಿಸಿಕೊಳ್ಳಲಿ . . ಆ ಪ್ರಸ್ತಾವ ಹಾಗಿರಲಿ . . . ನಾನು ಕೇಳಿದ ಮುಖ್ಯ ಪ್ರಶ್ನೆ ತೀಲಿಹೋಯಿತಲ್ಲ

ರಾಮಣ್ಣ - ವಿಚಾರಿಸುತ್ತೇನೆ

ಶ್ರೀಧರ – ಬೇಗನೆ ಉತ್ತರಕೊಡಬೇಕು ನಾನೂ ವಿಚಾರಿಸತಕ್ಕ ಅಂಶ ಗಳಿವೆ

ರಾಮಣ್ಣ ನಾಳೆಯೆ ಉತ್ತರಕೊಡುತ್ತೇನೆ

ಶ್ರೀಧರ – ಈಗಲೆ ಕೊಟ್ಟರೆ ಮತ್ತಷ್ಟು ಉಪಕಾರ. ವಿಷಯವಿಷ್ಟೇ:– ನನ್ನ ನೌಕರರ ವರ್ಗದಲ್ಲಿ ಬೇಕಾದಷ್ಟು, ಬೇಡದಷ್ಟು ದೇಹಗಳಿವ, ತಲೆಗಳಿಲ್ಲ. ತಿರುಗಿಸಿದರೆ ಯಂತ್ರದಂತೆ ತಿರುಗುವ ಪ್ರಾಣಿಗಳಿವೆ. ಸ್ವತಃ ಕೆಲಸ ಮಾಡ ಬಲ್ಲವರಿಲ್ಲ ಅಂಥವನು ನೀನೊಬ್ಬನೆ ಎಂದು ನನ್ನ ಅಭಿಪ್ರಾಯ. ನಿನ್ನಂಥ ವರು ಇಲ್ಲಿದ್ದು ಮಾಡುವ ಕಾರ್ಯಗಳು ಮುಗಿದಿವೆ ಕಚೇರಿ ಸುವ್ಯವಸ್ಥೆ ಯನ್ನು ಹೊಂದಿದೆ ಹೇಳಿದಷ್ಟು ಕೆಲಸಮಾಡಿ, ಕೊಟ್ಟ ಸಂಬಳವನ್ನು ಕೊಂಡುಹೋಗುವವರು ತಂತಮ್ಮ ಕೆಲಸಗಳನ್ನು ತಪ್ಪದೆ ಮಾಡುತ್ತಿದ್ದಾರೆ. ವ್ಯವಹಾರದಲ್ಲಿ ಜನ್ಮಸಿದ್ಧವಾದ ಕುಶಲತೆಯುಳ್ಳ ಯಾರಾದರೊಬ್ಬನನ್ನು, ಸಂಚಾ ರಕ್ಕೆ ಕಳುಹಿಸಬೇಕೆಂದಿರುವೆನು. ನೀನೆ ಆ ಯಾರಾದರೊಬ್ಬನು ಆದರೆ ಬಹಳ ಸಂತೋಷ ಇಲ್ಲವಾದರೆ . . .

ಮಾತು ಮುಂದುವರಿದು ಎಲ್ಲಿ ಅವಸಾನ ಹೊಂದೀತೆಂಬುದು ರಾಮ ಣ್ಣನ ಕಲ್ಪನೆಯಲ್ಲಿ ಹೊಳೆದು, ಕಣ್ಣಿನಲ್ಲಿ ಗಂಗೋದ್ಭವವಾಯಿತು. 'ಹೇ ಪರಮಾತ್ಮ! ನಾನು ಹುಟ್ಟು ಬಡವ. ಮಾನಾಪಮಾನಗಳ ಪಾಲನ ಪರಿಹಾರ ಗಳು ನಿನಗೆ; ನನಗೇಕೆ? ಇಂದಿನ ಕೂಳನ್ನು ಕೊಡು. ತೃಪ್ತನಾಗಿದ್ದೇನೆ'

ಎಂದು ಮನಸ್ಸಿನಲ್ಲಿಯೆ ಭಾವಿಸಿಕೊಂಡು 'ಭಾವ' ನಿಮ್ಮ ಪ್ರಶ್ನೆಗೆ 'ಲೇದು' ಎನ್ನಲಿಲ್ಲ' ಎಂದನು.

ಶ್ರೀಧರ – ನೀನು ಹಾಗ ಹೇಳಲಾರೆಯೆಂದು ಚೆನ್ನಾಗಿ ಗೊತ್ತಿದೆ. ಪ್ರಾಪಂಚಿಕ ಜ್ಞಾನವಿಲ್ಲವೆ? ಜೀವನದ ಸಂಕಟಗಳನ್ನು ಬಲ್ಲವನಲ್ಲವೇ ನೀನು?

ರಾಮಣ್ಣ– ಯಾವಾಗ ಹೊರಡಬೇಕೋ ಅಪ್ಪಣೆ ಕೊಡು.

ಶ್ರೀಧರ.- ಹೊರಡುವುದಕ್ಕೆ ಅಷ್ಟೇನೂ ಅವಸರವಿಲ್ಲ. ಯಾರು ಹೊರಡುವುದೆಂದು ಬೇಗನೆ ನಿರ್ಣಯವಾಗಬೇಕಿತ್ತು–ಅಷ್ಟೆ. ಸ್ಥಿತಿಗತಿಗಳನ್ನು ಮನೆಯಲ್ಲಿ ವಿವರಿಸು. ಈ ಸಂಚಾರದಿಂದ ನಿನ್ನ ಪುರೋಭಿವೃದ್ಧಿಯಾಗುವುದೆಂಬುದನ್ನು ತಿಳಿಸು ಸನ್ನಾಹ ಮಾಡಿ ಕುಳಿತಿರು. ಬೇಕಾದಾಗ ಹೇಳುತ್ತೇನೆ.

ರಾಮಣ್ಣ – ಆಯಿತು ನನ್ನ ಮಾತಿನಿಂದ ಬೇಸರಿಸಬಾರದು ಭಾವ! ನಮ್ಮ ಅನ್ನದಾತ ನೀನು!

ಶ್ರೀಧರ– ಅನ್ನ ಕೊಡುವವರು ಯಾರು? ಕೊಳ್ಳುವವರು ಯಾರು? ನಾವೆ ನಮ್ಮ ವಿಚಾರವನ್ನು, ನಡತೆಯನ್ನು, ಆತ್ಮವನ್ನು ಉಳಿಸಿಕೊಂಡರೆ, ಅನ್ನವು ತನ್ನಿಂದ ತಾನೇ ಬರುತ್ತದೆ, ಉಳಿಯುತ್ತದೆ ನಿನ್ನಲ್ಲಿ ನನಗ ಬೇಸರವಿಲ್ಲ, ಹೋಗು ನಿನ್ನ ಕಲಸಕ್ಕೆ.

ರಾಮಣ್ಣ ಮುಖ ಕೆಂಪುಮಾಡಿಕೊಂಡು ತನ್ನ ಮೇಜಿನ ಕಡೆಗೆ ನಡೆದ ಶ್ರೀಧರ ಕಚೇರಿಯಿಂದ ಹೊರಟುಹೋದ. ತನ್ನ ಆಲೋಚನಾ ಮಗ್ನತೆಯ ಮುಖಭಾವವನ್ನು ಹೆರರಿಗೆ ತೋರಿಸುವುದೇಕೆಂದು ಎಲ್ಲಿಗೋ ನಡೆದ.

'ಹುಂ . . ಏನೋ ಒಂದು ಒಳಸಂಚು. ನನ್ನ ವಿಷಯದಲ್ಲಿ ಅಪವಾದವಂತೆ. ಸೀತಮ್ಮ ರಾಮಣ್ಣನ ಮನೆಯಲ್ಲಿರಬೇಕಂತೆ. ಹೀಗೆ ರಾಮಣ್ಣ ಹೇಳುವುದು; ಸೀತಮ್ಮ ಬಾಬುವಿನ ಕೈಯಲ್ಲಿ ಗುಪ್ತವಾಗಿ ಪತ್ರ ಕಳುಹಿಸುವುದು. ಇವೆಲ್ಲವಕ್ಕೂ ಪರಸ್ಪರ ಸಂಬಂಧವಿದೆ. ಚಿತ್ರಕಾರನು ತೆಳು ಗೆರೆಗಳನ್ನು ದೂರ ದೂರ ಬರೆದು ಕೊನೆಗೆ ಎಲ್ಲವನ್ನೂ ಸೇರಿಸಿ, ಆಕೃತಿ ರಚನೆಯನ್ನು ಮಾಡುವಂತೆ; ಇವರೂ ಏನೋ ಒಂದು ಒಳಸಂಚಿನ ಪೂರ್ವಪೀಠಿಕೆ

ಯನ್ನು ತಯಾರಿಸುತ್ತಿದ್ದಾರೆ. ಶ್ರೀಧರನೂ ಇದ್ದಾನೆ, ಇವರೂ ಇದ್ದಾರೆ. ನೋಡೋಣ ಏನಾಗುವುದೆಂದು'

ಶ್ರೀಧರನ ಕಾಲುಗಳು ಯಾವುದೋ ಒಂದು ಓಣಿಯ ದಾರಿಯನ್ನು ಹಿಡಿದುವು

# ಐವನೆಯ ಪ್ರಕರಣ

ಡಾ. ವೆಂಕೋಬರಾಯರು ಶ್ರೀಧರನ ಹೆಂಡತಿಗೆ ವಾಸಸ್ಥಾನ ಪಲ್ಲಟದ ದಿವ್ಯೌಷಧವನ್ನು ಹೇಳಿದ ಮೇಲೆ, ಯಾರ ತಿಳುವಳಿಕೆಗೂ ಬಾರದೆ ಹೊಕ್ಕು ಹೊರಟುಹೋದ ಸಾಮಾನ್ಯ ವ್ಯಕ್ತಿಗಳಂತೆ ಯಾವ ವಿಶೇಷತೆಯೂ ಇಲ್ಲದೆ ಹತ್ತೆಂಟು ದಿನಗಳು ಮಾಯವಾದುವು ಈ ಅವಧಿಯಲ್ಲಿ ಗುಪ್ತಗಾಮಿನಿ ಯಾದ ನದೀಪ್ರವಾಹದಂತೆ, ಶ್ರೀಧರನ ಉದ್ದೇಶವು ಒಳಗೊಳಗೇ ಹೃದಯ ಪಾತ್ರವನ್ನು ಕೊರೆಯುತ್ತಿದ್ದಿತು ಡಾ ವೆಂಕೋಬರಾಯರು ತೀರ್ಪನ್ನು ಕೊಟ್ಟಿದ್ದರಷ್ಟೆ? ಇನ್ನು ಮನೆಮುಂದಿಯಲ್ಲಿ ವಿವರಿಸತಕ್ಕ ಸಂಗತಿಗಳೇನಿವೆ? ಹೊರಡುವ ಸಮಯದಲ್ಲಿ 'ಹೊರಡು' ಎಂದರಾಯಿತು ಹೆಂಡತಿ ಹೊರಡು ತ್ತಾಳೆ ಮತ್ತೆ ಯಾರಿಗೆ 'ವಾರಂಟು' ಹೊರಡುವುದೋ ಅವರೂ ಗಂಟು ಮೂಟೆ ಕಟ್ಟುತ್ತಾರೆ. ಮಾತಾಡಿ ತಲೆಹೊಡೆದುಕೊಂಡು ಹೆಂಗುಸರ ಮನ ಸ್ಸನ್ನೊಲಿಸುವ ಪ್ರಯತ್ನ ವ್ಯರ್ಥವಲ್ಲವೇ? ಒಡಂಬಡುವುದಕ್ಕೆ ಅವರಿಗೂ ಒಂದು 'ಮನಸ್ಸಿ'ದೆಯೆ? ಹೀಗೆ ಭಾವಿಸಿ, ಶ್ರೀಧರನು ಸ್ಥಾನಾಂತರಗಮನ ಸಮಾಚಾರ ವನ್ನು ಹೆಂಗುಸರಲ್ಲಿ ಹೇಳಲಿಲ್ಲ ಆದರೆ ಮಾತಾಡುವಾಗ, ಪ್ರಾಸ್ತಾವಿಕವಾಗಿ 'ಹಳ್ಳಿಗೆ ಹೋಗುವ ಮುಂಚೆ ಹಾಗಾಗಬೇಕು, ಹೀಗಾಗಬೇಕು' ಎಂದು ಆಗಾಗ ಹೇಳುತ್ತಾ ಆ ಸಂಗತಿಯು ಅವಶ್ಯಂಭಾವಿ, ಆಕ್ಷೇಪಾತೀತ' ಎಂಬು ದರ ಸೂಚನೆಯನ್ನು ಕೊಡುತ್ತಿದ್ದನಷ್ಟೆ. ಹೀಗೆ ಕಳೆದ ಹತ್ತು ದಿವಸದ ವಿದ್ಯ ಮಾನಗಳನ್ನು ಪೃಥಕ್ಕರಿಸಿ, ಅವ್ಯಕ್ತರಹಸ್ಯವಾಗಿ ಕಂಡುಬಂದ ವಿಷಯವನ್ನು ಹೊರಗ ಹಾಕುವುದಿದ್ದರೆ, ಶ್ರೀಧರನಿಗೆ ತನ್ನತ್ತಿಗೆಯ ಕುರಿತು ಏನೋ ಒಂದು

ಬಗೆಯ ಹೃದಯಪರಿವರ್ತನವಾಗಿದ್ದುದು, ಮಾತಿನಲ್ಲಿ, ನೋಟದಲ್ಲಿ ಕಂಡು ಬರುತ್ತಿದ್ದಿತು; ಎನ್ನಬಹುದು. ಆದರೂ ಇದು ಚರ್ಚಾಸ್ಪದ. ಪ್ರಮಾಣವು ಪ್ರತ್ಯಕ್ಷವಲ್ಲ, ಅನುಮಾನ ಮಾತ್ರ!

ಒಂದು ದಿನ ಮನೆಯ ಪಡಸಾಲೆಯೊಳಗ, 'ಕ್ಯಾಬಿನೆಟ್ ಮೀಟಿಂಗು' (ಮಂತ್ರಿಗಳ ಆಲೋಚನಾ ಸಭೆ) ನಡೆಯಿತು ರಾಧಮ್ಮ ಅಗ್ರಾಸನಾರೂಢ ಯಾಗಿದ್ದಳು ಆಕೆಯ ಕಾರ್ಯಮಂತ್ರಿ ಪಾರ್ವತಿ, ಹೇಗೋ ರುಗ್ಣಶಯ್ಯೆ ಯಿಂದೆದ್ದು ಬಂದು, ಬಳಿಯಲ್ಲಿಯೆ ಕಾಲ್ಮಣೆಯ ಮೇಲೆ ಕುಳಿತುಕೊಂಡಿದ್ದಳು ಸೀತಮ್ಮ ನೆಲದ ಮೇಲೆ ಉದ್ದವಾಗಿ ಕಾಲುಚಾಚಿ ಏನೋ ಒಂದು ಹೊಲಿಗೆಯ ಕೆಲಸದಲ್ಲಿ ಮಗ್ನಳಾಗಿದ್ದಳು ಚರ್ಚಿಸಿದ ವಿಷಯ—ಪಾರ್ವತಿಯ ಗೃಹಾಂತರ ವಾಸ.

ರಾಧಮ್ಮನಿಗ ಕರಿಕರಿ ಹಿಡಿದಿತ್ತು. ಪಾರ್ವತಿಯೊಬ್ಬಳೇ ಹಳ್ಳಿಗೆ ಹೋಗಿ ತಿಂಗಳೋ ವರ್ಷವೋ ಇರಬೇಕಾಯಿತಲ್ಲ? ನಂಗಡಿತಿಯಾಗಿ ಹೋಗುವುದು ಯಾರು? ತಾನೇ ಹೋಗಲೆ? ನಗರದ ಮನೆಯು ಕರ್ಣಧಾರ ನಿಲ್ಲದ, ಸಮುದ್ರ ತರಂಗಗಳಿಂದ ಘಾತಿತವಾದ ನೌಕೆಯಂತೆ ನುಚ್ಚಾಗಿ ಮುಳುಗಬಹುದು. ಸೀತಮ್ಮನಿಗೆ ಆ ಕಾರ್ಯವನ್ನು ನಿರ್ವಹಿಸಲು ಸಾಧ್ಯವೇ? ಇಲ್ಲ. ಆಕೆ ಇದುವರೆಗೆ ಒಂದು ದಿನವಾದರೂ ಸ್ವತಂತ್ರವಾಗಿ ಹುಟ್ಟುಹಿಡಿದವಳಲ್ಲ. ಸಾಲದುದಕ್ಕೆ ಮಕ್ಕಳುಮರಿಗಳ ಕೋಟಲೆ ಹತ್ತೆಂಟು ಮರಿಗಳನ್ನು ಸಾಕಿ ಸಲಹುವುದು ಹಳೆ ಹೇಟೆಯಾದ ರಾಧಮ್ಮನಿಗೆ ಶಕ್ಯವಲ್ಲದೆ ಸೀತೆಗಲ್ಲ.

ಹಾಗಾದರೆ ಮಾಡುವುದೇನು?

ಶ್ರೀಧರನನ್ನು ಹೇಗಾದರೂ ಮಾತಾಡಿಸಿ ಈ ಹುಚ್ಚು ಆಲೋಚನೆಯಿಂದ ನಿವರ್ತನಗೊಳಿಸುವುದೇ? ಅದೆಂದೂ ಸಾಧ್ಯವಲ್ಲ. ಅವನ ಮಾತು 'ಪ್ರಿವಿ ಕೌನ್ಸಿಲಿ'ನ ತೀರ್ಪು. ಅದನ್ನು ಆಕ್ಷೇಪಿಸುವ ಅಧಿಕಾರ ಯಾರಿಗೆ? ಧೈರ್ಯ ಯಾರಿಗೆ?

ಜಟಿಲವಾದ ಪ್ರಶ್ನೆ. ತಲೆತುರಿಸಿದರೂ ಬಗೆಹರಿಯುವುದಿಲ್ಲ. ಸೀತಮ್ಮ ತಾನಾಗಿ 'ಪಾರ್ವತಮ್ಮನ ಜೊತೆಗೆ ನಾನಿದ್ದೇನೆ' ಎಂದಳು.

ರಾಧಮ್ಮನ ಕಣ್ಣಿನಲ್ಲಿ ನೀರು ತುಂಬಿತ್ತು, ತುಟಿ ನಡುಗಿತು. 'ಮಗಳೇ!' ಎಂದಿಷ್ಟೇ ಹೇಳಿದಳಲ್ಲದೆ ಬೇರೆ ಮಾತಾಡಲಿಲ್ಲ.

ಪಾರ್ವತಿಯ ಕಣ್ಣೂ ಒದ್ದೆಯಾಯಿತು ಏನು ಹೇಳುವುದಕ್ಕೂ ಆಕೆಗೆ ಬರಲಿಲ್ಲ.

ರಾಧಮ್ಮ ಹೇಳಿದಳು – ಮುದಿಗೂಗೆಯಾದ ನಾನು, ಯಾರೂ ಇಲ್ಲದ ನಾಡಿನಲ್ಲಿ ವಾಸಮಾಡುವುದಕ್ಕೆ ಭೀತಿಪಡುವುದರಿಂದ ನೆವವೊಡ್ಡಿ ನಿನ್ನನ್ನು ನೂಕುತ್ತೇನೆಂದು ಭಾವಿಸಬೇಡ ತಾಯಿ. ನಮ್ಮ ಸಂಸಾರದ ಒಳಗು ಹೊರಗು ನಿನಗೆ ಗೊತ್ತಿದೆ ನಿನ್ನ ಗಂಡ ಎಂತಹ ಸಿಡುಕಿನವನೆಂದೂ ನಿನಗೆ ಗೊತ್ತಿದೆ. . ಮತ್ತೆ ಗದ್ಗದದಲ್ಲಿ ಮಾತು ಅಡಗಿಹೋಯಿತು

ಸೀತಮ್ಮ – ಅವರಿಗೆ ಕಾಗದ ಬರೆದು ತಿಳಿಸುತ್ತೇನೆ. ನಿಮ್ಮ ಒಪ್ಪಿಗೆಯಿಂದ ಹೋಗಿರುವನೆಂದು ತಿಳಿಸುತ್ತೇನೆ.

ಪಾರ್ವತಿ – ಅತ್ತೇ! ನಾವಿಬ್ಬರೂ ಜೊತೆಹಕ್ಕಿಗಳಂತಿರುತ್ತೇವೆ. ಮತ್ತೆ ದೇವರಿದ್ದಾನೆ.

ಈ ಮೂವರ ಹೃದಯದಲ್ಲಿಯೂ ಏನೋ ಒಂದು ಮುಳ್ಳು ನಾಟಿದ್ದಿತೆಂದೂ, ಅದನ್ನು ಕಿತ್ತೆಸೆಯುವುದು ದುಸ್ತರವಾಗಿ, ವೇದನೆಯಿಂದಲೇ ಇಂತಹ ಮಾತು ಅವರ ಬಾಯಿಯಿಂದ ಹೊರಟಿತೆಂದೂ ಯಾರಿಗೂ ಬೋಧೆಯಾಗದಿರದು ಆ ಶಲ್ಯವಾದರೂ ಏನು?

ರಾಧಮ್ಮ ಹೇಳಿದಳು.– ತಾಯಿ! ನೀನು ಈ ಯುಗದ ಸೀತೆಯಲ್ಲ ಆ ಯುಗದ ಸೀತೆ!

ಸೀತಮ್ಮನಿಗೆ ದೊಡ್ಡದೊಂದು ನಿಟ್ಟುಸಿರು. ಪಾರ್ವತಿಯ ಕಣ್ಣಿನಲ್ಲಿ ಜಲಪಾತ.

ಆಗ ಬಾಗಿಲು ತೆರೆಯಿತು. ಹಿಂದೆ ನಿಂತು ಕೇಳುತ್ತಿದ್ದ ಶ್ರೀಧರ ಬಿರುಗಾಳಿಯಂತೆ ಒಳನುಗ್ಗಲು, ಎಲ್ಲರೂ ಸ್ತಬ್ಧರಾದರು.

ಶ್ರೀಧರ:– ತಾಯಿ! ನೀವು ಯಾರು ಬಂದರೂ, ಯಾರು ಬಾರದಿದ್ದರೂ, ನಾವು ಹಳ್ಳಿಯ ವಾಸವನ್ನು ಕೈಕೊಳ್ಳುವುದು ಖಂಡಿತ ನಿಮ್ಮಿಂದಲೆ ಕಾಲಚಕ್ರವು ತಿರುಗುವುದೆಂದೂ, ನನ್ನ ಗೃಹಕೃತ್ಯವು ಸಾಗುವುದೆಂದೂ ಭಾವಿಸ

ಬೇಡಿರಿ. ಈ ಮಂಡೋದರಿ ಇನ್ನೂ ಸಾಯದೆ ಇದ್ದಾಳೆ. ಹೇಗಾವರೂ ಬದುಕಿಸಬಹುದೋ ನೋಡುತ್ತೇನೆ.

ಪಾರ್ವತಿ:– 'ಹೌದು; ನಾನಿನ್ನೂ ಸಾಯಲಿಲ್ಲ' ಎಂದಳು.

ನೀರು ಹೊಯಿದರೆ ಚೆದರುವ ಇರುವೆ ಸಾಲಿನಂತೆ, ಶ್ರೀಧರನ ಗೃಹ ಮಂತ್ರಿಗಳು ಎಲ್ಲಿಗೋ ಮಾಯವಾದರು.

'ನನ್ನ ಉದ್ದೇಶಗಳು ನೆರವೇರುವ ಸುಲಕ್ಷಣಗಳಿವೆ' ಎಂದು ಮನಸ್ಸಿನಲ್ಲಿಯೆ ಭಾವಿಸಿಕೊಂಡು ಶ್ರೀಧರ ಮೀಸೆಕಡಿಯುತ್ತಾ ತನ್ನ ಕೋಣೆಗೆ ನಡೆದ.

## ಆರನೆಯ ಪ್ರಕರಣ

ಅದೇ ದಿನ ಚಂಚಲೆಯ ಮನೆಯಲ್ಲಿ ಭಾರೀ ಗದ್ದಲ. ಮೋಹನರಾಯ-ಚಂಚಲೆಯ ಸೋದರಮಾವನ ಮಗ-ಬಂದಿದ್ದನು. ಚಂಚಲೆ ದಾದಿಯಾಗಿ ಶ್ರೀಧರನೊಂದಿಗೆ ಹೋಗುತ್ತಾಳೆಂಬುದರ ವಾಸನ ಅವನ ಮೂಗಿಗೆ ಹೇಗೋ ಅಡಸಿತ್ತು. ಈ ಸಂಭವವನ್ನು ಸಾಧ್ಯವಾದರೆ ತಡಯಬೇಕೆಂಬ ಸಂಕಲ್ಪದಿಂದಲೆ ಅವನಿಲ್ಲಿಗೆ ಬಂದುದು

ಮೋಹನ.– ಏನು ಚಂಚಲೆ? ನೀನು ತಪ್ಪು ಕೆಲಸಕ್ಕೆ ಧುಮುಕುತ್ತಿರು ವೆಯಲ್ಲಾ!

ಚಂಚಲೆ.– ತಪ್ಪೇನು? ಹೇಗೂ ಪರಸೇವೆಯಿಂದ ಕಾಲಕ್ಷೇಪ ಮಾಡುವ ಹೆಣ್ಣಾದ ನನಗೆ ತಪ್ಪೇನು? ಒಪ್ಪೇನು? ಹೊಟ್ಟೆಗೆ ಅನ್ನಕೊಡುವ ಯಾವ ಉದ್ಯೋಗವೂ ನನಗೆ ಹೇಯವಲ್ಲ.

ಮೋಹನ:– ಅನ್ನವೂ! ಅದು ಕದ್ದರೆ ಸಿಕ್ಕುವುದಿಲ್ಲವೆ? ಜೋಳಿಗೆ ಹಿಡಿದರೆ ದೊರೆಯುವುದಿಲ್ಲವೆ? ಕಾಗೆ ನಾಯಿಗಳು ಹೊಟ್ಟೆ ಹೊರೆದುಕೊಳ್ಳುವುದಿಲ್ಲವೆ? ಅದಕ್ಕಾಗಿ ಮಾನ ಕಳೆದುಕೊಳ್ಳಬೇಕೆ?

ಚಂಚಲೆ:– ನೀತಿಪಂಡಿತರು, ತಮ್ಮ ಬುದ್ಧಿವಾದದ 'ಇಂಜೆಕ್ಷನ್

ಕೊಟ್ಟು ಅನ್ನವಿಲ್ಲದೆ ಸಾಯುವ ಎಷ್ಟು ಮಂದಿಯನ್ನು ಬದುಕಿಸಿದ್ದಾರೆ ಹೇಳು.

ಮೋಹನ – ಹೊಟ್ಟೆ ತುಂಬಿಸುವುದಕ್ಕೆ ಮಾತ್ರ ಮನುಷ್ಯನು ಹುಟ್ಟಿದುದಾದರೆ, ಅದಕ್ಕೇನು ಕಷ್ಟ?

ಚಂಚಲೆ – ಕಷ್ಟವೂ ಇಲ್ಲ, ಸಾಧ್ಯವೂ ಇಲ್ಲ.

ಮೋಹನ – ನಿನ್ನ ಸ್ಥಿತಿಯ ಹುಡುಗಿಯರು ಹೊಣೆಗಾರಿಕೆಯರಿಯದೆ, ಜನರು ಏನೆಂದಾರೆಂಬುದನ್ನು ವಿಚಾರಿಸದೆ, ಮಾನಾಪಮಾನಗಳೇನೆಂಬುದನ್ನು ಲಕ್ಷಿಸದೆ, ಪರಪುರುಷನೊಡನೆ ವಾಸಮಾಡುವುದೆಂದರೇನು?

ಚಂಚಲೆ ಸ್ವತಂತ್ರಳಾಗಿ ಎಲ್ಲಿದ್ದರೇನು ಮೋಹನ? ಪರಪುರುಷನೆಂದರೆ ಸಿಂಹನಲ್ಲ, ಹುಲಿಯಲ್ಲ ಅವನೂ ಒಬ್ಬ ಮನುಷ್ಯ.

ಮೋಹನ ಸ್ವಾತಂತ್ರ್ಯವೆಂದರೆ ಏನೆಂದು ಹೇಳು ಚಂಚಲೆ! ಅದು ಸ್ವಚ್ಛಂದವರ್ತನವೆ? ಮನೋವಾಸನೆ ಒಯಿದಲ್ಲಿಗೆ ಓಡುವುದೆ? ಕುಣಿಸಿದಂತೆ ಕುಣಿಯುವುದೇ?

ಚಂಚಲೆ - ನನ್ನ ಈ ಉದ್ಯೋಗವನ್ನು ನೀನು ತಪ್ಪಾಗಿ ತಿಳಿದಂತೆ ತೋರುತ್ತದೆ. ಕುಲಗೆಟ್ಟಿರುವುದಕ್ಕೆ ನಾನಲ್ಲಿಗೆ ಹೋಗುವುದಲ್ಲ

ಮೋಹನ – ಮತ್ತೆ?

ಚಂಚಲೆ – ಸಾಯಲಿರುವ ಹೆಂಗುಸೊಬ್ಬಳನ್ನು ಶುಶ್ರೂಷೆ ಮಾಡಿ ಬದುಕಿಸುವುದೂ ಲೋಕೋಪಕಾರವಲ್ಲವ?

ಮೋಹನ – ದುರುದ್ದೇಶವನ್ನು ಮುಚ್ಚಿಡುವ ವಾಗ್ಜಾಲ ನನಗೆ ಬೇಡ ಚಂಚಲೆ! ಸ್ಪಷ್ಟವಾಗಿ ಹೇಳು . ನೀನು ಇದು ವರೆಗೆ ಇಂತಹ ಲೋಕೋದ್ಧಾರದ ಕೆಲಸವನ್ನು ಎಷ್ಟು ಮಾಡಿದೆ? ಇದು ವರೆಗ ಎಷ್ಟು ಜನರ ಆರೈಕೆ ಮಾಡಿ ಎಷ್ಟು ಪ್ರಾಣಗಳನ್ನು ಉಳಿಸಿರುವೆ? ಯಮನೊಡನೆ ಖಾಡಾಖಾಡಿ ಕಾಳಗ ಮಾಡಿ ಎಷ್ಟು ಜೀವಗಳನ್ನು ಬಿಡಿಸಿರುವ?

ಚಂಚಲೆ – ಇದು ವರೆಗೆ ಮಾಡದಿದ್ದುದನ್ನು ಇನ್ನು ಮಾಡಬಾರದೆಂದು ದೈವಶಾಸನವೆ?

ಮೋಹನ – ನೀಚ ಭಾವನೆಯಿರುವವಳ ನಾಲಗೆಯ ಮೇಲೆ ದೇವರ ಹೆಸರು ಶೋಭಿಸುವುದಿಲ್ಲ. ದೇವರ ಹೆಸರಿಗ ಕಾಸಿನ ಬೆಲೆಯನ್ನು ಈ ಕಲಿ

ಯುಗದಲ್ಲಿ, ಯಾರು ಕೊಡುತ್ತಾರೆ? ನಮ್ಮ ಮನಸ್ಸಿನೊಳಗೆ ಇರುವ ದುರಭಿಲಾಷೆಯನ್ನು ಪೂರೈಸುವುದಿದ್ದರೆ, ನಮಗೆ ದೇವರು ಬೇಕು, ಇಲ್ಲವಾದರೆ ಬೇಡ. ದೇವರ ಮಹಿಮೆಯನ್ನು ನೀನೂ ತಿಳಿದಿರಬಹುದು, ನಾನೂ ಸ್ವಲ್ಪ ಮಟ್ಟಿಗೆ ಅರಿತಿದ್ದೇನೆ.

ಚಂಚಲೆ:– ನನ್ನ ಕೆಲಸಕ್ಕೆ ವಿಘ್ನ ತರಬೇಕೆಂಬುದೇ ನಿನ್ನ ವ್ರತವಲ್ಲವೆ?

ಮೋಹನ:– ನಿನ್ನಂಥ ಪರೋಪಕಾರಿಣಿಯರ ನಿಶ್ಚಿತ ಸಂಕಲ್ಪವನ್ನು ಮುರಿಯುವ ಶಕ್ತಿ, ನನ್ನಂಥ ಕ್ಷುದ್ರ ಕ್ರಿಮಿಗಳಿಗೆ ಎಲ್ಲಿಂದ ಬರಬೇಕು ಹೇಳು. ಆದರೂ ಎಚ್ಚರಿಸುತ್ತೇನೆ— ನೀನು ಶ್ರೀಧರನ ಹೆಂಡತಿಯ ಸೇವೆಗಾಗಿ ಹೋಗುವುದಲ್ಲ!

ಚಂಚಲೆ – ನಾಲಗೆಯ ಮೇಲೆ ಅಂಕೆಯಿಟ್ಟು ಮಾತಾಡು ಮೋಹನ!

ಮೋಹನ:– ನಿನಗೆ ಈ ಮಾತನ್ನು ಕೇಳಿ ಈಗ ಸಿಟ್ಟು ಬರಬಹುದು. ಹಾಳಾಗುವ ಜನರಿಗೆ ಅಂಥ ಕೋಪ ಬರಲೇ ಬೇಕು. ಭವಿಷ್ಯವನ್ನು ಹೇಳಿಬಿಡುತ್ತೇನೆ. ಹೊಟ್ಟೆ ತುಂಬಿಸುವ ಉದ್ದೇಶದಿಂದ ಹೋಗುವ ನಿನ್ನ ಹೊಟ್ಟೆಗೂ ಆತ್ಮಕ್ಕೂ, ಆತನು ಬಲವಾಗಿ ಒದೆಯುತ್ತಾನೆ. ಜಾಗ್ರತೆ! ಆ ಒದೆತವನ್ನು ಹೊಂದಿ ಈ ಪ್ರಪಂಚದಲ್ಲಿ ಮುಖ ತೋರಿಸಿಕೊಂಡಿರುವುದು ನಿನಗೆ ಅಸಾಧ್ಯವಾದೀತು.

ಚಂಚಲೆ!– ಯಾವುದರಿಂದ ಹೇಳಿದೆ?

ಮೋಹನ.– ಆತನ ಸ್ವಭಾವವು ಗೊತ್ತಿರುವುದರಿಂದ.

ಚಂಚಲೆ:– ನಿನಗೇನು ಗೊತ್ತು?

ಮೋಹನ.– ಹತ್ತೆಂಟು ಹುಡುಗಿಯರಿಗೆ ನರಕದ ದಾರಿಯನ್ನು ತೋರಿಸಿದ ಪುಣ್ಯಾತ್ಮನೀತ!

ಚಂಚಲೆ.– ಜನರು ಏನೇನೋ ಹೇಳಬಹುದು.

ಮೋಹನ.– ತನ್ನ ಅತ್ತಿಗೆಯ ಮೇಲೆ ಕಣ್ಣಿಟ್ಟ ಲಜ್ಜೆಗೇಡಿಯೀತ!

ಚಂಚಲೆ:– ಈ ಮಾತು ಒಂದರಿಂದಲೇ ಅಪವಾದವೆಲ್ಲ ಸುಳ್ಳೆಂಬುದು ಸಿದ್ಧವಾಗುತ್ತದೆ. ಸುಖಸಾಮಗ್ರಿಗಳು ಹೊರಗೆ ನಿರವಾಯವಾಗಿ ದೊರೆಯುವಾಗ ಯಾವ ಮೂಢಾತ್ಮನು ಮನೆಯೊಳಗೆ ಇಂತಹ ದುಷ್ಕೃತ್ಯಕ್ಕೆ ಮನಸ್ಸು ಮಾಡಬಹುದು? ಶ್ರೀಧರನು ಅಪವಾದ ಕೇಳಲಿಕ್ಕಾಗಿಯೆ ಹುಟ್ಟಿದ

ಜಿಸಾಮಿ. ಅವನ ಮೇಲೆ ಆರೋಪಣೆ ಹೊರಿಸುವುದು ತಮ್ಮ ಕರ್ತವ್ಯವೆಂದು ಕೆಲವರು ಭಾವಿಸಿರಬಹುದು.

ಮೋಹನ ನಾನಂತಹ ದುರ್ಜನನೆಂಬುದು ನಿಜ ನೀನಾದರೂ ಈಜುವ ಶಕ್ತಿ ಬರುವ ಮೊದಲೆ ಸಮುದ್ರಕ್ಕೆ ಹಾರಬೇಡ. ನನ್ನ ಮಾತನ್ನು ನೀನು ನಂಬಬಹುದು. ನಂಬಬೇಕೆಂಬ ಹಕ್ಕು ನನಗಿದೆ.

ಚಂಚಲೆ.- ನಂಬದಿದ್ದರೆ?

ಮೋಹನ – ಆತ್ಮೀಯರ ಮಾತನ್ನು ಸುಲಭವಾಗಿ ಹಾರಿಸಬೇಡ. ಸ್ವಲ್ಪಕಾಲ ಪರೀಕ್ಷಿಸು. ನನ್ನ ಮಾತು ನಿಜವೋ ನೋಡು. ಆತನಿಗೂ ನಿನಗೂ ಏನೂ ಸಂಬಂಧವಿಲ್ಲವೆಂದೆಣಿಸಿಕೊಂಡು, ಲೋಕದ ಮಾತಿನಲ್ಲಿ ದಿಟವೇನು? ಸಟೆಯೇನು? ಎಂಬುದನ್ನು ಹುಡುಕು. ಆತನ ನಡತೆಯಿಂದ ತಿಳಿ.

ಚಂಚಲೆ – ಹಾಲನ್ನು ಎಷ್ಟು ಪರೀಕ್ಷಿಸಿದರೂ ಅದು ವಿಷವಾಗದು.

ಮೋಹನ – ಬಿಳಿಯಾಗಿ ತೋರುವುದೆಲ್ಲ ಹಾಲಲ್ಲ.

ಚಂಚಲೆ – ಆಗಲಿ, ನಿನ್ನ ನೀತಿಯ ಭಂಡವಾಳ ಮುಗಿಯಲಿಲ್ಲವೇ?

ಮೋಹನ.– ಬಡ ಹುಡುಗಿ! ಜಲಪಾತದಲ್ಲಿ ದೋಣಿ ನಡೆಯಿಸುವವರುಂಟೇ? ಪಾತಾಳದ ಹೊಂಡಕ್ಕೆ ಏಣಿಯಿಳಿಸಿ ಇಳಿಯುವವರುಂಟೇ? ನೀನು ಖಂಡಿತವಾಗಿ ಹಾಳಾಗುವೆ! ಜಾಗ್ರತೆ! ಜಾಗ್ರತೆ! ನಿನ್ನ ಪ್ರಾಣಕ್ಕೇ ಒಂದು ದಿನ ಸಂಚಕಾರ ಬರುವುದು

ಚಂಚಲೆ – ಪ್ರಾಣಸಂಕಟದಲ್ಲಿ ಬದುಕಿಸಲು ಬರುವ ನಿನ್ನಂತಹ ವೇದಾಂತಿ ಬಂಧುಗಳಿರುವಾಗ ಹೆದರಿಕೆಯೇನು?

ಮೋಹನ.– ನಿನ್ನ ಮೆದುಳಿನ ತಿರುಗಣಿಯನ್ನು ಮೊದಲೇ ಅವನು ತಿರುಗಿಸಿಬಿಟ್ಟಿದ್ದಾನೆ. ನಾನೇನು ಮಾಡಲಿ?

ಚಂಚಲೆ – ನಿನ್ನ ಕೆಲಸ ನೋಡು.

ಮೋಹನ – ಹಾಗೆಯೇ ಮಾಡುತ್ತೇನೆ. ಆದರೆ, ನಿನ್ನ ಪರೋಪಕಾರಗಳ ಮಧ್ಯದಲ್ಲಿ, ಎಲ್ಲಿಯಾದರೂ ಎಂದಾದರೂ ಅಪಾಯ ಬಂದರೆ, ನನ್ನನ್ನು ಸ್ಮರಿಸಿಕೋ.

ಚಂಚಲೆ.– ಅವಶ್ಯವಾಗಿ.

ಮೋಹನ.– ಹಾಗಾದರೆ ನಾನು ಧನ್ಯನು! ಈಗ ಹೋಗುತ್ತೇನೆ ಚಂಚಲೆ

ಹೀಗೆಂದುಕೊಂಡೇ ಮೋಹನರಾಯನು ಅಂಗಳಕ್ಕಿಳಿದು ಕಣ್ಮರೆಯಾದನು ಶನೀಶ್ವರನ ದಶಾಕಾಲವು ಮುಗಿಯಿತೆಂದು ಚಂಚಲ ನಿಟ್ಟುಸಿರಿನ ಸುಖಾನುಭವದಲ್ಲಿದ್ದಳು.

ಅಷ್ಟರಲ್ಲಿಯೆ ಒಬ್ಬ ಆಳು ಬಂದು 'ಚಂಚಲಮ್ಮನೆಂದರೆ ತಾವೆ?' ಎಂದು ವಿಚಾರಿಸಿ ಒಂದು ಪತ್ರವನ್ನಿತ್ತನು ಅದರಲ್ಲಿ ಹೀಗಿತ್ತು --

'ಇನ್ನು ನಾಲ್ಕೆ ದಿವಸಗಳಲ್ಲಿ ನಾವು ಹಳ್ಳಿಗೆ ಹೋಗುವೆವು ಇಂದಿಗೆ ಎಂಟನೆಯ ಸೋಮವಾರ ಬೆಳಿಗ್ಗೆ ೮ ಘಂಟೆಗೆ ನಿಮ್ಮ ಮನೆಯ ಇದಿರಿನಲ್ಲಿ ಒಂದು ಕಾರು ನಿಲ್ಲುವುದು. ಅದನ್ನೇರಿ ಬಾ. ಬೇರೆ ವಿಷಯಗಳನ್ನು ನಾವು ಸ್ವತಃ ನಿಶ್ಚಯಿಸಿದ್ದೇವೆ ಅಸಿಶ್ಚಿತವಾದವುಗಳು ಏನಾದರೂ ಇದ್ದರ ಮುಖತಃ ಮಾತನಾಡಬಹುದು. ಹೇಗಿದ್ದರೂ ಹೊರಟು ಬಾ ಚಂಚಲೆ! ಚಂಚಲೆಯಾಗಬೇಡ! ಇಷ್ಟು ನನ್ನ ಹೇಳಿಕೆ—'

ಇತಿ,

ಶ್ರೀಧರ

ಈ ಪತ್ರವನ್ನೋದಿ ಚಂಚಲೆ ಆಕಾಶಕ್ಕೆ ಹಾರಿದಳೋ ಭೂಲೋಕದಲ್ಲಿಯೆ ಕುಣಿದಳೋ, ಎಂಬುದನ್ನು ಅಲ್ಲಿದ್ದವರೆ ಹೇಳಬೇಕು

ಪತ್ರದ ಸಂಗತಿಗಳನ್ನು ಕೇಳಿ, ಕಾಶಿಅಮ್ಮ ತನ್ನ ಬೋಳುಬಾಯಿ ತುಂಬ ನಕ್ಕಳು

# ಏಳನೆಯ ಪ್ರಕರಣ

ರಾಮಣ್ಣನನ್ನು ಸಂಚಾರಕ್ಕೆ ಕಳುಹಿಸುವ ವಿಧಿಯು ಅತಿ ಸೂಕ್ಷ್ಮವಾಗಿ ನಡೆಯಿತು ಮರಣಶಿಕ್ಷೆಗೆ ಒಳಗಾದ ಬಂದಿಯ ಬಳಿಗೆ ಹೋಗಿ 'ಹೊರಡೋ ಪಾಶಿಯ ಕಂಬದ ಕಡೆಗೆ' ಎಂದು ಅಧಿಕಾರವಾಣಿಯಿಂದ ಆಜ್ಞಾಪಿಸುವ ಅಧಿಕಾರಿಯಂತೆ, ಶ್ರೀಧರನು ರಾಮಣ್ಣನ ಸನಿಹಕ್ಕೆ ಹೋಗಿ 'ರಾಮಣ್ಣ! ಈದಿನವೇ ಹೊರಡದೆ ನಿರ್ವಾಹವಿಲ್ಲ ನೋಡು' ಎಂದನು. 'ಈದಿನವೇ ಹೊರಡುವುದಕ್ಕೆ' ಕಾರಣವೇನೆಂಬುದನ್ನು ರಾಮಣ್ಣ ಕೇಳದಿದ್ದರೂ ಶ್ರೀಧರನೇ ಹೇಳಿಬಿಟ್ಟ 'ಮುಂಬಯಿಯಿಂದ ಒಂದು ತಂತಿ ಬಂದಿದೆ. ಇನ್ನೆರಡು ದಿವಸಗಳಲ್ಲಿ ನಮ್ಮ ಪ್ರತಿನಿಧಿ ಅಲ್ಲಿರಬೇಕಾದುದು ಅವಶ್ಯವಂತ. ಗಡುವಿಗೂ ಇಂದಿಗೂ ನಡುವೆ ಎರಡೇ ದಿವಸಗಳ ಅವಧಿಯಿರುವುದೆಂದ ಮೇಲೆ, ನೀನು ಯಾವಾಗ ಹೊರಡಬೇಕೆಂಬ ಸಂಗತಿ ನಿನಗೇ ತಿಳಿದೀತು.

ಈ ಗೇಣುದ್ದದ ಹೊಟ್ಟೆಗೆ ಯಾರ ಅಡಿಯಾಳಾಗಿ ಮೈಮುರಿದು ಕೆಲಸ ಮಾಡಬೇಕಾಗಿರುವುದೋ, ಅಂಥ ಧನಿಯಲ್ಲಿ ಹೇಳುವುದಾದರೂ ಏನು? ರಾಮಣ್ಣ ಸಿದ್ಧನಾಗಿಯೇ ಇದ್ದನು. ಸಿಡಿಲಿನಂತೆ ಶ್ರೀಧರನ ಆಜ್ಞೆ ಎಂದು ಹೊಡೆಯುವುದೋ ಎಂದು ನಿರೀಕ್ಷಿಸುತ್ತಲೆ ಇದ್ದನು 'ಹೂಂ . .' ಎಂದು ದೀರ್ಘನಿಶ್ವಾಸವನ್ನು ಬಿಟ್ಟನು. ಕಣ್ಣೊರಸಿತು. ತುಟಿ ನಡುಗಿತು. ಮುಖ ಕೆಂಪಾಯಿತು

ಶ್ರೀಧರನು ಹೀಗೆ ಸಮಾಧಾನಪಡಿಸಿದ ವ್ಯಸನಪಡಬೇಡ ರಾಮು! ದೇವರು ನನಗೆ ನಿಷ್ಠುರವಾದ ನಾಲಗೆಯನ್ನು ಕೊಟ್ಟಿದ್ದಾನ. ಇರುವುದನ್ನು ಇರುವಂತೆ ಹೇಳುವ, ಕ್ಷಿಪ್ರಕಾರಿತ್ವದಿಂದ ಕೆಲಸ ಮಾಡುವ, ಸಮಯೋಚಿತ ಮನ್ನರಿತು ಕರ್ತವ್ಯಕ್ಕೆ ದುಮುಕುವ ಸ್ವಭಾವ ನನ್ನದು. ಕೆಲವರಿಗಿದು ಕಠಿನವಾಗಿ ತೋರಬಹುದು. ಮಾಡುವುದೇನು? ಮೂವತ್ತೈದು ವರ್ಷದ ಹುಟ್ಟುಗುಣವಿದು; ಇನ್ನು ತಿದ್ದುವುದಾದರೂ ಹೇಗೆ? ನನ್ನ ಅಂತಃಕರಣವೆಷ್ಟು ಮದುವೆಂಬುದು ನಿನಗೇ ಗೊತ್ತಿದೆ ಕೆಳಗಿನ ನೌಕರರು ನನ್ನಂತೆಯೇ ಲೋಕದ ವಿಷಮಕಾರ್ಯಪ್ರವಾಹದಲ್ಲಿ ಈಜಿ, ದಾಟಿ, ದಡಕ್ಕೆ ಬಂದು

ಯಶಸ್ವಿಗಳೆನಿಸಬೇಕೆಂದು ನನ್ನಿಷ್ಟ. ಹೋಗು ರಾಮು! ನಿನಗೆ ಜಯವಾಗುವುದು. ವಯಸ್ಸಿದೆ; ಉತ್ಸಾಹವಿದೆ, ಶಕ್ತಿಯಿದೆ, ಪ್ರಸಂಗಾವಧಾನತೆಯಿದೆ. ನಿನ್ನಂಥವರು ಹಿಂಜರಿದರೆ, ಮುಂದೆ ಹೋಗುವವರು ಯಾರು?

ರಾಮಣ್ಣ :– ಹೌದು ಭಾವ! ಹೋಗಲು ಸಿದ್ಧನಾಗಿದ್ದೇನೆ

ಶ್ರೀಧರ – ಮೊನ್ನೆ ನೀನು ಪ್ರಸ್ತಾವಿಸಿದುದನ್ನು ಮರೆತಿಲ್ಲ ಅದಕ್ಕೆ ಸಾಕ್ಷಿ ಇಲ್ಲಿದೆ ನೋಡು.

ಹೀಗೆಂದು ಜೇಬಿಗೆ ಕೈಹಾಕಿ ನೂರು ರುಪಾಯಿಗಳ ಎರಡು ಟಪಾಲು ರಶೀದಿಗಳನ್ನು ಅವನ ಕೈಗಿತ್ತನು.

ರಾಮಣ್ಣನ ಅಶ್ರುಸಿಕ್ತ ನಯನಗಳ ನಡುವೆ, ಸಂತೋಷದ ಕಳೆಯು ಹೊರಹೊಮ್ಮಿ ಸ್ಫುಟವಾಗಿ ಕಂಡುಬಂದಿತು. ಸೆರೆಬಿಗಿದ ಗದ್ಗದ ಕಂಠದಿಂದ 'ಭಾವಯ್ಯ! ನನ್ನಿಂದ ಅಪರಾಧಗಳೇನಾದರೂ ಆಗಿದ್ದರೆ ಕ್ಷಮಿಸಯ್ಯ' ಎಂದನು

ಶ್ರೀಧರ – ಅಪರಾಧವೇನು ರಾಮು? ಎಳೆಯ ವಯಸ್ಸಲ್ಲವೇ? ನೆತ್ತರು ನಿಮಿಷಕ್ಕೆ ನೂರು ಗಾವುದದ ವೇಗದಿಂದ ಹರಿಯುವ ಕಾಲವಲ್ಲವೇ? ಅವಿವೇಕ ವಾಗುತ್ತದೆ. ನಾನೇನೂ ಆ ವಯೋವಸ್ಥೆಯನ್ನು ದಾಟಬಾರದೆ ಉಳಿದ ಪ್ರಾಣಿಯೆಂದು ಭಾವಿಸಿದೆಯೊ? ಛೆ! ಎಂದೂ ಅಲ್ಲ ಮನುಷ್ಯನಿಗೆ ಮನೆಯೆ ದೈವದ ಗುಡಿಯಾಗಿರುವಷ್ಟು ಕಾಲ, ಅದನ್ನಗಲುವುದೆಂದರೆ ಪ್ರಾಣಸಂಕಟ ವಾಗುತ್ತದೆ. ಹತ್ತು ಜನರ ಪರಿಚಯದಿಂದ ಸಾಧುವಾದ ಮೇಲೆ, ಇತರರ ಕೈಕಾಲುಗಳನ್ನು ನಾಯಿಯಂತೆ ಮೂಸಲೂ ಹೆದರುವುದಿಲ್ಲ. ಇವೆಲ್ಲವರ ಅನುಭವವೂ ಆಗಬೇಕು; ನಿನಗೂ ಆಗಲಿದೆ.

ಶ್ರೀಧರನ ಧರ್ಮವ್ಯಾಖ್ಯಾನವು ನಡೆಯುತ್ತಿದ್ದಾಗ, ರಾಮಣ್ಣನ ಅಂತಃಕರಣ ಗಹ್ವರದಲ್ಲಿ ಒಂದು ಆಕಾಶವಾಣಿ. ಶ್ರೀಧರನು ನಿಜವಾಗಿಯೂ ಸಾಧು ಮನುಷ್ಯನೆ? ಅಥವಾ ಬಕಸಂನ್ಯಾಸಿಯೆ? ಲೋಕದಲ್ಲಿ ಅಪ್ರಾರ್ಥಿತವಾಗಿ ಪರೋಪಕಾರ ಮಾಡಲು ಉತ್ಸುಕರಾಗಿರುವ ದುರ್ಜನರೂ ಇದ್ದಾರೆ. ಸುಜನರೂ ಇದ್ದಾರೆ. ಇವನ ಹೃದಯವು ಕೆಲ ಸಂದರ್ಭಗಳಲ್ಲಿ ಮುಚ್ಚಿದ ಕಪಾಟಿನಂತಿರುವುದು. ಒಳಗೇನಿರುವುದೋ ತಿಳಿಯುವುದಿಲ್ಲ. ಇನ್ನೊಮ್ಮೆ ತೆರೆದಿಟ್ಟ ಪುಸ್ತಕದಂತೆ ಸುಲಭವೇದ್ಯವಾಗಿರುವುದು. ಇವೆರಡು

ವಿರುದ್ಧ ಗುಣಗಳು ಏಕಾಶ್ರಯವನ್ನು - ಪಡೆದಿವೆ, ಇದಕ್ಕೆ ಯಾವ ಅರ್ಥ ಕೊಡಬೇಕು? ಸೌಜನ್ಯವೆಂದೋ ದೌರ್ಜನ್ಯವೆಂದೊ?

ರಾಮಣ್ಣನಂತಹ ಮೊಸೆ ಬಾರದ ಪೋರನ ಎದೆಯಾಳವನ್ನು ತಿಳಿವಷ್ಟು ಚಾಣಾಕ್ಷತೆಯಿಲ್ಲದಿರುತ್ತಿದ್ದರೆ, ಇಂತಹ ದೊಡ್ಡ ವಹಿವಾಟನ್ನು ನಡೆಯಿ ನುವುದು ಶ್ರೀಧರನ ಜನ್ಮದಲ್ಲಿ ಸಾಧ್ಯವಾಗುತ್ತಿರಲಿಲ್ಲ. ಶ್ರೀಧರನು ಮತ್ತೊಮ್ಮೆ ಜೇಬಿಗೆ ಕೈಹಾಕಿ ನೂರು ರುಪಾಯಿಗಳ ನೋಟನ್ನು ತೆಗೆದು 'ಇದು ನಿನ್ನ ದಾರಿ ಖರ್ಚಿಗೆ' ಎಂದನು

ನೂರು ರುಪಾಯಿಯೇ! ಅದರ ಮಹಿಮೆಯೆಷ್ಟಿದೆ! ಬಡ ಜನರ ಅಂಗೈಗೆ ಇಳಿದ ನೂರು ರುಪಾಯಿಯ ನೋಟಿನಲ್ಲಿ ಸ್ವರ್ಗಸಾಮ್ರಾಜ್ಯದ ಚಿತ್ರವೇ ಇದೆ. ರಾಮಣ್ಣನ ಕಣ್ಣೀರು ತನ್ನಷ್ಟಕ್ಕೆ ಆರಿಹೋಯಿತು

ಶ್ರೀಧರನು ಮತ್ತೆ ಹೀಗೆಂದನು – ನಿನ್ನ ಭಾವನ ವಿಷಯದಲ್ಲಿಯೂ ಹಾಗೆಯೆ ಮಾನವ ಶಕ್ತಿಗೆ ಅಸಾಧ್ಯವಲ್ಲದ ನಕಲ ಪ್ರಯತ್ನಗಳನ್ನೂ ಮಾಡಿ, ಅವನನ್ನು ಸರಿದಾರಿಗೆ ತರಲು ಹವಣಿಸುತ್ತೇನೆ. ಎಷ್ಟೆಂದರೂ ಒಂದೇ ಕರುಳಲ್ಲವೇ ನಮ್ಮದು? ಒಬ್ಬನೇ ತಂದೆಯ ತೊಡೆಯೇರಿ ಬಳೆದವ ರಲ್ಲವೇ? ಒಬ್ಬಳೇ ತಾಯಿಯ ಕೈತುತ್ತಿಗೆ ಜಗಳಾಡಿದವರಲ್ಲವೇ? ಆತನಲ್ಲಿ ನನಗಿರುವ ದ್ವೇಷಕ್ಕೆ– ಅದನ್ನು ದ್ವೇಷವೆಂದೂ ಹೇಳಬರುವುದಿಲ್ಲ ಅಲಕ್ಷ್ಯಕ್ಕೆ ಕಾರಣವಿಷ್ಟೆ ಇಂದು ನಿನಗೆ ಯಾವ ಕೆಲಸವನ್ನೊಪ್ಪಿಸಿದೆನೋ ಅದನ್ನು ಅಂದೇ ಅವನಿಗೆ ಒಪ್ಪಿಸಿದ್ದೆ. ಒಲ್ಲೆನಂದ. ಆತ್ಮೀಯರ, ಅವರಲ್ಲಿಯೂ ತಮ್ಮನ, ಅಡಿಯಾಳಾಗಿ ಇರುವುದಕ್ಕಿಂತಲೂ ಬೀದಿ ಬೀದಿ ಮನೆ ಮನೆ ಅಲೆ ದಾಡಿ, ಹಿಡಿಕಾಳು ಕಡಿಯಕ್ಕಿಗಳಿಂದ ಜೀವನ ನಿರ್ವಾಹಮಾಡಬಹುದೆಂದು ಹಟತೊಟ್ಟ. ನಾನೂ ಸ್ವಲ್ಪ ಹಟಮಾರಿ. ಅಕಿಂಚನನ ದುರಾಗ್ರಹಕ್ಕೂ, ದೈವಾನುಗ್ರಹಪಾತ್ರನ ದೃಢನಿಶ್ಚಯಕ್ಕೂ ಘರ್ಷಣಗಳು ಆದುವು, ಆಗು ತ್ತಿವೆ, ಅಷ್ಟೆ! ಆದರೂ ಕೈಬಿಡುವಂತಿಲ್ಲ; ಹೊಂಡಕ್ಕೆ ನೂಕುವಂತಿಲ್ಲ. ಸಾಧ್ಯವಾದಷ್ಟು ಪ್ರಯತ್ನಿಸುತ್ತೇನೆ ಮೇಲೆತ್ತಲು. ಹೀಗೆಯೆ ಶ್ರೀಧರನ ವಾಗ್ಧಾಟಿ ಪರ್ವತನಿರ್ಝರದಂತೆ ಹರಿಯುತ್ತಿತ್ತು.

ಶ್ರೀಧರನು ವಾಗಾಡಂಬರದಿಂದ ಎಷ್ಟು ದಿಗಿಲುಗೊಳಿಸಲು ಪ್ರಯತ್ನಿ ಸಿದರೂ, ರಾಮಣ್ಣನ ಹೃದಯಗ್ರಂಥಿಯು ಬಿಚ್ಚಿದಂತಾಗಲಿಲ್ಲ. ಆತನು

ಹೇಳುವುದೆಲ್ಲ ನಿಜವೇ ಆಗಿರಬಹುದು. ಆದರೆ ತಂಗಿ ತನ್ನ ಮನೆಗೆ ಬರುವುದಕ್ಕೂ ಶ್ರೀಧರನೇಕೆ ನಿರ್ಬಂಧವಿಟ್ಟಿದ್ದಾನ? ರಾಮಣ್ಣನಿಗೆ ಇದು ತಿಳಿಯುಲಿಲ್ಲ. ಆಕೆ ಬಂದರೂ ಒಂದು ಗಳಿಗೆ ಇರುವಳು ಮತ್ತೆ ಹೋಗಿಯೇ ಬಿಡುವಳು. ಇದೇಕೆ? ಇದು ಶ್ರೀಧರನ ನಿರ್ಬಂಧವಾಗಿರದೆ? ಅಥವಾ ತಂಗಿಯ ಚರ್ಯೆಯೂ ಹಾಗೆಯೇ? ಆದರೆ ಅಲ್ಲಿ ಶ್ರೀಧರನ ಮನೆಯಲ್ಲಿ - ಮುದುಕಿ ಒಂದಿದೆ. ಮನೆ ಕಾಯುವ ನಾಯಿಯಂತೆ, ಅವಳೊಬ್ಬಳು ಅಲ್ಲಿರುವಾಗ ತಂಗಿಯ ಮಾನದ ವಿಷಯದಲ್ಲಿ ಗೊಡವೆಯೇಕ? ಲೋಕೋಕ್ತಿಗಳು ಒಂದು ವೇಳೆ ನಿಜವಾಗಿದ್ದರೂ ದುಡುಕುವುದರಿಂದ ಸತ್ಯಶೋಧನವಾಗುವುದೆ? ಇಲ್ಲ. ಪ್ರಕೃತದಲ್ಲಿ, ಸ್ವತಂತ್ರವಾಗಿ ಹಾರುವಷ್ಟು ರೆಕ್ಕೆ ಬರಿಯದ ಕಿರುಹಕ್ಕಿ ನಭೋಮಂಡಲದಲ್ಲಿ ಹಾರಲು ಹಾತೊರೆಯಬಾರದು ಕಾಲವು ಒದಗುತ್ತದೆ! ರಾಮಣ್ಣನ ಆಂತರಿಕ ಭಾವನೆಗಳನ್ನು ಮುಖಭಾವದಿಂದ ಓದಿ ತಿಳಿದ ಶ್ರೀಧರನು ಆತನ ಸಂದೇಹಗಳನ್ನು ಹೀಗೆ ಚಿವುಟಿಬಿಟ್ಟನು -

ನನ್ನ ಹೆಂಡತಿ ಚರಮಾವಸ್ಥೆಯಲ್ಲಿದ್ದಾಳೆ. ಕೊನೆಯ ಪ್ರಯತ್ನವನ್ನು ಮಾಡಬೇಕಾಗಿದೆ. ಆಕೆಯ ಇಹಲೋಕದ ಋಣಕ್ಕೆ ಇನ್ನೊಂದು ವರ್ಷವೇ ಅವಧಿಯೆಂದು ತೋರುತ್ತದೆ ನಾನೂ ಅವಳೂ ಹಳ್ಳಿಯ ವಾಸಕ್ಕೆ ತರಳುತ್ತೇವೆ. ದಿನಂಪ್ರತಿ ಕಚೇರಿಗೆ - ಕಚೇರಿಯಿಂದ ಹಳ್ಳಿಯ ಮನೆಗೆ - ಇಷ್ಟು ನನ್ನ ಸಂಚಾರ. ಗೃಹಕೃತ್ಯಗಳ ಸರ್ವಾಧಿಕಾರವನ್ನೂ ಮಕ್ಕಳ ಆರೈಕೆಯನ್ನೂ ತಾಯಿ ಅತ್ತಿಗೆಯರ ವಶಕ್ಕಿತ್ತು ಸಾಧ್ಯವಾದಷ್ಟು ಕ್ಷಿಪ್ರವಾಗಿ ಹಳ್ಳಿಯ ಮನೆಯನ್ನು ಸೇರುತ್ತೇನೆ ರಾಮು! ಎರಡು ಮೂರು ತಿಂಗಳೊಳಗೆ ಈ ಸ್ಥಾನಾಂತರ ಗಮನದ ಫಲಾಫಲಗಳನ್ನು ತಿಳಿದು, ಪ್ರಯೋಜನವಿಲ್ಲವೆಂದು ಕಂಡುಬಂದರೆ ಮದನಪಳ್ಳಿಗಾದರೂ ಕಳುಹಿಸಬೇಕು . . . ಅಣ್ಣನಾದರೂ ಸ್ವಾಸ್ಥ್ಯವುಳ್ಳವನಾಗಿ ಇರುತ್ತಿದ್ದರೆ . ಎಂದು ಹೇಳುವಾಗ ಶ್ರೀಧರನ ಕಣ್ಣಿನಿಂದ ಕಂಬನಿಯುದುರಿತು.

ರಾಮಣ್ಣ ನಾನು ಈಗಲ ಹೊರಟ ಭಾವ!

ಶ್ರೀಧರ - ಜಯವಾಗಲಿ ನಿನಗೆ! ನನ್ನ ಭವಿಷ್ಯದ ಆಶಾಂಕುರವೇ ನೀನು ರಾಮು! ಸಂಬಳ ತಿನ್ನುವ ಕೆಲಸಗಾರರೆಷ್ಟೋ ಮಂದಿ ಇದ್ದರೂ, ಸುಖದುಃಖಗಳಲ್ಲಿ, ಕೀರ್ತಿ-ಅಪಕೀರ್ತಿಗಳಲ್ಲಿ ಸಮಾನರಾಗಿರುವ ಬಂಧುಗಳಿ

ಷ್ಟಂತೆ ಆಗುವುದೇ? ನೀನೂ ನನ್ನ ಸಮೀಪಬಂಧು ಒಂದುವೇಳೆ ನನ್ನ ಸಕಲ ಕಾರ್ಯಭಾರಗಳೂ ನಿನ್ನ ಹೆಗಲ ಮೇಲೆ ಬಿದ್ದರೆ, ಆ ಹೆಗಲು, ಹೊರುವಷ್ಟು ಬಲಿಷ್ಠವಾಗಿರಬೇಕಾದುದರಿಂದ, ನಿನಗೆ ಪದೇಪದೇ ಇಂತಹ ಉಪದ್ರವಗಳನ್ನು ಕೊಡಬೇಕಾಗಿದ ಭಾವ!

'ನಿಮ್ಮ ವಿಧೇಯ ಸೇವಕನಾಗಿರುತ್ತೇನೆ' ಎಂದು ರಾಮಣ್ಣನು ಕೆಲಸಕ್ಕೆ ಅರ್ಜಿಹಾಕಿ ಶ್ರೀಧರನ ಕೃಪಾಕಟಾಕ್ಷ ಹೊಂದಿ ಇಂದಿಗೆ ಏಳೆಂಟು ವರ್ಷಗಳು ಆಗಿರಬಹುದು. ಮತ್ತೆ ಆತನು ಸಂಬಂಧಿಯೂ ಆದನು. ಅತನ ಅಣ್ಣನಿಗ ಭಾವನೇ ಆದನು. ಆದರೆ ಅದುವರೆಗೆ, ಆ 'ಭಾವ' ಎಂಬ ಎರಡಕ್ಷರದ ಹಸರು, ಶ್ರೀಧರನ ಶಬ್ದಭಂಡಾರದೊಳಗ ನುಸುಳಿರಲಿಲ್ಲ. ಇಂದು ಸೇರಿ ಕೂಂಡಿತು ರಾಮಣ್ಣನ ಎದೆ ಕರಗಿತು!

ಹೋಗುವ ಮೊದಲ ತಂಗಿಯನ್ನು ಏಕಾಂತವಾಗಿ ಕಾಣಬೇಕೆಂದು ರಾಮಣ್ಣನಿಗೆ ಇದುವರೆಗೂ ಆಸೆಯಿತ್ತು ಆಕೆಯೊಡನ ರಹಸ್ಯಸಂಭಾಷಣ ಯನ್ನು ನಡೆಸುವುದೆಂದರೆ ಶ್ರೀಧರನೆಂಬ ಭೂತದ ಸಿಟ್ಟನ್ನು ಕೆದರುವುದೆಂಪೂ ಅವನಿಗೆ ಗೊತ್ತಿದ್ದಿತು 'ಅಂಥ ಭಯಾನಕ ಪ್ರಸಂಗ ಬಂದರೆ ಬರಲಿ, ಧೃಷ್ಟ ಪುಷ್ಟವಾದ ದೇಹವಿದೆ, ಅಗಲವಾದ ಹೆಗಲಿದೆ, ಕೂಲಿಕೆಲಸ ಮಾಡಿಯಾದರೂ ಕಾಲಕ್ಷೇಪ ಮಾಡುವನು' ಎಂಬ ಸಂಕಲ್ಪಿತ ಬುದ್ಧಿಯಿಂದಲೆ, ತಂಗಿಯ ಬಳಿಗೆ ಹೋಗಬೇಕಾಗಿದ್ದಿತೆಂಬುದನ್ನು ಅವನು ಅರಿತಿದ್ದನು. ಆದರೆ ಈಗ ರಾಮಣ್ಣನ ಮನಸ್ಸು ಹಗುರವಾಗಿದೆ. ಹಸಿಯೆಲೆ ಒಣಗಿ ತರಗೆಲೆಯಾಗಿ ಹಗುರವಾಗಿ ಹಾರುವಂತೆ, ಅವನ ಮನಸ್ಸು ಶಂಕಾಭೀತಿಗಳನ್ನು ನೀಗಿ, ತೆಳ್ಳಗಾಗಿ ಲಘು ವಾಗಿ ಬಿಟ್ಟಿದೆ ಸಂದೇಹಾಂಕುರಗಳು, ಅಪಾಯ ಭೀತಿಯ ಕಲಿಕೆಗಳು, ಉದ್ಧತ ಸ್ವಭಾವದ ಅಹಂಕಾರ ಉತ್ಸಾಹಗಳ ಪಲ್ಲವಗಳು,–ಎಲ್ಲ ಜಗುಳಿ ಬಿದ್ದು, ಬೀಸುವ ಗಾಳಿಯಲ್ಲಿ ಭುರ್ರನೆ ಹಾರುತ್ತಿವೆ. ಇನ್ನು ತಂಗಿಯನ್ನು ಕಂಡು ಮಾಡುವುದಾದರೂ ಏನು? ಆಕೆಯೇ ದುಶ್ಶೀಲ್ಪಯಾಗಿದ್ದರೆ ಅಂಥ ಸಂಭವವಿಲ್ಲ–ವೃಥಾ ಕಲಹ. ಇದರಿಂದ ಶ್ರೀಧರನ ನಿಗ್ರಹಸಮರ್ಥವಾದ ರೋಷ. ಒಂದು ವೇಳೆ ಆಕೆಯೆ, ನಿಷ್ಕಾರಣಾಪವಾದ ಭೀತಿಯಿಂದಾಗಲಿ, ಮೃದುಮನದ ನತತೆಯಲ್ಲಿ ಅನ್ಯಥಾ ಭಾವನೆಯಿಂದಾಗಲಿ, 'ನಿನ್ನೊಡನೆ ಬರು ತ್ತೇನೆ' ಎಂದರೆ ವಿಷಮವಾದೀತು ಇಷ್ಟುಕಾಲ ನಡೆಯಿಸಿಕೊಂಡು ಬಂದವನ

ಅವಕೃಪೆ ಅವಳ ಮೇಲೆ, ಅವಳ ಗಂಡನ ಮೇಲೆ, ತನ್ನ ಮೇಲೆ. ಇದರಿಂದ ತನ್ನ ಭವಿಷ್ಯವು ಜಜ್ಜಿಹೋದೀತು. ಆದುದರಿಂದ ಆಕೆಯ ದರ್ಶನವನ್ನು ಹಾರೈಸದೆ, ಆಕೆಯ ಕಣ್ಣಿನಲ್ಲಿ ಒಸರಿ ಸುರಿಯಬಹುದಾದ ಕಣ್ಣೀರಿಗೆ ಇದಿರೊಡ್ಡದೆ, ತಲೆತಪ್ಪಿಸಿಕೊಂಡು ಪಲಾಯನಮಾಡುವುದೇ ಸಂದರ್ಭಸೂಕ್ತವಾಗಿ ಕಂಡುಬಂತು ಇನ್ನು ಮನುಷ್ಯಚಿಂತಿತವಲ್ಲದ ಪ್ರಕರಣಗಳೇನಾದರೂ ಇದ್ದರೆ ಅವು ತಲೆಯೆತ್ತುವಾಗ ಇದಿರಿಸೋಣ ಎನ್ನುವಲ್ಲಿಯ ವರೆಗೆ ಅವನ ಮನಸ್ಸು

'ನನಗಿನ್ನು ಹೋಗುವುದಕ್ಕೆ ಹೆಚ್ಚು ಸಮಯವಿಲ್ಲ ಹೋಗುತ್ತೇನೆ. ಸೀತೆಯನ್ನು ನೋಡಬೇಕೆಂದಿತ್ತು, ಆಗಲಿಲ್ಲ. ಬಂದು ಕಾಣುತ್ತೇನೆ, ಹಾಗೆ ತಿಳಿಸಿಬಿಡು ಭಾವ' ಎಂದು ರಾಮಣ್ಣನು ಕಚೇರಿಯಿಂದ ಹೊರಡಲನುವಾದನು.

'ಅಣ್ಣ-ತಂಗಿಯರ ಹೃದಯದಲ್ಲಿ ಅನ್ಯೋನ್ಯವಾದ ಪ್ರೀತಿಯ ಸ್ಫೂರ್ತಿಯು ಎಷ್ಟಿರಬಹುದೆಂಬುದನ್ನು ನಾನರಿಯೆನೇ ರಾಮು? ತಿಳಿಸಬೇಕೆನ್ನಲು ನೀನು ಮರೆತಿದ್ದರೂ ನಾನು ತಿಳಿಸುತ್ತಿರಲಿಲ್ಲವೆ? ಈಗಲೇ ಹೋಗಿ ತಿಳಿಸುತ್ತೇನೆ. ಹೋಗು ನಿನಗೆ ಯಾವ ಚಿಂತೆಯೂ ಬೇಡ' ಎಂದು ಶ್ರೀಧರನು ಎವೆ ತಟ್ಟಿದನು. ಮಾತು ಅಂತಃಕರಣಪ್ರೇರಿತವಾದುದೆಂಬುದನ್ನು ರುಜುಪಡಿಸುವುದಕ್ಕೆ ಒಂದು ತಟಕು ಕಣ್ಣೀರು ಆಗತಾನೆ ಹಾರಿಬಿದ್ದು ಮೇಲೆ ಬಂತು.

ತಡವಾದೀತೆಂಬ ಭೀತಿಯಿಂದ ಕೂಡಲೆ ರಾಮಣ್ಣನು ಜಟಕಗಾಡಿಯು ಸ್ಟೇರಿ ಮನೆಯ ಕಡೆಗೆ ಹಾರಿಹೋದನು

'ಈಗಲೇ ಹೋಗಿ ತಿಳಿಸುತ್ತೇನೆ' ಎಂದು ಅಭಯವಿತ್ತ ಜನ, ಆ ದಿನ ವಿಡೀ ಮನೆಗೆ ಹೋಗಿರಲಿಲ್ಲ. ಮಧ್ಯಾಹ್ನವೆಲ್ಲಿಯೋ ಊಟವೆಂದೂ, ರಾತ್ರಿ ಎಲ್ಲಿಯೋ ಕೂಟವೆಂದೂ, ಮರುದಿನ ಹಳ್ಳಿಗೆ ಪಯಣವೆಂದೂ ಮನೆಯವರಲ್ಲಿ ಹೇಳಿಯೋ ಶ್ರೀಧರನು ಹೊರಟಿದ್ದನು.

ರಾಮಣ್ಣನಲ್ಲಿ ಭಾವಾವಿಷ್ಟನಾಗಿ ಮಾತಾಡುವ ರಭಸದಲ್ಲಿ ಆತನಿಗಿತ್ತ ಭರವಸೆ ಮರೆತುಹೋಗಿರಬಹುದು. ಅದೇನು ಜರೂರಿನ ಕೆಲಸವೇ? ಮರೆತರೇನು ಬ್ರಹ್ಮಹತ್ಯಾದೋಷ ಬಂದೀತೇ?

# ಎಂಟನೆಯ ಪ್ರಕರಣ

'ನಾನು ಈ ದಿನ ಮನೆಯಲ್ಲಿಲ್ಲ' ಎಂದು ಶ್ರೀಧರನು ಹೇಳಿದ ದಿನ ಮನೆಯಲ್ಲಿದ್ದುದು ಮೂವರು ಹೆಂಗುಸರು, ಶ್ರೀಧರನ ಮಕ್ಕಳು ಮತ್ತು ಬಾಬು ಎಂಬ ಕೀಳ್ಗೆಲಸದ ಆಳು ಮಾತ್ರ ಮನೆಯ ಗಂಡುಸರಾರೂ ಇಲ್ಲದ ಕಾರಣ, ಬೇಗನೆ ಎಂಟು ಗಂಟೆಗೆ ಭೋಜನ ಮುಗಿಸಿ ಎಲ್ಲರೂ ಶಯ್ಯಾಶರಣರಾಗಬೇಕೆಂದು ನಿರ್ಧರಿಸಿದ್ದರು ಶ್ರೀಧರನ ಕಾರಭಾರದಲ್ಲಿ ಮಧ್ಯರಾತ್ರಿಯ ಮೊದಲೆ ಯಾರಿಗೂ ಭೋಜನವಾಗುತ್ತಿರಲಿಲ್ಲ. ಒಂದು ದಿನವಾದರೂ ರಾತ್ರಿಯಿಡೀ ನಿದ್ರೆಮಾಡುವ ಅವಕಾಶ ದೊರೆಯಿತಲ್ಲ, ಇದು ವರ್ಷಕ್ಕೆ ಕೆಲವೇ ಸಲ ದೊರೆವ ಸಂದರ್ಭ ಇದರ ಸಂಪೂರ್ಣ ಪ್ರಯೋಜನವನ್ನು ಹೊಂದಿಕೊಳ್ಳಬೇಕು. ಎಂದೆಲ್ಲರೂ ನಿರ್ಧರಿಸಿದ್ದರು

ಪಾರ್ವತಿಗೆ ಕ್ಷಯರೋಗವೆಂದೂ, ಅದು ಸಾಂಕ್ರಾಮಿಕವೆಂದೂ, ರೋಗಿಯ ಸಮೀಪ ಸಂಪರ್ಕವಿರುವವರಲ್ಲಿ ಅದು ಮನುತೆಯಿಡುತ್ತದೆ ಎಂದೂ, ಡಾ ವೆಂಕೋಬರಾಯರು ತಿಳಿಸಿದ ಅನಂತರ, ಗಾಳಿಬೆಳಕುಗಳು ಸರಿಯಾಗಿ ಬೀಳುವ ಚಾವಡಿಯ ಒತ್ತಿನ ಕೋಣೆಯಲ್ಲಿ ಪಾರ್ವತಿ ಪವಡಿಸುತ್ತಿದ್ದಳು. ರಾಧಮ್ಮನಿಗೆ ರೋಗದ ಭೀತಿಯಿಲ್ಲ ಡಾಕ್ಟರರು ಜಾಗ್ರತೆ ಹೇಳಿದರೆ 'ಸ್ಮಶಾನದಲ್ಲಿ ಒಂದು ಕಾಲಿಟ್ಟ ಮುದುಕರನ್ನು ಮಾತಾಡಿಸಬೇಕೆಂದು ಮನುಷ್ಯರಿಗೇ ತೋರುವುದಿಲ್ಲವಂತೆ ರೋಗಕ್ಕೆ ಹೇಗೆ ತೋರೀತಯ್ಯ?' ಎಂದು ಸರಸವಾಗಿ ಉತ್ತರಕೊಡುತ್ತಿದ್ದಳಲ್ಲದೆ, ರೋಗಬಾಧೆಯನ್ನು ತಡೆಯುವ ಮುಪ್ಪಿನ ಕವಚದ ಪ್ರಭಾವದಿಂದ ಯಾವುದಕ್ಕೂ ಹೆದರದೆ, ಪಾರ್ವತಿಯ ಸಂಗಡವೇ ಪವಡಿಸುತ್ತಿದ್ದಳು ಮಕ್ಕಳ ಶಯನಕ್ಕೆ ಪ್ರತ್ಯೇಕ ವ್ಯವಸ್ಥೆಯಿದ್ದಿತು. ಅವರ ಮುಂದೆಗೆ ಬಾಬುವೆ ಕುರುಬನಾಗಿದ್ದ. ಇನ್ನುಳಿದವಳೆಂದರೆ ಸೀತಮ್ಮ. ಇವಳು ಉಪ್ಪರಿಗೆಯ ಒಂದು ಕೋಣೆಯನ್ನು ಆಕ್ರಮಿಸಿದ್ದಳು

ಶ್ರೀಧರರಾಯನ ನಿವಾಸಭವನವೆಂದರೆ ಅವನ ರೀತಿಗೆ ಅನುಕೂಲವಾಗಿಯೆ ಇದ್ದಿತು. ಅವನ ಆಕಾರದಂತೆಯೇ ಭದ್ರವಾಗಿದ್ದಿತು. ಅವನ ಹೃದಯದಂತೆಯೆ ದುಷ್ಪ್ರವೇಶ್ಯವಾಗಿದ್ದಿತು. ಆದರಷ್ಟೆ ವಿಶಾಲತೆಯನ್ನೂ ವಿಭಾಗ

ಗಳನ್ನೂ ನೆಲೆಯನ್ನೂ ಹೊಂದಿಕೊಂಡಿದ್ದಿತು ಪ್ರವೇಶ ನಿರ್ಗಮನದ ದಾರಿ ಗಳೂ ಅನೇಕವಾಗಿದ್ದುವು ಮಾಳಿಗೆಗೆ ಒಳಗಿನಿಂದೊಂದು ಸೋಪಾನಪಂಕ್ತಿ, ಹೊರಗಿನಿಂದೊಂದು ನಿಚ್ಚಣಿಕೆ ಅವನ ಅಂತಃಕರಣಗಳು ಹೇಗೆ ಕೆಲವೊಮ್ಮೆ ಪರಸ್ಪರ ಸಂಬಂಧವುಳ್ಳವುಗಳಾಗಿಯೂ ಕೆಲವೊಮ್ಮೆ ಇಲ್ಲದವುಗಳಾಗಿಯೂ ಇದ್ದುವೋ, ಅದರಂತೆಯೆ ಮನೆಯು ಒಳಗು ಹೊರಗುಗಳು ಇದ್ದುವೆಂದು ಒಂದೇ ಮಾತಿಂದ ಹೇಳಿದರೆ ಸಾಕು

ಸೀತಮ್ಮ ಉಪ್ಪರಿಗೆಯಲ್ಲಿಯ ತನ್ನ ಕೋಣೆಯನ್ನು ಅಲ್ಲ – ಗೂಡನ್ನು ಸೇರಿಕೊಂಡು, ಹೊಲಿಗೆ ಕೆಲಸ ಪ್ರಾರಂಭಿಸುವುದೆಂದು ಸೂಜಿ ನೂಲನ್ನು ಹಿಡಿದಳು. ಹೊಲಿದುದು ಬಟ್ಟೆಯನ್ನಲ್ಲ, ಕೈಬೆರಳನ್ನು! ಅನಂತರ ಪುಸ್ತಕ ಹಿಡಿದುಕೊಂಡು ಓದುವುದಕ್ಕೆಂದು ಕುಳಿತಳು. ಮನಸ್ಸು ಅಕ್ಷರಪಂಕ್ತಿಗಳ ಮೇಲೆ ತಡವರಿಸಿ ಬಿದ್ದು ದಾರಿ ತಪ್ಪಿಸಿಕೊಂಡು ಮಂಗಳೂರಿನ ಟಪ್ಪಾಲು ಬಂಡಿಯಲ್ಲಿ ದೂರದ ಮದ್ರಾಸಿಗೆ ಪ್ರಯಾಣ ಬೆಳೆಸಿ, ವೆಂಕಟರಾಯನ ಕಷ್ಟಗಳನ್ನು ಅವನ ನಿರುದ್ಯೋಗ, ನಿರರ್ಥಕ ಸಂಚಾರ, ಉಪವಾಸ, ನಿರಾಶೆ, ಅಪಮಾನ, ವ್ಯಸನ ಮೊದಲಾದವುಗಳನ್ನು ಊಹಾಬಲದಿಂದ ಓದತೊಡಗಿತು. ಹೆಂಗುಸು ಆಜನ್ಮ ಪರತಂತ್ರೆ ಅವಳಿಗೆ ಸಮಾಜದಲ್ಲಿ ಯಾವ ಸ್ಥಾನವೂ ಇಲ್ಲ ಅವಳಿಗೆ ಸ್ವಾತಂತ್ರ್ಯವಿಲ್ಲ, ಆಕೆಯು ಅಸ್ತಿತ್ವ ಮಾವಿನ ಗೊರಟಿನದರಂತ. ಪುರುಷಬಲವು ತಿರುಳಿನಂತೆ ಅದನ್ನು ಮುಚ್ಚಿಕೊಂಡಿದೆ. ಪ್ರಪಂಚದ ಸಂತಾ ನಾಂಕುರಕ್ಕೆ ಆಶ್ರಯಳಾಗಿ ಮಾತ್ರ ಸ್ತ್ರೀಯಳು ಇರತಕ್ಕುದು ಅದಕ್ಕಿಂತ ಹೆಚ್ಚಿನ ಯೋಗ್ಯತೆಯಾಗಲಿ, ಗೌರವವಾಗಲಿ, ಸ್ಥಾನಮಾನಗಳಾಗಲಿ ಹೆಣ್ಣಾದವಳಿಗೆ ಇಲ್ಲ. ಇದ್ದರೆ ಇಷ್ಟು – ಯಾರಾದರೊಬ್ಬ ಪುಣ್ಯಾತ್ಮ ಚೀಪಿ ಬಿಸುಡುವುದು. ಅದನ್ನವಳು ಮರ್ಯಾದೆಯೆಂದು ಭಾವಿಸಿಕೊಳ್ಳಬೇಕು ಆದರೆ ಪುರುಷನೋ! ಗಂಡಾಳಾಗಿ ಹುಟ್ಟಿದವನೋ! ಮಾನವ ಸೃಷ್ಟಿಯ ಅರ್ಧಾಂಶವನ್ನು ಒದೆಯಬೇಕಾದರೆ ಅರ್ಹತೆಯುಳ್ಳವನು ಅವನೇ! ಪೋಷಿಸ ಬೇಕಾದರೆ ಪೋಷಿಸುವವನೂ ಅವನೆ. 'ನಾನು ಗಂಡು' ಎಂಬುದೇ ದೊಡ್ಡದೊಂದು ಪೌರುಷ ವಾಕ್ಯ 'ನನಗೆ ಮೀಸೆ ಇದೆ' ಎಂಬುದೇ ದೊಡ್ಡ ಶಿಫಾರಸು. ಆದರೆ ಈ ಪೌರುಷವು ವಿಷಫಲದಂತಿದ್ದರೆ, ಅಥವಾ ಅಪಕ್ವ ಫಲವಾಗಿದ್ದರೆ, ಸಮಾಜದಲ್ಲಿ ಸ್ಥಾನವುಂಟೇ? ಒಂದಕ್ಕೆ ಉಂಟು,

ಇನ್ನೊಂದಕ್ಕೆ ಇಲ್ಲ. ಶ್ರೀಧರನ ಮಾನವೀಯತೆ ದುಷ್ಟವಾಗಿದ್ದರೂ ಅದಕ್ಕೆ ಲೋಕದಲ್ಲಿ ಎಡೆಯಿದೆ, ಮಾನವಿದೆ, ಗೌರವವಿದೆ, 'ಭೇಷ್ ಭಲೇ' ಇದೆ. ತನ್ನ ಗಂಡನದಕ್ಕೆ ಯಾವುದೂ ಇಲ್ಲ. ಇಹದಲ್ಲಿ ಮರ್ಯಾದೆಯಿಲ್ಲ, ಪರದಲ್ಲಿ ಗತಿಯಿಲ್ಲ.

ಹೀಗೆಲ್ಲ ಆಲೋಚನೆಗಳು ಸಮುದ್ರದ ಊರ್ಮಿಗಳಂತೆ ಉತ್ತರೋತ್ತರ ಚೋದಕವಾಗಿ ಏಳುತ್ತಿದ್ದುವು. ಹೊರಗೆ ಚಂದ್ರನು ನಗುತ್ತಿದ್ದನು. ತಾರೆಗಳು ಮಿನುಗುತ್ತಿದ್ದುವು. ಅವುಗಳ ಮೃದುಪ್ರಕಾಶವು ರಜನೀ ಹೃದಯದಲ್ಲಿ ವ್ಯಾಪಿಸಿದ ನಿಬಿಡಾಂಧಕಾರವನ್ನು ಭೇದಿಸಲು ಸಮರ್ಥಕವಾಗಲಿಲ್ಲ. ಕರಿಮುಖಕ್ಕೆ ಬಿಳಿಬಣ್ಣವನ್ನು ಪೂಸಿದಂತೆ, ದುರ್ಜನ ಹೃದಯಕ್ಕೆ ನೀತಿಪ್ರವಚನವನ್ನು ಚೆಲ್ಲಿದಂತೆ, ಹಾಸ್ಯಾಸ್ಪದವಾಗಿದ್ದಿತಲ್ಲದೆ ಬೇರೇನೂ ಅಲ್ಲ. ಕತ್ತಲೆಯೊಂದು, ಅಥವಾ ಚಂದ್ರಿಕೆಯೊಂದು, ಲೋಕದಲ್ಲಿರುತ್ತಿದ್ದರೆ, ಕತ್ತಲೆಯೇ ಬೆಳಕಿನಂತಾಗುತ್ತಿದ್ದಿತೇನೋ! ಚಂದ್ರಿಕೆಯೊಂದೇ ಅವ್ಯವಚ್ಛಿನ್ನ ಸೌಂದರ್ಯ ರಾಶಿಯಾಗಿರುತ್ತಿದ್ದಿತೇನೋ! ಎರಡೂ ಇದ್ದು ಲೋಕ ಕೆಟ್ಟಿತು. ಇದರಿಂದ ಕತ್ತಲೆಯ ನಿಜಸ್ವಭಾವವೂ ತಿಳಿಯುವುದಿಲ್ಲ. ಅದರ ನಿವಾರಣೆಯೂ ಆಗುವುದಿಲ್ಲ. ಬೆಳದಿಂಗಳ ಅಶಕ್ತತೆಯೊಂದೇ ವ್ಯಕ್ತವಾಗುವುದಲ್ಲದೆ ಬೇರೇನೂ ಇಲ್ಲ. ಹಾಗೆಯೆ ಪ್ರಪಂಚದ ಅನೀತಿ ನೀತಿಗಳು. ಇವೆರಡು ಪ್ರಮೇಯಗಳಲ್ಲಿ ಏನಾದರೂ ಒಂದೇ ಇರುತ್ತಿದ್ದರೆ ಮಾನವನೆಷ್ಟು ಸುಖಿಯಾಗಿರುತ್ತಿದ್ದನು? ಇಂತಹ ಹೃದಯವೇಧಕವಾದ ಭಾವನಾ ಚಕ್ರಗಳ ಮೇಲೆ ಪಯಣವಾಡುತ್ತಿದ್ದವಳಿಗೆ ಘಂಟೆ ಹನ್ನೊಂದಾದುದು ತಿಳಿಯಲಿಲ್ಲ.

ಸೀತಮ್ಮನ ಕಣ್ಣು ನಿದ್ರಾಭಾರದಿಂದ ನಿಮೀಲಿತವಾಯಿತು. ಮಲಗುವಾಗ ಕೋಣೆಯೊಳಗೆ ಬೀಗ ಹಾಕಿಕೊಳ್ಳಬೇಕೆಂಬುದು ಮಾನವತಿಯಾದ ಅವಳಿಗೆ ಕೆಲಕಾಲದಿಂದಿತ್ತ ತಿಳಿದುಬಂದ ಅನುಭವ. ಅವಳ ಶಯ್ಯಾಗೃಹದ ಬಾಗಿಲ ಬೀಚಾಗ್ರಗಳು ಅಷ್ಟು ಗಟ್ಟಿಯಾಗಿರಲಿಲ್ಲ. ಹೊರಗಿನಿಂದ ದೂಡಿದರೆ, ಸುಲಭವಾಗಿ ತೆರೆಯುವಷ್ಟು ದುರ್ಬಲವಾಗಿದ್ದುವು. ಹಿಂದೆಂದೂ ಒಳಗಿನಿಂದ ಬೀಗಹಾಕಲು ಮರೆತುದಿಲ್ಲ. ಈ ದಿನ ಬೀಗವನ್ನು ಹುಡುಕುತ್ತಾಳೆ. ಅದು ಕಾಣೆ.

ಒಮ್ಮೆ ಮೈ ಜುಮ್ಮೆಂದಿತು. ಎಂಥ ಪ್ರಮಾದವಿದು! ಎಲ್ಲಿ ಮರೆತೆನೋ ಏನೋ! ಇನ್ನದನ್ನು ಹುಡುಕಿ ತರುವುದೆಂದರೆ ಅಸಾಧ್ಯವಾದ ಕೆಲಸ. ಮನೆ

ಮುಂದಿಯೆಲ್ಲ ಯಾವಾಗಲೂ ಅಲಭ್ಯವಾದ ಪೂರ್ಣ ನಿದ್ರಾಸುಖವನ್ನು ಅನುಭವಿಸುತ್ತಿರುವಾಗ, ಈ ಒಂದು ಕಿರುಕುಳದಿಂದ ಅವರಿಗೆ ನಿದ್ರಾಭಂಗವನ್ನು ತರುವುದೇ? ಸ್ತ್ರೀಯರ ಮಾನರಕ್ಷಣೆ ಮಾಡುವುದು ಬೀಜಾಗ್ರವಲ್ಲ, ಬೀಗವಲ್ಲ. ಹೃದಯಕವಾಟ! ದೃಢತೆಯ ಬೀಜಾಗ್ರ! ನೀತಿಯ ಬೀಗ! ಅವು ಯಥಾಸ್ಥಾನದಲ್ಲಿಯೇ ಇರುವಷ್ಟು ಕಾಲ ಯಾರ ಭೀತಿಯೇನು? ಎಂದೆಣಿಸಿ ಬಾಗಿಲನ್ನು ಎಳೆದುಕೊಂಡು ಹಾಸಿಗೆ ಹಿಡಿದಿದ್ದಳು.

ಜಾಗರದಿಂದ ಏರಿದುದೇ ಸ್ವಪ್ನಸಾಮ್ರಾಜ್ಯಕ್ಕೆ! ಅದೇ ದಿನ ದ್ರೌಪದೀ ವಸ್ತ್ರಾಪಹರಣವನ್ನೋದಿ ಎದೆ ಆರುವಷ್ಟು ಕಣ್ಣೀರು ಸುರಿಸಿದ್ದಳು. ದ್ರೌಪದಿಯ ಅಸಹಾಯಸ್ಥಿತಿಯ ಚಿತ್ರವು, ಆಣೆಹೊಡೆದು ಅಂಟಿಸಿದಂತೆ, ಹೃದಯಭಿತ್ತಿಯಲ್ಲಿ ಅಚ್ಚಳಿಯದೆ ನಿಂತಿತ್ತು. ರಾತ್ರಿಯಲ್ಲಿ ಯಾರೋ ಒಬ್ಬ ಪುರುಷ, ದುಶ್ಶಾಸನ ವೇಷಧಾರಿಯಾಗಿ ಇದಿರಲ್ಲಿ ಬಂತು ನಿಂತಂತಾಯಿತು. ಆವಳಿಗೆ ದ್ರೌಪದಿಯ ವೇಷ ತನ್ನಿಂದ ತಾನೇ ಬಂದಿತು. ಆದರೆ ಪರೋಕ್ಷದಲ್ಲಿ ನಿಂತು ದ್ರೌಪದಿಯ ಮಾನರಕ್ಷಣ ದೀಕ್ಷೆಯನ್ನು ವಹಿಸಿದ ಯಾದವ ಪಾತ್ರಧಾರಣ ಮಾಡಲು ಯಾರೂ ಮುಂದೆ ಬರಲಿಲ್ಲ.

ಸ್ವಪ್ನದಲ್ಲೆ ಹೃದಯದ ತಂತಿಗಳನ್ನೆಳೆದು ಕಡಿದಂತಾಯಿತು. ಕಣ್ಣಿಗ, ಮನಸ್ಸಿಗೆ ಜಾಗರದ ಜ್ಞಾನವು ಬಿಂದುಬಿಂದುವಾಗಿ ಬೀಳಲಾರಂಭಿಸಿತು ಹಾಸಿಗೆಯಲ್ಲಿ ಎದ್ದು ಕುಳಿತು, ಕಣ್ಣೀರಿಂದ ತೊಯಿದುಹೋದ ಹಾಸನ್ನು ಅತ್ತಿತ್ತ ಎಳೆದು ಸರಿಮಾಡಿ, ಅರ್ಧ ಸ್ವಪ್ನ, ಅರ್ಧ ಜಾಗರದಲ್ಲಿ, ಮಲಗಬೇಕೆಂದು ಪ್ರವರ್ತಿಸುವಲ್ಲಿ, ಅಲ್ಲೇ ಅದೇ ಕೋಣೆಯೊಳಗೆ ಯಾರದೋ ಕಾಲ ಸಪ್ಪಳ!

ಸೀತಮ್ಮ ದಿಗ್ಭ್ರಾಂತಳಾದಳು. ವಾಕ್‌ಶಕ್ತಿ ಸಂಪೂರ್ಣವಾಗಿ ನಷ್ಟ ಹೊಂದಿತ್ತು. ಅರಚಬೇಕೆಂಬ ಉತ್ಸಾಹ. ನಾಲಗೆ ದಂಟಲೊಳಗೆ ಅಡಗಿದೆ. ಬಾಯಿ ಒಣಗಿದೆ. ತಾನು ಜೀವಿಸಿಕೊಂಡಿದ್ದೇನೆಂಬ ಅನುಭವವಿದೆ. ಸ್ಪರ್ಶ ಜ್ಞಾನವಿದೆ; ಶ್ರವಣ ಜ್ಞಾನವಿದೆ. ಮಾತೊಂದು ಪಾತಾಳದಲ್ಲಿ ಅಡಗಿಕೊಂಡಿದೆಯಲ್ಲ!

ಸಪ್ಪಳವು ಸಮೀಪದಲ್ಲಿಯೇ ಕೇಳಿದಂತಾಯಿತು. ಏನೋ ಒಂದು ಆಕಾರವು ಕತ್ತಲೆಯ ನಡುವೆಯೂ ಸಂಚಲಿಸಿಕೊಂಡು ಸಮೀಪಿಸಿದಂತೆ ಭಾಸ

ಪಾಯಿತು. ರೂಪವೆಂದರೆ ಮನುಷ್ಯರೂಪ! ಮನುಷ್ಯರೂಪದಲ್ಲಿಯೂ ಪರಿಚಿತ ರೂಪವೇ ಆಗಿರಬಹುದೇ? ಒಂದೇ ನೆಗೆತದಿಂದ ಪಾತಾಳದ ಅಂತರಾಳಕ್ಕೆ ಹಾರುವುದು ಸಾಧ್ಯವಾಗಿರುತ್ತಿದ್ದರೆ ಹಾಗೆಯೇ ಮಾಡುವುದಕ್ಕವಳು ಆಗ ಹಿಂದೆಗೆಯುತ್ತಿರಲಿಲ್ಲ!

ಆ ಅಂಧಕಾರದಲ್ಲಿ ರೂಪುಗೊಂಡು ಬರುತ್ತಿದ್ದ ಛಾಯೆಯನ್ನು ನೋಡಿ, ಭೂತವೋ ಪಿಶಾಚವೋ ಎಂದವಳು ಬೆಚ್ಚಿಬಿದ್ದಳು. ಹೇಗಿದ್ದರೂ ಸರಿ, ದೀಪ ಉರಿಸಿ ನೋಡಿಬಿಡುತ್ತೇನೆಂದು, ಅದಿದ್ದ ಸ್ಥಳಕ್ಕೆ ಕೈಹಾಕಿ ನೋಡುತ್ತಾಳೆ. ದೀಪವೂ ಇಲ್ಲ, ಬಂಕಿಪೆಟ್ಟಿಗೆಯೂ ಇಲ್ಲ! ದೇವರೇ ಗತಿಯೆಂದು, ಹತ್ತು ಮಣ ಭಾರದ ಕಲ್ಲನ್ನು ಸಂಪೂರ್ಣ ಶಕ್ತಿಯಿಂದ ನೂಕುವಂತೆ, ಒಮ್ಮೆ ನಾಲಗೆಯನ್ನು ಹಿಡಿದು ನೂಕಿ ಬೊಬ್ಬೆಹೊಡೆದಳು

ಛಾಯಾರೂಪವು ತತ್ತರಿಸಿದಂತಾಯಿತು 'ಪರಕೀಯನಲ್ಲ ನಾನು' ಎಂಬ ಮಾತು ಆಕೆಗೆ ಕೇಳಿಸಿದಂತಾಯಿತು.

ಸೀತಮ್ಮ ವ್ಯಕ್ತಿಸಂಶೋಧನೆಯ ಅಭಿಲಾಷೆಯಲ್ಲಿರಲಿಲ್ಲ. 'ಕಳ್ಳರೋ ಕಳ್ಳರು'' ಎಂದು ಎದೆಯೊಡೆಯುವಷ್ಟು ಕೂಗಿದಳು.

ಇದನ್ನು ಕೇಳಿ ಕೆಳಗೆ ಮಲಗಿದ್ದ ರಾಧಮ್ಮನಿಗೆ ಎಚ್ಚರವಾಯಿತು. ಬಾಬುವಿನ ನಿದ್ರೆ ಒಡೆಯಿತು ಮಕ್ಕಳು ಮರಿಗಳು ಚೀರತೊಡಗಿದುವು. ಮನೆಯೇ ಅದುರಿ ಬೀಳುವಂತಾಯಿತು. 'ಗುದಿಗೆ! ದೊಣ್ಣೆ! ಅಯ್ಯೋ! ಸಹಾಯಕ್ಕೆ ಬನ್ನಿ! ಸಹಾಯಕ್ಕೆ ಬನ್ನಿ!!'' ಎಂಬ ಹತ್ತೆಂಟು ರೋದನಗಳು ಏಕಕಾಲಕ್ಕೆ ಉದ್ಭವಿಸಿದುದರಿಂದ, ಛಾಯಾರೂಪವು ಹಿಂದ ಸರಿಯಿತು! ಕೆಳಗೆ ದೀಪದ ಬೆಳಕಾಗುವಷ್ಟರಲ್ಲಿ ಏಣಿ ಇಳಿಯಿತು. ಬಾಬು ದೊಣ್ಣೆ ಹಿಡಿದು ಏರಿಬರುವಾಗ, ಯಾರೂ ಇಲ್ಲ. ಸೀತಮ್ಮನು ಮಾತ್ರ ಮಾತುಬಾರದ ಬೆರಗಿನಿಂದ, ಧಾರಾಕಾರವಾಗಿ ಬೆವರು ಸುರಿಸಿಕೊಂಡು ನೆಲದ ಮೇಲೆ ಬಿದ್ದಿದ್ದಳು.

'ಏನಮ್ಮ? ಯಾರು? ಎಲ್ಲಿಗೆ ಹೋದರು? ಏನಾಯಿತು?' ಹೀಗೆ ಎಷ್ಟು ಕೇಳಿದರೂ ಸೀತಮ್ಮನ ಉತ್ತರವಿಲ್ಲ. ಹತ್ತು ಹದಿನೈದು ನಿಮಿಷಗಳು ಕಳೆದ ಮೇಲೆ, ರಾಧಮ್ಮ, ಪಾರ್ವತಿ, ಮಕ್ಕಳು ಮರಿಗಳು ಎಲ್ಲರೂ ಸುತ್ತುಕಟ್ಟಿ ನಿಂತ ಮೇಲೆ, ಕಳ್ಳರು ಮನೆ ನುಗ್ಗಿದರೆಂಬ ಸಮಾಚಾರವನ್ನು ಬಿಕ್ಕುಮಾತಿನಲ್ಲಿ ಹೇಳಿದಳು.

ಮನೆಯ ಯಾವ ಮೂಲೆಯಲ್ಲಿ ನೋಡಿದರೂ ಕಳ್ಳರ ಪತ್ತೆಯಾಗಲಿಲ್ಲ.

ಪ್ರಜ್ಞೆಬರುವಾಗ ಸೀತಮ್ಮನಿಗೊಂದು ಸಂದೇಹ—'ಆದುದೆಲ್ಲ ನಿಜವೇ? ಅಥವಾ ಸ್ವಪ್ನಸಂಭವವೆ?' ಇವಳ ಸಂದೇಹದಿಂದ ರಾಧಮ್ಮನ ಸಂದೇಹವು ಪರಿಹಾರವಾಯಿತೆನ್ನಬಹುದು.

'ನೀನು ಕನಸಿನಲ್ಲಿ ಕೂಗಿದುದು ಮಗಳೇ! ಈ ದಿನ ನೀನಿಲ್ಲಿ ಒಬ್ಬಳೇ ಮಲಗಬಾರದು. ನಮ್ಮ ಕೋಣೆಗೆ ಬಾ! ಕೆಟ್ಟ ಸ್ವಪ್ನವೆಂದು ಅಲಕ್ಷ್ಯಮಾಡು ವುದೇಕೆ? ನನ್ನ ಬಳಿಯಲ್ಲಿ ಮಲಗಿದರೆ, ಅಂಥ ಕೆಡುಗನಸುಗಳೂ ಬರಲಾರವು' ಎಂದಾಕೆಯನ್ನು ಕೆಳಗೆ ಕರೆದುಕೊಂಡು ಹೋಗಿ ತನ್ನ ಹಾಸಿಗೆಯಲ್ಲಿಯೇ ಮಲಗಿಸಿಕೊಂಡಳು

ರಾಧಮ್ಮ ಹೇಳಿದುದು ನಿಜ. ಆಕೆಯ ಬಳಿಯಲ್ಲಿಯೇ ಇದ್ದ ಕನಬರಿ ಗೆಗೆ ಹೆದರಿಯೇನೋ, ಆ ರಾತ್ರಿ ಸೀತಮ್ಮನಿಗೆ ಬೇರೆ ದುಃಸ್ವಪ್ನಗಳಾಗಲಿಲ್ಲ ನಿದ್ದೆಯೂ ಬರಲಿಲ್ಲ ಮನಸ್ಸಿನಲ್ಲಿ ಮಾತ್ರ ಕೆಲ ಪ್ರಶ್ನಾರ್ಥಕ ಚಿಹ್ನೆಗಳು - ನಿನ್ನೆ ಮಲಗುವಾಗ ಬೀಗ ದೊರೆಯಲಿಲ್ಲ! ಏಕೆ? ದೀಪವನ್ನು ಬಳಿಯಲ್ಲಿ ಇಟ್ಟು ಮಲಗಿದ್ದೆನಷ್ಟೆ? ಅದೂ ದೊರೆಯಲಿಲ್ಲ, ಏಕೆ?

ಈ ಪ್ರಶ್ನೆಗೆ ಉತ್ತರವೂ ದೊರೆಯಲಿಲ್ಲ

# ಒಂಬತ್ತನೆಯ ಪ್ರಕರಣ

ಮರುದಿನ ಬೆಳಗ್ಗೆ ಶ್ರೀಧರನು ಮನೆಗೆ ಬಂದು 'ಈ ದಿನ ಸಾಯಂಕಾಲ ಐದು ಘಂಟೆಗೆ ನಾವು ಬೀಗರಹಳ್ಳಿಯ ಹೊಸಮನೆಗೆ ಹೋಗಬೇಕಾಗಿದೆ. ಮಧ್ಯಾಹ್ನ ಹನ್ನೆರಡು ಘಂಟೆಗೆ 'ಮೋಟರ ಲಾರಿ' ಬಂದೀತು. ಸಾಮಾನು ಗಳನ್ನು ಎರಡೇ ಘಂಟೆಗಳೊಳಗೆ ಸಾಗಿಸಬಹುದು ಐದು ಘಂಟೆಯ ಸಮಯಕ್ಕೆ, ಪಾರ್ವತಿ ಮತ್ತು ಅವಳ ಸಂಗಡಿಗರಾಗಿ ಹೋಗುವವರು (ಇವರಾರೆಂದು ಹೇಳುವ ಪಾಪವನ್ನು ಶ್ರೀಧರ ಪೊರಲಿಲ್ಲ) ಹೋಗಲಿ; ಮಕ್ಕ ಳಾರೂ ಬರಬೇಕಾಗಿಲ್ಲ. ಇಲ್ಲಿಂದಲ್ಲಿಗೆ ಆರೇ ಮೈಲು. ಮನೆಯ ವರೆಗೆ ರಸ್ತೆ ಇಲ್ಲದಿದ್ದರೂ ಬಂಡಿ ಹೋಗುವುದಕ್ಕೊಂದು ಒಳರಸ್ತೆಯಿದೆ. ನೀವು ಹೋಗುವ ಮೊದಲೆ ಅಲ್ಲಿ ಅಡಿಗೆಯ ಭಟ್ಟನಿರುತ್ತಾನೆ. ಶಾಸ್ತ್ರೋಕ್ತ ವಿಧಿ ಪ್ರಕಾರ ನೀವು ನೂತನ ಗೃಹಪ್ರವೇಶ ಮಾಡಿದರಾಯಿತು' ಎಂದು ಹುಕು ಮನ್ನು ಕೊಟ್ಟನು.

ರಾಧಮ್ಮನಿಗೆ ಈ ಮಾತಿನ ಗಣನೆಯೆ ಬರಲಿಲ್ಲ. 'ಶ್ರೀಧರ! ಶ್ರೀಧರ! ನಿನ್ನೆಯ ಕಥೆಯನ್ನು ಕೇಳಿದೆಯೊ?'' ಎಂದು ಪ್ರಶ್ನಿಸಿದಳು.

ಶ್ರೀಧರ – ಇಲ್ಲ, ಏನದು?

ರಾಧಮ್ಮ – 'ಮಧ್ಯರಾತ್ರಿಯ ಸಮಯದಲ್ಲಿ, ಮನೆಯ ಗಂಡುಸರಿಲ್ಲದ ಗುಟ್ಟನ್ನರಿತು ಯಾರೋ ಕಳ್ಳರು ಮನೆಯೊಳಗೆ ನುಗ್ಗಿದರು'- ಹೀಗೆ ಆಂಗಿಕ ವಾಚಿಕಾಭಿನಯಗಳೊಂದಿಗೆ ನಡೆದ ಸಂಗತಿಗಳನ್ನೆಲ್ಲ ಒಂದಿಷ್ಟು ತಪ್ಪದಂತೆ ಹೇಳಿದಳು ಶ್ರೀಧರನಲ್ಲಿ ಅದು ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ. ಶ್ರೀಧರನು ನಿರ್ವಿಕಾರಚಿತ್ತನಂತಿದ್ದನು.

ರಾಧಮ್ಮ – ರಾತ್ರಿಯ ಸಮಯದಲ್ಲಿಯಾದರೂ ಮನೆಯೊಳಗೆ ಇದ್ದು ಬಿಡು, ಎಂದು ನಿನ್ನ ಕಾಲು ಹಿಡಿದು ಪ್ರಾರ್ಥಿಸುತ್ತಿದ್ದೆನಲ್ಲ ನೀನು ಮುದು ಕಿಯ ಮಾತನ್ನು ಹಾರಿಸಿಬಿಟ್ಟೆ.

ತಾನು ರಾತ್ರಿಯಲ್ಲಿ ತಡವಾಗಿ ಮನೆಗೆ ಬರುವುದು ಮಹಾಪರಾಧ ವೆಂಬುದಕ್ಕೆ ಆಧಾರ ಸಮೇತವಾಗಿ ಕೊಟ್ಟ ರಾಧಮ್ಮನ ರುಜುವಾತಿನಿಂದಲೂ ಶ್ರೀಧರನ ಹೃದಯವು ಕದಲಲಿಲ್ಲ. ಅವನು 'ಛಿಕ್'' ಎಂದು ನಕ್ಕನು.

ರಾಧಮ್ಮ:– ನಿನಗೆ ನಗು; ನನಗೆ ಪ್ರಾಣಸಂಕಟ.

ಶ್ರೀಧರ:- ನಿನಗೇನು ಹುಚ್ಚು ಹಿಡಿಯಿತಮ್ಮ? ಶ್ರೀಧರನ ಉಸಿರು ಮಾತ್ರ ಇರುವಷ್ಟು ಕಾಲ, ಈ ಮನೆಯೊಳಗೆ ಕಾಲಿಡಲು ಯಾವ ಕಳ್ಳಕಾಕರಿಗೂ ಎಡೆಯಿಲ್ಲ.

ರಾಧಮ್ಮ.– ಹಾಗಾದರೆ ನಿನ್ನೆ ಯಾರು ಬಂದುದು?

ಶ್ರೀಧರ:– ಯಾರು ಬಂದಿದ್ದಾರೆ? ಯಾರೂ ಇಲ್ಲ. ನಿಮ್ಮ ಭ್ರಾಂತಿಯೇ ಕಳ್ಳರನ್ನು ಬರಿಸಿದುದು. ಈ ಮನೆಗೆ ಬಂದು ಹತ್ತು ವರ್ಷವಾಯಿತು. ಇದುವರೆಗೆ ಬಾರದ ಕಳ್ಳರು ನಿನ್ನೆ ಎಲ್ಲಿಂದ ಬಂದಿರಬಹುದು?

ರಾಧಮ್ಮ:– ಅದೇನೋ ನನಗರಿಯದು. ಈ ಮನೆಯನ್ನು ಬಿಟ್ಟು ನೀನು ಹೋಗುವುದೆಂದರೆ ನನಗೇಕೋ ಮೈನಡುಕವುಂಟಾಗುತ್ತದೆ

ಶ್ರೀಧರ:- ಅಂಥ ಹೆದರಿಕೆಯೇನೂ ಇಲ್ಲ ತಾಯಿ. ಮನೆಗೆ ಇಬ್ಬರು ಕಾವಲುಗಾರರನ್ನಿರಿಸುತ್ತೇನೆ. ಅಂಗಳದ 'ಗೇಟ'ನ್ನು ಹಾಕಿ ಮನೆಯ ಅಗುಳಿಗಳನ್ನು ಭದ್ರವಾಗಿ ಇರುಕಿಸಿಕೊಂಡು ಸುಖವಾಗಿ ಗೊರಕೆ ಹೊಡೆದು ನಿದ್ರೆ ಮಾಡಿ. ಕಳ್ಳರು ಬಾರದಂತೆ ಮಂತ್ರವಾದ ಮಾಡುತ್ತೇನೆ. ಭೀತಿಯಿಲ್ಲ!

ರಾಧಮ್ಮ:– ನನ್ನ ಮನಸ್ಸೇಕೋ ಮಂಕಾಗಿದೆ. ಏನು ಮಾಡಬೇಕು? ಮಾಡಬಾರದು? ತಿಳಿಯುವುದಿಲ್ಲ. ಕೆಲಸ ಮಾಡುವುದಕ್ಕೆಂದು ಹೊರಟರೆ, ಹೋದಲ್ಲಿಯೇ ಹೋಗುವುದು; ಬಂದಲ್ಲಿಯೇ ಬರುವುದು; ಅಲ್ಲದ ಏನು ಮಾಡುವುದಕ್ಕೂ ಬರುವುದಿಲ್ಲ. ` ಈ ದಿನ ಬೆಳಗ್ಗೆ ಐದು ಘಂಟೆಯಿಂದ ಪ್ರಾರಂಭಿಸಿ ಈಗಿನ ವರೆಗೆ ಬಲಗಣ್ಣೊಂದು ಹಾರುತ್ತಿದೆ. ಹೆಂಗುಸರಿಗೆ ಬಲಗಣ್ಣು ಹಾರುವುದು ಕೆಟ್ಟದೆನ್ನುತ್ತಾರಲ್ಲ?

ಶ್ರೀಧರ:– ಹೀಗೆ ಶಕುನಗಳನ್ನು ನೋಡುತ್ತಾ ಕುಳಿತರೆ, ಅವುಗಳಿಗೆ ಬೆಲೆ ಕೊಟ್ಟರೆ, ಬಲಗಣ್ಣು ಹಾರಿ ಇಂದಿನ ಕೆಲಸವನ್ನು ಕೆಡಿಸೀತು; ಮತ್ತೆ ಕ್ರಮತಪ್ಪದೆ ದಿನಂಪ್ರತಿ, ಕಿವಿಯೊ ಮೂಗೊ ಬಾಯಿಯೊ ಹಾರಿ ಪ್ರತಿ ಕಾರ್ಯಕ್ಕೆ ವಿಘ್ನ ತಂದಾವು. ಇದನ್ನೆಲ್ಲ ಗಣನೆಗೆ ತಂದು ಮಾಡಬೇಕಾದ ಕೆಲಸಗಳನ್ನು ಮಾಡದಿರಲಾಗುವುದೇ?

ರಾಧಮ್ಮ:– ದಿನವನ್ನಾದರೂ ನೋಡಿರುವೆಯೋ ಇಲ್ಲವೋ?

ಶ್ರೀಧರ - ಎಲ್ಲ ದಿನಗಳೂ ಒಂದೇ ತೆರೆದವು, ೨೪ ಘಂಟೆಯವು ನೋಡುವುದೇನು? ಕೇಳುವುದೇನು?

ರಾಧಮ್ಮನ ಭೀತಿಯು ಅಕೃತಾರ್ಥವಾಗಿ ಹೊರನೂಸಿ ಮಾಯವಾಯಿತು. ಅಥವಾ ಮಾಯವಾಗದೆ ನಿರ್ವಾಹವಿರಲಿಲ್ಲ. 'ಹಾಗಾದರೆ ಎಲ್ಲರೂ ಅಣಿ ಮಾಡಿ ಗಂಟುಮೂಟೆ ಕಟ್ಟಿ ಸಿದ್ಧರಾಗಿರಿ' ಎಂದು ಆಕೆ ತನ್ನ ಸೊಸೆಯಂದಿರಲ್ಲಿ ಹೇಳಿದಳು.

ಹೆಂಗುಸರೊಂದಿಗೆ ಶ್ರೀಧರನು ಬರುವುದಿಲ್ಲವೆಂದೂ, ಆತನು ಸಂಜೆಗೆ ಮನೆಯ ಕಡೆಗೆ ಬಂದು ಎಲ್ಲ ವ್ಯವಸ್ಥೆಗಳನ್ನು ಮಾಡಿ, ಕಾರಿನಲ್ಲಿ ಬರುವುದೆಂದೂ ಗೊತ್ತಾಯಿತು. ಹನ್ನೆರಡು ಗಂಟೆಗೆ ಊಟ ತೀರಿಸಿ ಅವನು ಕಚೇರಿಯ ಕಡೆಗೆ ಸಾಗಿದನು. 'ಮೋಟರ್ ಲಾರಿ'ಗಳು ತಮ್ಮ ಬೆನ್ನಿನ ಮೇಲೆ ಸಾಮಾನಿನ ಮೂಟೆಗಳನ್ನು ಹೊರುವುದಕ್ಕೆ ತೊಡಗಿದುವು.

ಸಂಜೆ ಐದು ಘಂಟೆಗೆ ಸರಿಯಾಗಿ, ಪಾರ್ವತಿ ತನ್ನ ಮಕ್ಕಳನ್ನು ಸಮಾಧಾನಪಡಿಸಿ, ಅತ್ತೆಯ ಕಾಲಿಗೆ ಸಾಷ್ಟಾಂಗವೆರಗಿ, ಸೀತಮ್ಮನ ಕೈಹಿಡಿದುಕೊಂಡೇ ಕಾರನ್ನು ಹತ್ತಿದಳು. ಸೀತಮ್ಮನೂ ಹಾಗೆಯೆ; ಗದ್ಗದ ವಾಣಿಯಿಂದ ಅತ್ತೆಯ ಆಶೀರ್ವಾದವನ್ನು ಬೇಡಿಕೊಂಡು, ಕಾಲಿಗೆರಗಿದಳು.

ರಾಧಮ್ಮ ಸಣ್ಣ ಮಕ್ಕಳಂತೆ ಅತ್ತಳು. 'ಕಾರು' ಹೊರಟಿತು.

ಹೊರಡುವ ಮುಂಚೆ, ಸೀತಮ್ಮ ಬಾಬುವನ್ನು ಕರೆದು, 'ಬಾಬು! ಅಜಾಗ್ರತೆ ಮಾಡದೆ ಈ ಪತ್ರವನ್ನು ಕಳುಹಿಸಿಬಿಡು' ಎಂದು ಲಕ್ಕೋಟೆಯೊಂದನ್ನು ಕೊಟ್ಟಳು. ಬಾಬು 'ಆಯಿತಮ್ಮ! ಈಗಲೆ ಹಾಕುತ್ತೇನೆ' ಎಂದು ಟಪ್ಪಾಲುಕಟ್ಟೆಗೆ ಓಡಿದನು.

ಕಾರು ಕಣ್ಮರೆಯಾಯಿತು.

ಬೀದಿಯ ಬಳಿವರೆಗೆ ಬಂದಿದ್ದ ರಾಧಮ್ಮ ಬಹಳ ವ್ಯಸನದಿಂದ ಹೂಂಕಾರದೊಡನೆ ಒಂದು ನಿಟ್ಟುಸಿರು ಕರೆದು, ಕಸಬರಿಗೆ ಹಿಡಿದುಕೊಂಡು ಮನೆಯೊಳಗೆ ಗುಡಿಸಲಾರಂಭಿಸಿದಳು.

# ಹತ್ತನೆಯ ಪ್ರಕರಣ

ಎರಡು ಮೂರು ವರ್ಷಗಳ ಹಿಂದೆಯೇ ಊರು ಬಿಟ್ಟು, ಕಾಲಪ್ರವಾಹದಲ್ಲಿ ಹೇಗೋ ಈಜಿಕೊಂಡು, ಎಲ್ಲಿಯೋ ಯಾವ ದಡಕ್ಕೊ ಒಂದಿಹೋಗಿ ಜೀವ ಮಾತ್ರ ಬದುಕಿರುವ ವೆಂಕಟರಾಯನ ಸ್ಮರಣೆಯಾದರೂ ಅವನ ಪರಿಚಿತರಿಗೆ ಇಲ್ಲವಾಗಿದ್ದಿತೆಂದರೆ, ಗೆಳೆಯರ ಸ್ನೇಹಗುಣಕ್ಕೆ ಅಪವಾದವನ್ನು ಆರೋಪಿಸುವಂತಿಲ್ಲ. ಹಣವಿರುವವನಿಗೆ ದೊರೆವ ಸಂಭಾವನೆ ಬೇರೆ. ಹಣವೆಂಬ ರಸವಾರಿದ ಮೇಲೆ, ಅದೇ ಮನುಷ್ಯ ಹಣ್ಣಿನ ಒಣ ತೊಗಲಿನಷ್ಟು ಹಗುರವಾಗುತ್ತಾನೆ. ಹೃದಯಮಂದಿರವನ್ನು ಗುಡಿಸಿ ಸ್ವಚ್ಛ ಮಾಡಬೇಕಾದರೆ, ಮರವೆಯೆಂಬ ಸಂಮಾರ್ಜನಿಯಿಂದ ಅಂಥವರ ಒಡನಾಟ ಗೆಳೆತನಗಳನ್ನು ಗುಡಿಸಿಬಿಡಬೇಕಾಗುತ್ತದೆ.

ವೆಂಕಟರಾಯನಿಗೆ ಒದಗಿದ ಕಷ್ಟಗಳು ಸಂಪೂರ್ಣವಾಗಿ, ದುರ್ದೈವವಿಲಾಸವೆಂದಾಗಲಿ, ಪರರ ಕುತಂತ್ರದ ಪರಿಣಾಮವೆಂದಾಗಲಿ ಹೇಳಬರುವುದಿಲ್ಲ. ಚಳವಳದ ಪ್ರವಾಹದ ತೆರೆಯ ಮೇಲೆ, ಸವಾರಿ ಮಾಡಿ ಲೋಕಪೂಜೆಯನ್ನು ಸುಲಭವಾಗಿ ಪಡೆವ ದುರಭಿಲಾಷೆಗೆ, ಅವನು ಎಡೆಕೊಡಬೇಕಾಗಿದ್ದಿಲ್ಲ. ಕೀರ್ತಿಪಥದಲ್ಲಿ ಕ್ರಮಿಸುವುದೆಂದರೆ 'ಸರ್ಕಸಿ'ನಲ್ಲಿ ತಂತಿಯ ಮೇಲೆ ನಡೆಯುತ್ತಾರಲ್ಲ! ಅದರಷ್ಟು ಘೋರವೆಂಬುದನ್ನಾತನು ತಿಳಿಯಬಹುದಾಗಿದ್ದಿತು. ಒಂದು ಗಳಿಗೆ ಅದ್ಭುತ ಸಾಹಸಗಳನ್ನು ಕಂಡು ವಿಸ್ಮಯಗೊಂಡು ಕೈಚಪ್ಪಾಳೆ ಹೊಡೆಯುವವರಿದ್ದಾರೆ. ಕೆಳಗೆ ಬಿದ್ದರೆ? 'ಮಾಡಿದ್ದುಣ್ಣೊ ಮಾರಾಯ' ಎಂದು, ಹಿಂದೆ ಚಪ್ಪಾಳೆ ಹೊಡೆದವರೇ ಮತ್ತೆ ನೀತಿಬೋಧೆ ಮಾಡುತ್ತಾರೆ. ಕೀರ್ತಿಯೆಂದರೆ ಅದೊಂದು ತೆರದ ಮದಿರೆ. ಅದರ ಪಾನಾನಂದವು ಸ್ವಲ್ಪವೇ ಕಾಲ. ಅದರ ಲಾಲಸೆಯು ಮಹಾಪಾಪ. ಮನುಷ್ಯನ ಅಂತಃಸತ್ವವನ್ನು ಶಿಥಿಲಗೊಳಿಸಿ, ಭವಿಷ್ಯದ ಅಭಿವೃದ್ಧಿಯನ್ನು ಗಾಳಿಗೆ ತೂರಿಬಿಡುತ್ತದೆ. ಎಂದೆಲ್ಲ ತಿಳಿಯುವಾಗ ವೆಂಕಟರಾಯನ ಜೀವನಾರ್ಧಭಾಗವು ಸಂದುಹೋಯಿತು.

ಅವನ ಇನ್ನೊಂದು ತಪ್ಪು – ಪುನರ್ವಿವಾಹ! ಇದಕ್ಕೆ ಅವನೊಬ್ಬನೆ ಹೊಣೆಗಾರನಲ್ಲವೆಂದೂ ಒಂದು ದೃಷ್ಟಿಯಿಂದ ಭಾವಿಸಬಹುದು. ಮರಣಾ

ಸಂತರದಲ್ಲಿ, ಸ್ವರ್ಗದ್ವಾರಕ್ಕೆ ಹೋದೊಡನೆ, ಅಲ್ಲಿಯ ದ್ವಾರಪಾಲಕರು 'ಏನಯ್ಯ! ನಿನಗೆ ಗಂಡುಮಕ್ಕಳು ಎಷ್ಟು ಮಂದಿ' ಎಂದು ಪ್ರಶ್ನೆ ಹಾಕುತ್ತಾರೆ. 'ಗಂಡುಮಕ್ಕಳಿಲ್ಲ' ಎಂದರೆ, ಸ್ವರ್ಗದೊಳಗೆ ಕಾಲಿಡಲು ಬಿಡುವುದಿಲ್ಲ. 'ಪಾಸಪೋರ್ಟ'ನ್ನು ಕೊಡುವುದಿಲ್ಲ. ಗಂಡುಮಕ್ಕಳ ಸಂಖ್ಯೆ ಎಷ್ಟು ಹೆಚ್ಚಿತೋ ಅಷ್ಟು ಹೆಚ್ಚಾಗಿ ಸ್ವರ್ಗಲೋಕದಲ್ಲಿ ಪ್ರಶಸ್ತಿ. ಹತ್ತೆಂಟು ಪುತ್ರರನ್ನು ಪಡದು, ಸ್ವಾಗತ ಸಂಭ್ರಮಗಳೊಡನೆ ಸ್ವರ್ಗಮಂದಿರವನ್ನು ಪ್ರವೇಶಿಸಿ, ಪುತ್ರಸಂಖ್ಯಾಮಾನಕ್ಕೆ ಅನುಗುಣವಾಗಿ ಬೆಂಚಿನಲ್ಲಿಯೋ ಕುರ್ಚಿಯಲ್ಲಿಯೋ ಸೋಫದಲ್ಲಿಯೋ ಕುಳಿತು, ಮೀಸೆಯ ಮೇಲೆ ಕೈ; ಕಾಲಮೇಲೆ ಕಾಲಿಟ್ಟು, ರೀವಿಯಿಂದ ಕುಳಿತಿರುವ ಪುಣ್ಯಪುರುಷರನ್ನು ಅವಲೋಕಿಸುತ್ತ, ಮನಸ್ಸಿನೊಳಗೆ ಅಸೂಯಾ ನಿರಾಶೆಗಳನ್ನು ಅನುಭವಿಸುತ್ತಾ ಲಜ್ಜಾಭಾರದಿಂದ ವಿನಮ್ರಮುಖನಾದ, ಅಪುತ್ರನಿಗೆ ನರಕದಲ್ಲಿಯಾದರೂ ಸ್ಥಳವಿದೆಯೆ? ಎಂದು ಹುಡುಕಿಕೊಂಡೇ ಪರಲೋಕಯಾತ್ರೆಯನ್ನು ಮಾಡಬೇಕಾಗುವುದು. ಹೀಗಾಗಿ ಪುತ್ರಸಂತಾನವಿಲ್ಲದೆ ನಿರ್ವಾಹವಿಲ್ಲ; ಸ್ವರ್ಗದ 'ಪಾಸಪೋರ್ಟು' ದೊರಕುವುದಿಲ್ಲ ಎಂದು ರಾಧಮ್ಮ ಮೊದಲಾದ ಸ್ವರ್ಗದ 'ಏಜೆಂಟ'ರು, ವಿವಾಹಕ್ಕೆ ಪ್ರೋತ್ಸಾಹಿಸಿ ವೆಂಕಟರಾಯನ ಕೊರಳಿಗೊಂದು ಹುಡುಗಿಯನ್ನು ಕಟ್ಟಿದರು ಮದುವೆಗೆ ಮುಖ್ಯ ಕಾರಣ ಯಾರೇ ಇರಲಿ, ವೆಂಕಟರಾಯನು ಮದುವೆಯಾದ ಹುಡುಗಿ ಅವನ ಹೆಂಡತಿಯೇ ಆಗುತ್ತಾಳೆ. ಅವನ ಒಡವೆಯಾಗುತ್ತಾಳೆ. ಅವನ ಪೋಷ್ಯ ವರ್ಗಕ್ಕೆ ಸೇರುತ್ತಾಳೆ. ವೆಂಕಟರಾಯನು ಮದುವೆಯಾದುದು ಛಿದ್ರ ನೌಕೆಗೆ ಲಂಗರು ಹಾಕಿದಂತಾಯಿತು. ಲಂಗರಿಲ್ಲದಿರುತ್ತಿದ್ದರೆ, ತರಂಗ ತಾಡನ ರಭಸದಿಂದ, ಎಲ್ಲಿಯಾದರೂ ಬೀಳಬಹುದಾಗಿದ್ದಿತು ಲಂಗರು ಹಾಕಿದುದರಿಂದ, ಅಲ್ಲಿಂದ ಇನ್ನೊಂದೆಡೆಗೆ ಹರಿದೋಡಲು ಉಪಾಯವಿಲ್ಲ. ಇದ್ದಲ್ಲಿಯೇ ಮುಳುಗುವುದು ನಿಶ್ಚಯ. ವೆಂಕಟರಾಯನು ಉಭಯ ಸಂಕಟದಲ್ಲಿ ಸಿಕ್ಕಿಬಿದ್ದನು.

ಚಳವಳಕ್ಕಿಂತಲೂ ಹೆಚ್ಚಾಗಿ ಕಳವಳವು ಆತನಿಗೆ ಪ್ರಸಿದ್ಧಿಯನ್ನು ತಂದಿತು. ತನ್ನ ಮನೆಯಲ್ಲಿ ಅನ್ನ ದೊರೆತರೂ ಅದು ಹಂಗಿನ ಅನ್ನ. ಅನ್ನ ದಾತನಾದರೂ ಮರ್ಮಭೇದಕ ವಾಕ್ಯಗಳನ್ನಾಡುವುದರಲ್ಲಿ ಕಡಿಮೆಯವನಲ್ಲ.

ಜೇಬಿನಲ್ಲಿ ಕಾಸಿಲ್ಲ. ದೊಡ್ಡ ಆಲೋಚನೆಗಳು ಮನಸ್ಸಿನಲ್ಲಿ ಬೇರುಬಿಟ್ಟುವು. ಒಂದು ದಿನ, ಹಿಂದೆ ಇಲ್ಲದ, ಮುಂದೆ ಇರಲಾರದಂತಹ ಕೈಗಾರಿಕೆಯು ಯೋಜನೆ, ಇನ್ನೊಂದು ದಿನ, ಇಂದ್ರಭವನದಂತಹ ದಿವ್ಯಭೋಜನ ಮಂದಿರ ವನ್ನು ಸ್ಥಾಪಿಸಿ, ಜನರಿಂದ ದುಡ್ಡು ಸುಲಿದು, . . . ಅಲ್ಲ . . ಪ್ರಾಮಾಣಿಕತೆ ಯಿಂದ ಧನ ಪಡೆದು ಲೋಕದಲ್ಲಿ ಧನಿಕನಾಗಿ ಮೆರೆವ ಎಣಿಕೆ ಮತ್ತೊಂದು ದಿನ ಮತ್ತೊಂದು ಏರ್ಪಾಡು. ಹೀಗೆ ಕುಳಿತಲ್ಲಿಂದಲೆ ನವ್ಯಭವ್ಯ ಕಾರ್ಯೇಚ್ಛೆಗಳು ಒಂದೊಂದು ದಿನ ಬಾಳಿ ಮರುದಿನವೇ ಉದುರಿದವು. ಕಾರ್ಯಕ್ಕೆ ಕೈಯಿಕ್ಕುವುದಕ್ಕಿಂತಲೂ ಎಣಿಸುವುದು ಸುಲಭವೆಂದೂ, ಒಪ್ಪೊತ್ತು ಅರೆಯೂಟವಿಲ್ಲದ ಭಿಕಾರಿಯಲ್ಲಿಯೂ ಆಲೋಚನೆಯ ಭಂಡ ವಾಳಕ್ಕೆ ಕೊರತೆಯಿಲ್ಲವೆಂದೂ, ಬರಿಯ ಆಲೋಚನೆಯೆಂಬ ಸವೆದ ನಾಣ್ಯಕ್ಕೆ ಸರಕಾರದ ಯಾವ ಪ್ರಜೆಗಳೂ ಚಲಾವಣೆಯ ಬೆಲೆಯನ್ನು ಕೊಡುವುದಿಲ್ಲ ವೆಂದೂ ನಿಷ್ಕರ್ಮವಾದ ಆಲೋಚನೆಗಳಿಗೆ ದೂರಾಲೋಚನೆಗಳೆಂದಲ್ಲ— ದುರಾಲೋಚನೆಗಳೆಂದೇ ಹೆಸರೆಂದೂ ನವಾನುಭವವಾದುದು ವೆಂಕಟರಾಯ ನಿಗೆ ಇತ್ತೀಚೆಗೆ!

ತಮ್ಮನ ಕೈಕೆಳಗೆ ಆಳಾಗಿರುವುದಕ್ಕೆ ಅಭಿಮಾನ ಬಿಡಲಿಲ್ಲ. ಆ ನೆವ ಈ ನೆವ ಹೇಳಿ ಅನ್ಯರಿಂದ ಹಣ ಸುಲಿದು 'ಸ್ವಾಹಾ' ಮಾಡುವುದಕ್ಕೆ ಮನಸ್ಸಾಕ್ಷಿ ಬಿಡಲಿಲ್ಲ. ಹಸಿವೆಯ ಬೆಂಕಿಯಲ್ಲಿ ಆಸೆಗಳೆಲ್ಲ ಸುಟ್ಟು ಭಸ್ಮ ವಾದರೂ, ಯಾವ ಕೆಲಸವನ್ನೂ ಮಾಡದ ಅಭಿಮಾನ ಮನಸ್ಸಾಕ್ಷಿಗಳೆರಡು ಕರಗಲಿಲ್ಲ. ಅವೇ ಅವನನ್ನು ಕೆಲಸಕ್ಕಾಗಿ ಮದ್ರಾಸಿಗೆ ದೂಡಿದುವು; ಅನ್ಯರ ಪಾದಕ್ಕೆ ಪ್ರಣಾಮ ಮಾಡಿಸಿದುವು. ತನ್ನ ಒಡಹುಟ್ಟಿದನಾದರೂ ಯಾರು ತಾತ್ಸಾರದಿಂದ ತುಳಿದುಬಿಟ್ಟನೋ ಅವನಿಗೆ ಒಮ್ಮೊಮ್ಮೆ 'ಶರಣು' ಎಂದು ಹೇಳಿಸಿದುವು; ಹೆಡಮುರಿಗಟ್ಟಿ ನಿರಾಶೆಯ ಆಳದ ಗುಂಡಿಗೆ ದುಡುಮ್ಮೆಂದು ದೂಡಿಬಿಟ್ಟವು; ಆಗಬೇಕಾದುದನ್ನು ಮಾತ್ರ ಆಗಿಸಲಿಲ್ಲ; ಕೆಲಸ ಕೊಡಿಸಲಿಲ್ಲ. ಉದರಬ್ರಹ್ಮಾಂಡದಧಿದೈವ ಪೂಜೆಗೆ ದ್ರವ್ಯಗಳನ್ನು ಒದಗಿಸಲಿಲ್ಲ. ಬರಬರುತ್ತ ಅನುಭವದಿಂದ ಸಂಶೋಧನಾತ್ಮಕ ವಿಚಾರ ಹೆಚ್ಚಿತು. ಬಡತನಕ್ಕೂ ಮನಸ್ಸಾಕ್ಷಿಗೂ ಏನೇನೂ ಸಂಬಂಧವಿಲ್ಲ; ಅವೆ ರಡೂ ಪರಸ್ಪರ ಹಾಯ್ದುಕೊಳ್ಳುವ ಸೊಕ್ಕು ಹೋರಿಗಳು. ಎರಡನ್ನೂ

ಒಂದೇ ನೇಗಿಲಿಗೆ ಕಟ್ಟಿ ಕಾರ್ಯಕ್ಷೇತ್ರವನ್ನು ಉತ್ತು ಬೆದೆಮಾಡಿ ಬಿತ್ತಿ ಬೆಳೆ ಕೊಯ್ಯುವುದು ದುಸ್ತರ; ಎಂಬುದೂ ತಿಳಿದುಬಂತು.

ಇನ್ನು ಸೀತಮ್ಮನ ನೆನಪು! ಆಹಾ! ಸೀತಮ್ಮನೆಂದರೆ ಎಂತಹ ವಸ್ತುವದು! ಹೆಸರೇನೋ ಚಂದ. ಹೆಸರಿಗೆ ತಕ್ಕುದಾದ ಆಕಾರ ಇದೆ. ಆದರೆ ಹೃದಯವೋ? ಪ್ರಪಂಚಹೃದಯವನ್ನು ಭೇದಿಸಿ ಒಳಹೊಗುವ ಅಗಾಧಶಕ್ತಿ ವಿಜ್ಞಾನ ಶಾಸ್ತ್ರಕ್ಕಿದೆ. ಆದರೆ ಸ್ತ್ರೀಹೃದಯವನ್ನೊ? ಅದಿನ್ನೂ ಅಜ್ಞಾತ, ಅಜ್ಞೇಯ, ದುರ್ಜ್ಞೇಯ. ತನ್ನ ವಿಷಯದಲ್ಲಿ ಆಕೆಗೆ ಎಂತಹ ಭಾವವಿರಬಹುದು. 'ಗಂಡ'ನೆನಿಸಿಕೊಂಡು ತನ್ನಿಂದ ಅಸ್ಖಲಿತ ಪಾತಿವ್ರತ್ಯ ವನ್ನಪೇಕ್ಷಿಸುವ ಅಧಿಕಾರವುಳ್ಳ ಪುರುಷವ್ಯಕ್ತಿಯೊಂದು ಇದೆ; ಅಲ್ಲದೆ ಅದರ ಗುಣವೆಂತಹದೋ ನಡತೆ ಎಂತಹದೋ ಅವಳು ತಿಳಿದಿರಲು ಕಾರಣವಿಲ್ಲ. ಹಣವೊಂದನ್ನೆ ಮೆಚ್ಚುವ ಹುಡುಗಿ ಅವಳು, ಎಂದಾದರೆ, ಅವಳ ಮೆಚ್ಚಿಗೆ ಪಡೆವುದು ತನ್ನ ಈ ಜನ್ಮದ ಹಣೆಯಲ್ಲಿ ಬರೆದಿರಲಿಲ್ಲ. ತನ್ನ ರೂಪವೋ? ಅದೂ ಅಷ್ಟೆ. ಸಾಲದುದಕ್ಕೆ ವಯಸ್ಸೂ ಏರಿತು. ತನ್ನದು ದ್ವಿತೀಯ ವಿವಾಹ ದಾಂಪತ್ಯಸುಖದ ಪುನರನುಭವ, ಮರೆತುದನ್ನು ವಾರಮಾಡು ವುದಷ್ಟ ಅವಳದಾದರೋ ಹಾಗಿರಲು ಕಾರಣವಿಲ್ಲ. ಮದುವೆಯೆಂದರೇನೋ, ಗಂಡನೆಂದರೆ ಎಂತಹ ಸೊಬಗನೋ, ಗಂಡನ ಆತ್ಮಾಧಿದೇವಿಯೆನಿಸಿ, ತನ್ನ ಹೃದಯಪೀಠದಲ್ಲಿ ಆತನ ರೂಪವನ್ನು ಪ್ರತಿಷ್ಠೆಗೊಳಿಸಿ ಆತ್ಮತುಷ್ಟಿಯಿಂದಿರು ವಾಗ, 'ಯಾರೀಕೆ ಲೋಕದ ಪುಣ್ಯಮಯಿ?' ಎಂದು ಸ್ವರ್ಗದ ದೇವತೆ ಗಳೂ ಉಗ್ಗಡಣ ಮಾಡುತ್ತಿರುವರೇನೋ ಎಂದು ಮೊದಲಾಗಿ ಭಾವಿಸಿ ಕೊಂಡು ಇದ್ದಿರಬಹುದಾದ ಹುಡುಗಿಗೆ, ಇಂತಹ ಮದುವೆ! ಇಂತಹ ದಾಂಪತ್ಯ! ಇಂತಹ ಗಂಡಿನ, ಇಂತಹ ಗಂಡನ ವಾದರಿ! ಕೈಹಿಡಿದು ಬಿಟ್ಟವಳನ್ನು ಕಾಣದೆ ಮೂರು ವರ್ಷವಾಯಿತು. ತನ್ನ ಹೆಸರಲ್ಲಿ ಒಂದು ಚಿಕ್ಕಾಸನ್ನೂ ಕೊಟ್ಟುದಿಲ್ಲ. ತನ್ನ ಕೈಮುಟ್ಟಿದ ಒಂದು ಸೀರೆಯನ್ನಾಗಲಿ, ಒಂದು ರವಕೆಯೆನ್ನಾಗಲಿ ಕಳುಹಿಸಿದುದಿಲ್ಲ. ಒಮ್ಮೊಮ್ಮೆ ಕಾಗದ ಬರೆ ದಿದ್ದ – ಅದೂ ತಮ್ಮ ಕೊಟ್ಟ ಕಾಸಿನಿಂದ . . . ತಾನು ನ್ಯಾಯಪ್ರಕಾರವಾಗಿ, ಶಾಸ್ತ್ರವಿಧಿಪ್ರೋಕ್ತವಾಗಿ, ಕೈಹಿಡಿದವನಾಗಿದ್ದರೂ, ಅಂಗುಷ್ಠದ ಕೊನೆ ಯಿಂದ ರಾಕ್ಷಸಕಂಕಾಲವನ್ನು ಯೋಜನ ದೂರಕ್ಕೆ ಎತ್ತಿ ಬಿಸುಟ ರಾಮು

ನಂತೆ, ತನ್ನನ್ನು ಆಕೆ ಒದೆದು ಅರಬಿಸಮುದ್ರಕ್ಕೆ ಎಸೆದರೆ ತಪ್ಪೇನು? ಹೀಗೆ ಒಂದೊಂದೇ ವಿಷಯಗಳನ್ನು ಆಲೋಚಿಸುತ್ತಾ ಆತನ ರಕ್ತ ಬಿಸಿಯೇರಿತು. ಬುದ್ಧಿಯ ಕೀಲುಗಳು ಸಡಿಲಾದಂತಾಯಿತು.

ಮದ್ರಾಸಿನ ಒಂದು ಹೊಟೇಲಿನಲ್ಲಿ, ಭಗ್ನಹೃದಯನಾಗಿ ಕುಳಿತಿದ್ದ ವೆಂಕಟರಾಯನನ್ನು ಕಂಡು ಕೆಲವರು 'ಅಗೋ! ಅಲ್ಲೊಬ್ಬ ಬಿ. ಎ. ಓದಿದ ಬಿಕಾರಿಯಿದ್ದಾನೆ' ಎಂದು ಚಾಟೂಕ್ತಿಗಳನ್ನಾಡಿದರು. ಆತನ ಜೀವನರಹಸ್ಯ ದೊಳಗೆ ಇಣಿಕಿ ನೋಡಿದ ಹೆಗ್ಗಳಿಕೆಯುಳ್ಳ ಹಲವರು ಮರ್ಮಚ್ಛೇದಕ ವಾಕ್ಯಗಳನ್ನಾಡುತ್ತಿದ್ದರು. 'ಇವನು ಕಲಿತ ಹುಚ್ಚ; ಹುಚ್ಚನ್ನು ಕಲಿತವ. ಹೆಂಡತಿಯ ಚಿಂತೆ ಹತ್ತಿದೆ. ಇಂಥ ಮಾತುಗಳು ಕೇಳುವಷ್ಟು ಸಮೀಪ ದಲ್ಲಿಯೆ ಆಗುತ್ತಿದ್ದುವು. ಕೆಲಸವಿಲ್ಲದಿದ್ದರೆ ಹೋಗಲಿ, ಹೊಟ್ಟೆಗೆ ಕೂಳಿಲ್ಲ ದಿದ್ದರೆ ಹೋಗಲಿ. ಇಂಥ ಮಾತುಗಳನ್ನು ಕೇಳಬೇಕೆ? ದರಿದ್ರನಿಗೂ ಅಭಿ ಮಾನವಿದೆ. ಬಿಕಾರಿಗೂ ಅಭಿಮಾನವಿದೆ. ಆದರೆ ಅವರ ರಕ್ತ ಬಿಸಿಯಾದರೆ ಆಗುವುದೇನು? ಹುಚ್ಚು ತಾನೆ?

ಅಂಚೆಯಾಳು ಒಳಗೆ ಬಂದು 'ವೆಂಕಟರಾಯನಿಗೆ ಮನಿಆರ್ಡರ ಇದೆ. ನೀವೇ ವೆಂಕಟರಾಯರೆಂದರೆ'' ಎಂದು ಕೇಳಿದನು. 'ಹೌದು' ಎಂದಾಯಿತು. ನೂರು ನೂರು ರುಪಾಯಿಯ ಎರಡು ಮನಿಆರ್ಡರೂ ಏಕಕಾಲದಲ್ಲಿ ಬಂದಿತು. ಎರಡು ಪತ್ರಗಳೂ ಇದ್ದುವು ಹಣ ಜೇಬಿಗೆ ಬಿತ್ತು. ಪತ್ರದ ಅವಲೋಕನ ವಾಯಿತು.

ಪತ್ರಗಳಲ್ಲಿ ಒಂದು ಸೀತಮ್ಮನದು: ಇನ್ನೊಂದು ರಾಮಣ್ಣನದು; ಈ ಪ್ರಪಂಚದಲ್ಲಿ ಆತನಿಗಿರುವ ಇಬ್ಬರೇ ಇಬ್ಬರು ಸಮೀಪ ಬಂಧುಗಳ ಪತ್ರ ಗಳವು! ಎರಡನ್ನೂ ಅಮೂಲಾಗ್ರವಾಗಿ ನಾಲ್ಕು ನಾಲ್ಕು ಬಾರಿ ಓದಿದನು. ಮುಖ ಕೆಂಪೇರಿತು.

ಎರಡನ್ನೋದಿದಾಗಲೂ ಆತನಿಗಾದ ಅಭಿಪ್ರಾಯವಿಷ್ಟೆ: ಮಂಗಳೂ ರಲ್ಲಿ ಏನೋ ಒಳಸಂಚು ನಡೆಯುತ್ತದೆ. ತನಗೆ ತಿಳಿಯದಂತೆ ಸಂಗತಿಗಳಾ ಗುತ್ತವೆ. ಅಥವಾ ರಹಸ್ಯವಾದ ಸಂಗತಿಗಳನ್ನು ಮಾಡುತ್ತಿದ್ದಾರೆ. ತನ್ನ ಬಂಧುಗಳೆಲ್ಲರ ಆಶಯವೂ ಒಂದೇ ಆಗಿದ್ದಂತೆ ತೋರುತ್ತಿದೆ. ಸೀತಮ್ಮ

ಬರೆದಿದ್ದಾಳೆ ಒಂದು ತೆರದಲ್ಲಿ. ಅದಕ್ಕೆ ಯಾವ ಅರ್ಥವೂ ಆಗಬಹುದು. 'ಪಾರ್ವತಿಗೆ ಕಠಿನಾವತ್ತು. ಹಳ್ಳಿಗೆ ಹೊರಡಬೇಕಾಗಿದೆ. ತಮ್ಮಲ್ಲಿ ಕೇಳಿ ಅನುಮತಿ ಪಡೆಯಲು ಅವಕಾಶವಿಲ್ಲದ ಕಾರಣ ಹೊರಡುವಾಗ ಪತ್ರ ಬರೆದಿದ್ದೇನೆ' ಏನರ್ಥ ಇದಕ್ಕೆ? ಮದುವೆಯ ನೋಡಚೀಟ'ಲ್ಲವೆ ಇದು? ನೀನು ಇದ್ದರೂ ಇಲ್ಲದಿದ್ದರೂ ಒಂದೇ ಫಲ್ಲವಲ್ಲವೆ? ಸ್ವಾರ್ಜಿತ ಮಾಡಿ ಹೆಂಡತಿಯೊಬ್ಬಳ ಗೇಣುದ್ದದ ಹೊಟ್ಟೆ ತುಂಬಿಸಲಾರದ ನಿನ್ನನ್ನು ಬಿಟ್ಟು ಸ್ವಚ್ಛಂದವಾಗಿರುತ್ತೇನೆಂದಲ್ಲವೆ? ನಿನ್ನಲ್ಲಿ ಕೇಳಬೇಕಾದುದಿಲ್ಲ, ಹೇಳುವುದಕ್ಕ ನೀನು ಅಧಿಕಾರಿಯಲ್ಲ–ಎಂದಲ್ಲವೆ? ಹೀಗೆ ಆಲೋಚಿಸಿ ಮುಖವೆಲ್ಲ ಕದಡಿತು ಹತ್ತಾರು ನಿಮಿಷ ತಟಸ್ಥನಾಗಿದ್ದು ಮತ್ತೆ ಶಾಂತವಾಗಿ ಆಲೋಚಿಸಿ 'ಹೀಗೆ ಬರೆದರೆ ತಪ್ಪೇನು, ನಾನಂತಹ ಕ್ಷುದ್ರಜೀವಿ. ಇಂತಹ ಗಂಡರಿಗೆ ಇಂತಹ ಹೆಂಡಿರೆ ಆಗಬೇಕು. ಇಂಥ ಸಂಭಾವನೆಯೇ ದೊರೆಯಬೇಕು' ಎಂದು ದುಃಖಹೋಗಿ, ಒಂದು ರೀತಿಯ ವಿಕಟಹಾಸ್ಯ ಮುದ್ರೆಯು ಆತನ ಮುಖಕ್ಕೆ ಒದಗಿತು

ಅನಂತರ ರಾಮಣ್ಣನ ಪತ್ರವನ್ನೋದಿದನು. ಅದರಲ್ಲಿಯೂ ಸೀತೆಯ ವಿಷಯದಲ್ಲಿ ಸಂದೇಹವುಂಟಾಗದ ತೆರದಲ್ಲಿ ಯಥಾರ್ಥವನ್ನು ಮುಚ್ಚಿದ ಒಕ್ಕಣೆಯೇ ಆತನಿಗೆ ತೋರಿಬಂತು 'ಶ್ರೀಧರನ ಮನಸ್ಸು ವ್ಯತ್ಯಾಸ ಹೊಂದಿದಂತೆ ತೋರುತ್ತದೆ. ತಂಗಿಯ ವಿಷಯದಲ್ಲಿ ಭಕ್ತ್ಯಾದರವಿದ್ದಂತೆ ತೋರುತ್ತದೆ. ನಿಮ್ಮನ್ನೂ ಬಿಟ್ಟುಹಾಕುವಂತಿಲ್ಲ. ನೂರು ರುಪಾಯಿಯನ್ನು ಅವನೂ ಕಳುಹಿಸಿದ್ದಾನೆ. ನನ್ನ ಕೈಯಿಂದಲೂ ಕಳುಹಿಸಿದ್ದಾನೆ' ಪತ್ರದಲ್ಲಿ ಸೂಚಿತವಾದಂತೆ, ರಾಮಣ್ಣನಿಗೆ ಅನೇಕ ವಿಷಯಗಳು ತೋರಿಬಂದುವು. ವೆಂಕಟರಾಯನಿಗೆ ತೋರಿಬಾರವೆ? ಬಂದುವು ಈ ವಾಕ್ಯಗಳಲ್ಲಿ ಲೋಪಿಸಿ, ಅಧ್ಯಾಹಾರ್ಯವಾದವುಗಳನ್ನು ಅಧ್ಯಾಹಾರ ಮಾಡಿಕೊಂಡು ಓದಲಾಗಿ ಹೀಗೆ ತಿಳಿದುಬಂತು. 'ಶ್ರೀಧರನಿಗೆ ಮೊದಲು ಆಸೆ ಮಾತ್ರ ಇದ್ದುದು. ಈಗ ಆಸೆ ಮಾತ್ರವಲ್ಲ. ಉದ್ದೇಶವೂ ಸಿದ್ಧಿಸುವಂತಿದೆ. ಆದುದರಿಂದ ನನ್ನಲ್ಲಿ ದಯೆಯಿಟ್ಟಿದ್ದಾನೆ, ಸೀತಮ್ಮನಲ್ಲಿ ಪ್ರೀತಿಯಿಟ್ಟಿದ್ದಾನೆ ನಿನಗೆ ಬೇಕಾದುದು ಹಣಮಾತ್ರವಷ್ಟೆ? ಅದನ್ನು ತೆಗೆದುಕೊ. ಹೆಂಡತಿಯ ಮಾನಾಪಮಾನ ನಿನಗೇಕೆ? ತೆಗೆದುಕೋ ನಿನ್ನ ಯೋಗ್ಯತೆಯಲ್ಲಿರುವ

ಕಾಸನ್ನು' ಹೀಗಲ್ಲವೆ ಇದರ ತಾತ್ಪರ್ಯ? ಹೀಗೆ ಭಾವಿಸುತ್ತಿದ್ದುದೂ ಜನರ ಅಪಹಾಸ್ಯ ವಾಕ್ಯಗಳ ನೆನಪು ಬಂದುದೂ ಏಕಕಾಲದಲ್ಲಾಯಿತು. ಸಭ್ಯ ಸಮಾಜದಲ್ಲಿ ಎಲ್ಲ ಬಂಧುಬಳಗದವರ 'ಅಸ್ತು'ವಿನಿಂದ ಇಂತಹ ಕನ್ಯಾಪ ಹಾರಗಳಾಗುವುದುಂಟೆ? ಇದನ್ನು ತಡೆವ ಕಾನೂನುಗಳಿಲ್ಲವೆ? ಹೀಗೆ ಯೋಚಿಸಿ ವೆಂಕಟರಾಯನ ಮೆದುಳು ಬಿಸಿಯಾಯಿತು.

ಕೈಹಿಡಿದವಳು ಇಷ್ಟವಿದ್ದರೆ ಗಂಡನ ಹೆಂಡತಿಯಾಗಿರುತ್ತಾಳೆ. ಇಷ್ಟ ವಿಲ್ಲದಿದ್ದರೆ ಹೋಗುತ್ತಾಳೆ. ಲೋಕದಲ್ಲಿ ಹೀಗೆಷ್ಟೊ ಸಂಗತಿ ನಡೆದಿದೆ ಆದರೆ ಗಂಡನ ಹೆಂಡತಿ ಎನ್ನುವುದು, ಅನ್ಯರ ದಾಸಿಯಾಗಿರುವುದು, ಅಷ್ಟುಮಾತ್ರ ವಲ್ಲ, ಗಂಡನ ಬಾಯಿ ಮುಚ್ಚಿಸುವುದಕ್ಕೆ ಲಂಚವನ್ನೂ ಕೊಡುವುದು. ಗಂಡನ ಭಾವನೆ ಏನೆಂದು ಅರಿಯುವಷ್ಟೂ ಅಧೈರ್ಯಪಡದೆ ಸ್ವೇಚ್ಛಾಪ್ರವರ್ತನೆಗೆ ದುಡುಮ್ಮನೆ ಹಾರುವುದು' ಏನಿದು? ಎಂದು ವೆಂಕಟರಾಯನಿಗೆ ತಿಳಿಯಲಿಲ್ಲ. ವಿಚಾರವೆಲ್ಲಿಯೋ ಹಾರಿಹೋಯಿತು ಸಮಾಧಾನವೆಲ್ಲಿಯೋ ಜಾರಿಹೋ ಯಿತು.

ಎರಡು ಪತ್ರಗಳೂ ಒಟ್ಟಿಗೆ ಬಂದುದರಿಂದ ಒಂದಕ್ಕೆ ಇನ್ನೊಂದು ಸಾಕ್ಷಿ. ಎರಡೂ ತನ್ನ ಊಹೆಗೆ ಆಧಾರಗಳು. ಮನಿಆರ್ಡರುಗಳ, ಪತ್ರ ಗಳ ವಿಳಾಸದಲ್ಲಿ, ಏನೋ ಹೆಚ್ಚುಕಡಿಮೆಯಾಗಿ ಅವು ಊರೂರು ಸುತ್ತಿಬರು ವಾಗ ವಿಲಂಬವಾಗಿರಬಹುದೆಂಬ ಆಲೋಚನೆಯೇ ಅವನಿಗೆ ಹುಟ್ಟಲಿಲ್ಲ. ಇತ್ತೀಚೆಗೆ ತಾನು ಸೀತಮ್ಮನಿಗೆ ಪತ್ರ ಬರೆದುದುಂಟು, ಆಕೆಯಿಂದ ಉತ್ತರ ಬರುತ್ತಿರಲಿಲ್ಲ. ಐದಾರು ತಿಂಗಳಿಂದ ಆಕೆಗೆ ಅಕ್ಷರವೇ ಮರೆತಿದೆಯಲ್ಲ! ಎಲ್ಲ ನಿಜ, ಜನರು ಆಡುವುದು ನಿಜ. ಶ್ರೀಧರನು ಜಾರನೆಂಬುದು ನಿಜ, ಸೀತಮ್ಮ ನೀತಿಯ ಗಡಿಯಿಂದಾಚೆ ಎಷ್ಟೋ ದೂರ ಪಯಣಮಾಡಿದ್ದಾ ಳೆಂಬುದು ನಿಜ. ಇಷ್ಟು 'ನಿಜ'ಗಳ ನಡುವೆ ತಾನು ಬದುಕಿರುವುದೂ ನಿಜ.

ಹೀಗೆ ಎಣಿಸುತ್ತಿದ್ದಂತೆ ಆವೇಶ ಬಂದಂತಾಯಿತು. ಮೈಯ ರೋಮ ಗಳು ನಿಮಿರಿನಿಂತವು. ಮನಸ್ಸು ಬಹುದೂರ ಓಡಲಾರಂಭಿಸಿತು. ವಿಚಾರದ ತಡೆ ಹರಿಯಿತು. ಅನಿಯಮಿತ ವೇಗಕ್ಕೆ ಪ್ರಾರಂಭವಾಯಿತು. ತಡೆಹರಿದ ಮೋಟರ್ ಬಂಡಿಯಂತೆ ಎಲ್ಲೆಲ್ಲಿಯೋ ಹಾರಿ, ಹೇಗೆ ಹೇಗೋ ಕುಣಿಯು

ಲಾರಂಭಿಸಿತು. 'ಅವರಿಗೆ ಬುದ್ಧಿಕಲಿಸಬೇಕು!' ಎಂದು ಮನಸ್ಸಿಗೆ ಕಂಡು ಬಂತು. ಸ್ವತಃ ಬುದ್ಧಿಕೆಟ್ಟವರು ಲೋಕಶಿಕ್ಷಕರಾಗಲು ಏನೂ ಕಷ್ಟವಿಲ್ಲ ವೆಂಬುದನ್ನು ಒಪ್ಪಿಕೊಳ್ಳಬೇಡವೆ?

ಬುದ್ಧಿಕಲಿಸುವ ಮೊದಲನೆಯ ಮಾದರಿ ಪಾಠವೆಂದು, ನೂರು ರುಪಾಯಿಗಳ ಎರಡು ನೋಟುಗಳನ್ನು ಹೊರತೆಗೆದು ಬೆಂಕಿಕಡ್ಡಿ ಒರೆದು ಬೆಂಕಿ ಕೊಟ್ಟು 'ಅಹಹಾ! ಎಷ್ಟು ಬ್ರಹ್ಮಾನಂದ!' ಎಂದು ಬೆಂಕಿಯ ಸುತ್ತಲೂ ಕುಣಿದಾಡಿದನು. ನೋಟು ಭಸ್ಮವಾಗುವುದಕ್ಕೆ ಒಂದೇ ನಿಮಿಷ! ಅಷ್ಟು ಕಾಲ ಬ್ರಹ್ಮಾನಂದವೂ ಬಾಳಿತು!

ಅನಂತರ ರಸ್ತೆಗೇ ಹಾರಿದನು.

ಇದನ್ನು ನೋಡುತ್ತಿದ್ದವರೆಲ್ಲರೂ 'ನಿಜವಾಗಿ ಈತನಿಗೆ ಹುಚ್ಚು!' ಎಂದರು.

## ಹನ್ನೊಂದನೆಯ ಪ್ರಕರಣ

ಶ್ರೀಧರನ ಹಳ್ಳಿಯ ಮನೆಯು, ಅಕೃತಕ ಸುಂದರವಾದ ಹೊಲಗದ್ದೆಗಳಿಂದಲೂ, ಮರಗಿಡಗಳಿಂದಲೂ, ಪೊದರುಬಳ್ಳಿಗಳಿಂದಲೂ ಸುತ್ತುವರಿಯಲ್ಪಟ್ಟು, ನಯನಾಕರ್ಷಕವಾದ ಉನ್ನತ ಸ್ಥಲದಲ್ಲಿದ್ದು, ಪ್ರಕೃತಿದೇವಿಯ ತೊಡೆಯನ್ನೇರಿದ ಹಸುಗೂಸಿನಂತೆ ವಿರಾಜಿಸುತ್ತಿದ್ದಿತು. ಮನೆ ಹಳ್ಳಿಯ ಮಾದರಿಯದು ಪ್ರಾಚೀನಕಾಲದ ಕೋಟೆಯಂತೆ ಭದ್ರವಾಗಿದ್ದಿತು. ಹಳ್ಳಿಯ ಜನರು ಮನೆ ಕಟ್ಟುವಾಗ ಬೆಡಗು ಮೋಜುಗಳನ್ನು ಗಣಿಸುವುದಿಲ್ಲವಷ್ಟೆ. ನಿತ್ಯದ ದವಸಧಾನ್ಯಗಳನ್ನು ತುಂಬಿಡುವುದಕ್ಕೆ ಸ್ಥಳ ಬೇಕು, ಮಳೆಗಾಲದ ಅಟ್ಟಣೆ ಸಾಮಾನುಗಳಿಗೆ ಎಡೆಬೇಕು. ಇಷ್ಟಾದ ಮೇಲೆ ಸುಖವಿಚಾರ. ಅಡಿಗೆ ಕೋಣೆಯಲ್ಲಿ ಕತ್ತಲಿರಲಿ, ಬೆಳಕಿರಲಿ; ಎಸರಲ್ಲಿ ಹಾಕಿದ ಅಕ್ಕಿ ಬೇಯುವುದೇ ಇಲ್ಲವೆ? ಶಯ್ಯಾಗೃಹಕ್ಕೆ ಗಾಳಿ ಬೆಳಕು ಇರಲಿ, ಇಲ್ಲದಿರಲಿ, ನಿದ್ದೆಬರುವಾಗ ಮಲಗಲು ಸ್ಥಳವಿರುವುದೇ ಇಲ್ಲವೆ? ಇಷ್ಟೆ ಅವರು ವಿಚಾರಿಸುವ ಸಂಗತಿಗಳು–

ಕೋಣೆಗಳೆಲ್ಲ ಪ್ರಾಚೀನ ಶಿಲ್ಪಿಗಳು ವಿರಚಿಸಿದ ಅಖಂಡ ಪ್ರಸ್ತರಗಳಿಂದ ನಿರ್ಮಿತವಾದ ಗುಹಾಮಂದಿರದಂತೆ ಬೇಸಿಗೆಯ ನಡು ಮಧ್ಯಾಹ್ನದಲ್ಲಿಯೂ ಅಂಧಕಾರದಿಂದ ಆಚ್ಛಾದಿತವಾಗಿಯೇ ಇದ್ದುವು. ಇಂತಹ ಮನೆಗಳೆ ಹಳ್ಳಿಯವರಿಗೆ ಮೆಚ್ಚು. ಪೇಟೆಯವರಿಗೆ ಅವುಗಳಲ್ಲಿ ಒಂದು ದಿನ ಕಾಲಕ್ಷೇಪವಾಗುವುದಾದರೂ ಕಷ್ಟ. ನಗರಸಭೆಯ ಪರೋಪದೇಶಕರ ಆರೋಗ್ಯಶಾಖೆಯ ಚಪಲಸಂಚಾರಿಗಳ, ಮಂದಿರ ನಿರ್ಮಾಣ ಸೂತ್ರಧಾರಿಗಳ ಹಾವಳಿಯಿಲ್ಲದ ಕಾರಣ, ತಮಗೆ ಮೆಚ್ಚಿದಂತೆ ಮನೆಗಳನ್ನು ಕಟ್ಟಿಸಿ, ಮಳೆಗಾಲದಲ್ಲಿ ದವಸಧಾನಗಳನ್ನೂ ತುಂಬಿಸಿಟ್ಟು, ಸಂತೋಷದಿಂದ, ಜಡಿಮಳೆ ಸುರಿವಾಗ ಬೆಚ್ಚಗೆ ಕಂಬಳಿ ಹೊದೆದು ಸುಖನಿದ್ರೆ ಮಾಡಲು ಆಗುವಂತೆ ಗುಹಾಮಂದಿರಗಳನ್ನೋ ಕೋಟೆಗಳನ್ನೋ ಕಟ್ಟಿಸುವುದಕ್ಕೆ ಯಾವ ಆತಂಕವೂ ಅವರಿಗಿರಲಿಲ್ಲ.

ಶ್ರೀಧರನಂತಹ ನಗರವಾಸ ವಿಲಾಸಿಗಳು, ಇಂತಹ ಮನೆಗಳನ್ನು ಕೊಂಡುಕೊಂಡರೆ 'ಈ ಮನೆ ಇಲಿ ಹೆಗ್ಗಣಗಳಿಗಾಯಿತು' ಎಂದು ಉದಾರ ಭಾವದಿಂದ, ಅವುಗಳನ್ನು ಮೂಷಕ ಗಣಕ್ಕೆ ಅಗ್ರಹಾರವಾಗಿ ಬಿಟ್ಟು ಅನುಕೂಲ ಸ್ಥಳಗಳಲ್ಲಿ ಹೊಸಬೆಡಗಿಗೆ ಸರಿಯಾದ ಮನೆಗಳನ್ನು ಕಟ್ಟಿಸುತ್ತಾರೆ ವರ್ಷಕ್ಕೆ ಒಂದೆರಡು ತಿಂಗಳು ಜೀವನಸುಖದ ವಿವಿಧತೆಗೋಸ್ಕರ ಅಲ್ಲಿಗೆ ಹೋಗಿ ನೆಲಸುತ್ತಾರೆ

ಶ್ರೀಧರನು ಬೀಗರಹಳ್ಳಿಯ ಮನೆಯನ್ನು ಕೊಂಡುಕೊಂಡು ಒಂದೇ ವರ್ಷವಾಗಿದ್ದರೂ, ಹಳೆಯದರ ಬಳಿಯಲ್ಲಿ ಹೊಸ 'ಅಪ್ ಟು ಡೇಟ್' (ನವೀನ ಪದ್ಧತಿಯ) ಮನೆಯೊಂದನ್ನು ಕಟ್ಟಿಸಿದನು ಬಡ ಹಳ್ಳಿಗನನ್ನು ಕಂಡು ವಿನೋದಕ್ಕಾಗಿ ಬೆಟ್ಟು ತೋರಿಸಿ ಮೀಸೆ ಹುರಿಮಾಡುವ ಸಂಭಾವಿತ ನಾಗರಿಕನಂತೆ, ಆ ಹೊಸಮನೆ ಹಳೆಯದನ್ನು ನೋಡಿ ನಗುವಂತೆ ತೋರುತ್ತಿತ್ತು.

ಪಾರ್ವತಿ ಕ್ಷಯರೋಗ ಪೀಡಿತೆ; ಗಾಳಿಬೆಳಕುಗಳ ನಿರಾತಂಕ ಪ್ರವೇಶವಿರುವ ಸ್ಥಳವೇ ಅವಳಿಗೆ ಯೋಗ್ಯ, ಎಂದು ಡಾ. ವೆಂಕೋಬರಾಯರೆ ಸಾವಿರ ಬಾರಿ ಉಪದೇಶ ಕೊಟ್ಟಿದ್ದರೂ ಹಳ್ಳಿಗೆ ಬಂದ ಮೇಲೆ ಹಳೆಮನೆಯೆ ಆಕೆಯ ವಾಸಕ್ಕೆ ಯೋಗ್ಯವೆಂದಾಯಿತು. ಇದಕ್ಕೆ ಕಾರಣ ಇಷ್ಟೆ: ಹೊಸ

ಮನೆಯಲ್ಲಿ ವಾಯುಸಂಚಾರ ಬಹಳ, ಹೆಚ್ಚು ವಾಯುಸೇವನೆಯಿಂದ ಶೀತ ವಾದೀತು. ಇದೂ ತೊಂದರೆಗೆ ಕಾರಣವಲ್ಲವೇ? ಶ್ರೀಧರರಾಯನೆ ಹಾಗೆಂದ ಮೇಲೆ, ಉಪದ್ರವವಾಗದೆ ಇರುವ ಬಗೆಯಾದರೂ ಹೇಗೆ?

ಸಳ್ಳಿಯು ಸಿವಾಸಕ್ಕೆ ಹೋದ ಮರುದಿವಸವೇ ಶ್ರೀಧರನು ತನ್ನತ್ತಿಗೆಯುನ್ನು ಬಳಿಗೆ ಕರೆದು, ಕೆಲವು ಹಿತೋಕ್ತಿಗಳನ್ನಾಡಿದ ಅವುಗಳ ಧಾಟಿ ಹೀಗಿತ್ತು.-

ಶ್ರೀಧರ – ಅತ್ತಿಗೆ! ನಿಮ್ಮಲ್ಲಿ ಒಂದು ಜಾಗ್ರತೆ ಹೇಳಬೇಕೆಂದಿದೆ.

ಸೀತಮ್ಮ:– ಹೇಳಿಬಿಡಿ.

ಶ್ರೀಧರ:- ನನಗೆ ಹೆಂಡತಿಯಲ್ಲಿ ಪ್ರೀತಿಯಿಲ್ಲವೆಂದಲ್ಲ, ಆದರೆ ಸತ್ಯವನ್ನು ಹೇಳಬೇಕಷ್ಟೆ . .

ಸೀತಮ್ಮ – ಸತ್ಯವನ್ನೇ ಹೇಳಿರಿ

ಶ್ರೀಧರ.– ಆಕೆಯನ್ನು ಹಿಡಿದಿರುವುದು ಕರಿನ ರೋಗ.

ಸೀತಮ್ಮ – ಹೌದು, ಕ್ಷಯರೋಗ

ಶ್ರೀಧರ.– ಅದು ಸಾಂಕ್ರಾಮಿಕ ವ್ಯಾಧಿ. ಸಮೀಪಕ್ಕೆ ಬರುವವರನ್ನು ಅಂಟಿಕೊಳ್ಳುತ್ತದೆ.

ಸೀತಮ್ಮ:– ವೆಂಕೋಬರಾಯರು ಹಾಗೆಯೆ ಹತ್ತು ಸಲ ಹೇಳಿದ್ದರು.

ಶ್ರೀಧರ:– ನೀವು ಸ್ವಲ್ಪ ಜಾಗ್ರತೆ ತೆಗೆದುಕೊಳ್ಳಬೇಕು.

ಸೀತಮ್ಮ – ಅವಶ್ಯ.

ಶ್ರೀಧರ:- ಅವಶ್ಯವಾದರೆ ಮಾತ್ರ ಅವಳ ಬಳಿಗೆ ಹೋಗಬೇಕು, ಬರಬೇಕು.

ಸೀತಮ್ಮ:– ಅವಶ್ಯವಿಲ್ಲದೆ ನಾನು ಈಗಲಾದರೂ ಹೋಗುವುದಿಲ್ಲ.

ಶ್ರೀಧರ:– ಮನೆಯಲ್ಲಿ ಮಕ್ಕಳು ಮರಿಗಳಿದ್ದಾವೆ. ಅಲ್ಲಿ ಅವಳನ್ನಿಟ್ಟರೆ, ಒಂದು ದಿನ ಮಕ್ಕಳಿಗೂ ಅಪಾಯ ಬಂದೀತೆಂದು ಇಲ್ಲಿಗೆ ತಂದುದಾಗಿದೆ.

ಸೀತಮ್ಮ:– ಸಹಜವಾದ ಕೆಲಸ.

ಶ್ರೀಧರ:– ನಿಮಗಿನ್ನೂ ನನ್ನ ಹೆಂಡತಿಯಲ್ಲಿ ಪ್ರೀತಿಯಿದೆ ಎಂದು.

ನನಗೆ ಗೊತ್ತು. ಆದರೆ ರೋಗ ಹಿಡಿಸಿಕೊಳ್ಳುವುದಕ್ಕೂ ಪ್ರೀತಿಗೂ ಸಂಬಂಧವಿಲ್ಲ.

ಸೀತಮ್ಮ:– ರೋಗ ಹಿಡಿಸಿಕೊಳ್ಳುವ ಆತುರ ನನಗೇನೂ ಇಲ್ಲ.

ಶ್ರೀಧರ.– ಆತುರ ಯಾರಿಗೂ ಇರಲಿಕ್ಕಿಲ್ಲ! ಅಜ್ಞಾನದಿಂದ ಎಲ್ಲವೂ ಆಗುತ್ತದೆ.

ಸೀತಮ್ಮ.– ಹುಂ . . .

ಶ್ರೀಧರ.– ಅವಳು ಮಲಗುವಲ್ಲಿ ಮಲಗಬಾರದು.

ಸೀತಮ್ಮ.– ಮಲಗಿದರೂ ಜಾಗ್ರತೆ ತೆಗೆದುಕೊಳ್ಳುತ್ತೇನೆ.

ಶ್ರೀಧರ:– ಹಳ್ಳಿ ಹೆಂಗುಸಿನಂತೆ ವರ್ತಿಸಬಾರದು ಅತ್ತಿಗೆ.

ಸೀತಮ್ಮ.– ಈಗ ಹಳ್ಳಿಗೆ ಬಂದಿದ್ದೇನೆ, ಹಳ್ಳಿಹೆಂಗುಸಾಗಿದ್ದೇನೆ.

ಶ್ರೀಧರ:– ನೀವಿಲ್ಲಿಗೆ ಬರಬೇಕೆಂದು ನಾನೇನೂ ಬಲಾತ್ಕರಿಸಲಿಲ್ಲ. ನೀವಾಗಿ ಬಂದುದು. ಬಂದು ರೋಗಹಿಡಿಸಿಕೊಂಡು ಹೋದರೆ ನನಗೆ ದೊಡ್ಡ ಅಪವಾದ. ಆದುದರಿಂದ ನಾನು ಹೇಳಿದುದನ್ನು ಮರೆಯಬೇಡಿ, ತಿಳಿಯಿತೇ?

'ಕ್ಷಯರೋಗ ಹಿಡಿದರೆ, ಅದು ಗುಣವಾಗಲೂ ಬಹುದು ಅಥವಾ ದೇಹವನ್ನು ಚಿತೆಗೊಯ್ಯಲೂ ಬಹುದು. ಆದರೆ ನಿನ್ನ ಈ ರೋಗಕ್ಕೆ ಮದ್ದೇನು?' ಎಂಬ ನಿಷ್ಠುರ ವಾಕ್ಯಗಳನ್ನಾಡಬೇಕೆಂದು ಸೀತಮ್ಮನ ನಾಲಗೆ ತುರಿಸುತ್ತಿತ್ತು. ಆದರೆ ಬರಡು ಮಾತಿನಿಂದೇನು ಪ್ರಯೋಜನ? ಎಂದವಳು 'ಆಯಿತು' ಎಂದಳು.

ಇನ್ನೂ ಹೆಚ್ಚು ಮುಂಜಾಗ್ರತೆಗಳನ್ನು ಅತ್ತಿಗೆಗೆ ಕೊಡಬೇಕೆಂದು ಶ್ರೀಧರನ ಎಣಿಕೆಯಲ್ಲಿತ್ತು. ಅಷ್ಟರಲ್ಲಿ ಹೊರಗಿನಿಂದ ಮೋಟರಿನ ಭೂಂಕಾರವೊಂದು ಕೇಳಿಬಂತು. ಮುಂಜಾಗ್ರತೆ ಕೊಡುವ ಕೆಲಸವನ್ನು ಇನ್ನೊಂದು ದಿನಕ್ಕೆ ಮುಂದುವರಿಸಿಟ್ಟು ಶ್ರೀಧರನು ಆಕಡೆಗೋಡಿದನು.

ಹೊಸಮನೆ ಮೆಟ್ಟಲಿಗೇ ಮುಖ ತಿರುಗಿಸಿ ಮೋಟರ್ ನಿಂತಿದ್ದಿತು. ವೇಗದಿಂದಿಳಿವ ಮಿಂಚಿನಂತೆ ಚಂಚಲೆ ಅದರಿಂದ ಕೆಳಗಿಳಿದಳು.

ರೋಗೋಪಚಾರಕ್ಕೆ ದಾದಿಯೊಬ್ಬಳು ಬಂದಳು. ಶ್ರೀಧರನಿಗೆ ಆನಂದಾತಿರೇಕ!

## ಹನ್ನೆರಡನೆಯ ಪ್ರಕರಣ

ಹೆಸರು ಹೇಗಿದ್ದರೇನು? ಮಂಗಳೂರಿನ ಕಾಫಿಯ ಭವನಗಳ ಶಿಖಾಮಣಿಯದು ಅದರ ವಿಶಾಲಾಂಗಣದಲ್ಲಿ .ಎರಡು ಕಾರುಗಳು ನಿಂತಿವೆ. ಅವುಗಳ ಸಾರಥಿಗಳಿಬ್ಬರು ರೀವಿಯಿಂದಿಳಿದು, ತಲೆಯ ಕುಚ್ಚುಕೂದಲಿನ (ಕ್ರಾಪ್) ಸೀಮಾರೇಖೆಯನ್ನು ಕೈಯಿಂದ ಸವರಿ ಸರಿಮಾಡಿ, ಭವನದ ಒಳಗಣ ಕೋಣೆಗಳಲ್ಲಿ ಸಾಲುಸಾಲಾಗಿ ಇರಿಸಿದ್ದ ಉರುಟು ಮೇಜುಗಳ ಸುತ್ತಲೂ ಆಗಂತುಕರ ಅಪೇಕ್ಷೆಯಿಂದ ನಿಂತಿದ್ದ ಎರಡು ಕುರ್ಚಿಗಳನ್ನಲಂಕರಿಸಿ, ತಿಂಡಿ ಇಂತಹದಾಗಬೇಕು, ಪಾನೀಯವು ಇಂತಹದಾಗಬೇಕು, ಎಂದು ಆಜ್ಞೆ ಹೊರಡಿಸಿ ಸಂಭಾಷಣೆ ಮಾಡುತ್ತಿದ್ದರು. ಒಬ್ಬನ ವಯುಸ್ಸು ಮೂವತ್ತೈದು, ಇನ್ನೊಬ್ಬ ಇವನಿಗಿಂತಲೂ ಎಳೆಯನೆಂದು ತೋರುತ್ತಿದ್ದಿತು.

ದ್ರೋಣಾಚಾರ್ಯರು ಒಂದು ಕಾಲದಲ್ಲಿ ಸಮಗ್ರ [illegible]ಂಡದ [illegible]ಶಸ್ತ್ರ ಗುರುಗಳಾಗಿದ್ದರಲ್ಲವೇ? ಅವರಂತೆ, ಈ ಇಬ್ಬರು ವ್ಯಕ್ತಿಗ[illegible]ಹಿರಿಯವಾದವನು ನೂರಾರು ಜನರಿಗೆ ವೇಗಶಕಟ (ಮೋಟರ್) ಚಾಲ[illegible] ವಿದ್ಯೆಯ ಶಿಕ್ಷಾಚಾರ್ಯನೆಂಬ ಗೌರವವನ್ನು ಪಡೆದಿದ್ದನಲ್ಲದೆ, ತನ್ನ ಸಂಗಡಿಗರಾಗಿ ಇದ್ದಂತಹ ಶಿಷ್ಯರಿಂದ ವಿನಮ್ರತಾ ಭಕ್ತಿಗಳನ್ನು ಹಕ್ಕಿನಂತೆ ಕೇಳುವ ಮನುಷ್ಯನಾಗಿದ್ದನು. ಅವನು ಕೇಳಿದರೆ ಶಿಷ್ಯರು ಬಿಚ್ಚದ ಗುಟ್ಟುಗಳಿಲ್ಲ. ಅವನ ಅಪ್ಪಣೆಯಾದರೆ ಶಿಷ್ಯರು ಮಾಡದ ಕೆಲಸಗಳಿಲ್ಲ. ಶಿಷ್ಯರ ಭಕ್ತಿಭಾವವೂ ಅಂತಹದು–ಅದನ್ನರಿತ ಅವನ ಹೆಮ್ಮೆಯೂ ಅಂತಹದು.

ಮಾತಿನಿಂದ ಮಾತು ಪ್ರಾರಂಭವಾಯಿತು.

ಹಿರಿಯವ:— ನಿಮ್ಮ ಒಡೆಯರೇನು ಮಾಡುತ್ತಾರೆ?

ಕಿರಿಯವ:- ಅವರು ಏನುಮಾಡಿದರೇನು?

ಹಿರಿಯುವ.- ಸುಖದಲ್ಲಿರುವರೋ?

ಕಿರಿಯುವ.- ಸುಖವಲ್ಲದೆ ಏನು?

ಹಿರಿಯುವ:- ಅವರ ಸಂಚಾರಗಳು ಹೇಗಿವೆ?

ಕಿರಿಯುವ.- ಸಂಚಾರಕ್ಕೆ ಸಮಯವಾದರೂ ಎಲ್ಲಿ ಅವರಿಗೆ? ಹಗಲು ವ್ಯಾಪಾರವಾಯಿತು, ರಾತ್ರಿ ಹಳ್ಳಿಯ ಮನೆಯಾಯಿತು.

ಹಿರಿಯುವ -- ಅಲ್ಲಿಯೂ ಸುಖವೆ?

ಕಿರಿಯುವ.— ಮತ್ತೇನು ಹೇಳಿ. ಹೆಂಡತಿ ಹಾಸಿಗೆ ಹಿಡಿದಿದ್ದಾಳೆ. ಇದು ಅವರ ಸುಖಕ್ಕೆ ಕಾರಣವೆ ಸುಖಾನುಭವ ಸಾಮಗ್ರಿ ಇನ್ನೊಂದಿದೆ

ಹಿರಿಯುವ.- ಅದೇನು?

ಕಿರಿಯುವ.- ಅದೊಂದು ಪ್ರಾಣಿ, ಒಂದು ಸುಂದರ ವಸ್ತು

ಹಿರಿಯುವ - ಯಾರವಳು?

ಕಿರಿಯುವ - ಚಂಚಲೆಯಂತೆ.

ಹಿರಿಯುವ - ಛೀ! ಅವಳು ದಾದಿ. ಹೆಂಡತಿಯ ಶುಶ್ರೂಷೆಗಾಗಿ ಹೋದಳಲ್ಲವೆ?

ಕಿರಿಯುವ.- ಲೋಕದ ಕಣ್ಣಿಗ ದಾದಿ!

ಹಿರಿಯುವ:- ಇತರ ಸ್ತ್ರೀಯರ ಮೇಲೆ ನಿರಾಧಾರವಾದ ಅಪವಾದಗಳನ್ನು ಹೊರಿಸಬಾರದು ಶೀನು!

ಕಿರಿಯುವ.- ಇದಕ್ಕೆ ಆಧಾರವಿದೆಯೋ ಇಲ್ಲವೋ ನೀವೇ ಹೇಳಬೇಕು. ಆ ದಾದಿ ರೋಗಿಣಿಯ ಸೇವೆಮಾಡುವುದನ್ನು ನಾ ಕಾಣೆ.

ಹಿರಿಯುವ - ನೀನು ಹೇಗೆ ತಿಳಿದೆ?

ಕಿರಿಯುವ - ತಿಳಿದುದು ಹೇಗೆಂದರೆ. ಎಲ್ಲರೂ ತಿಳಿಯುವಂತೆ. ಶ್ರೀಧರನಿಗೆ ಅವಕಾಶವಿರುವಾಗಲೆಲ್ಲ ಸಂಗೀತ ನಡೆಯುತ್ತದೆ. ನಗು, ಹಾಸ್ಯ, ಸರಸ ವಾಕ್ಯ, ಗುಟ್ಟು—ಇದೆಲ್ಲ ನಡೆಯುತ್ತದೆ ಒಂದೇ ಕಡೆ ಇಷ್ಟನ್ನು ನಾನು ಕಂಡಿದ್ದೇನೆ. ಆದರೆ ಅಪವಾದ ಹೇಳಬಾರದೆಂದಲ್ಲವೆ ಗುರುಗಳಾದ ತಮ್ಮ ಬೋಧನೆ? ಮುಂದೇನಾಗುವುದೆಂಬುದನ್ನು ಹೇಳುವುದಿಲ್ಲ.

ಹಿರಿಯುವ – ಕೆಲವು ವೇಳೆ ಓದಿದ ಮನುಷ್ಯರು, ದುರಭಿಪ್ರಾಯವಿಲ್ಲದೆ, ಸಲಿಗೆಯಿಂದ ವರ್ತಿಸುತ್ತಾರೆ. ನಮ್ಮಂಥವರಿಗೆ ಅರ್ಥವಾಗುವುದಿಲ್ಲ.

ಕಿರಿಯುವ – ಅರ್ಥಮಾಡುವ ಗೊಡವೆಗೆ ನಾನು ಹೋಗುವುದೂ ಇಲ್ಲ ನಡೆವ ಸಮಾಚಾರಗಳನ್ನು ನಡೆವಂತೆ ಹೇಳಿಬಿಡುತ್ತೇನೆ. ಕೆಲವು ವೇಳೆ ಸುಶಿಕ್ಷಿತರು ಗುಟ್ಟು ಮಾತಾಡುತ್ತಾರೆ, ಗುಟ್ಟೆಂದರೆ, ಒಬ್ಬರ ಕಿವಿ ಬಳಿಗೆ ಇನ್ನೊಬ್ಬರ ತುಟಿ ಬರುವುದಲ್ಲವೆ? ಇವರ ಗುಟ್ಟು ಬೇರೆ ತರ. ತುಟಿ ದಾರಿ ತಪ್ಪುತ್ತದೆ.

ಹಿರಿಯನಿಗೆ ನಗು ಬಂತು ಮುಖವೂ ವಿಕಾರ ಹೊಂದಿತು.

ಹಿರಿಯುವ – ಮತ್ತೆ?

ಕಿರಿಯುವ – ಮನ ಕಾವ ನಾಯಿಯಂತೆ ಹೆಂಡತಿ ಇದ್ದಾಳಲ್ಲ. ಅವಳು ಏನಾದರೂ ಬೂಗಳೆದರೆ, ಸಿನೇಮಕ್ಕೊ ನಾಟಕಕ್ಕೊ ಇಬ್ಬರೂ ಹೋಗಿಬಿಡುತ್ತಾರೆ ಮಂಗಳೂರಲ್ಲಿ ಆ ದಿನ ಸಿನೇಮಾ ನಾಟಕಗಳು ಇಲ್ಲದಿದ್ದರೂ, ಅವರಿಗೆ ಇವೆ

ಹಿರಿಯುವ.– ಬೇರಾರೂ ಇಲ್ಲವೆ?

ಕಿರಿಯುವ – ಇದ್ದಾರೆ. ಒಬ್ಬ ಅಡಿಗೆಯ ಪಂಡಿತನಿದ್ದಾನೆ. ಅವನಿಗೆ ನೀರು ಸೇದುವ, ತೆಂಗಿನಕಾಯಿ ಅರೆಯುವ, ಬೇಳೆ ಬೇಯಿಸುವ ಒಗ್ಗರಣೆ ಕೊಡುವ, ಕೆಲಸದ ಸುಖ ಅರಿತಿದೆಯಲ್ಲದೆ ರಸಜ್ಞಾನವಿಲ್ಲ. ಅದೊಂದು ಮೊದ್ದು. ಮನುಷ್ಯಾಕಾರದ ಮಣ್ಣಮುದ್ದೆ.

ಹಿರಿಯುವ.– ಹೆಂಗುಸರಾರೂ ಇಲ್ಲವೆ?

ಕಿರಿಯುವ – ಇದ್ದಾರೆ ಪ್ರಾಯದ ಹುಡುಗಿಯೊಬ್ಬಳು. ನೋಡುವುದಕ್ಕೆ ರತಿಯಂತಿದ್ದಾಳೆ.

ಹಿರಿಯುವ:– ಅವಳಿಗೂ ಈ ಸಿನೆಮ–ನಾಟಕಗಳು ಮೆಚ್ಚುತ್ತಿವೆಯೆ?

ಕಿರಿಯುವ:– ಈ ಮಹಾರಾಯನ ರಾಹುದೃಷ್ಟಿ ಅವಳ ಮೇಲೆಯೂ ಬಿದ್ದಂತಿದೆ. ಸರ್ಪವನ್ನು ಕಂಡರೆ ಓಡುವ ಇಲಿಯಂತೆ, ಇವನು ಬಂದನೆಂದರೆ ಅವಳು ಪಲಾಯನ ಮಾಡುತ್ತಾಳೆ.

ಹಿರಿಯುವ:– ಮತ್ತೇನು?

ಕಿರಿಯವ:– ಮತ್ತೆಲ್ಲ ಚೆನ್ನಾಗಿ ನಡೆಯುತ್ತದೆ. ಶ್ರೀಧರ ಚಂಚಲೆಯರು ಗುಟ್ಟು ಮಾತಾಡದ ಸಮಯವನ್ನು ನೋಡಿ, ನಾನು ಒಳಗೆ ಹೋದರೆ ಒಳ್ಳೆಯ ಪ್ರೀತಿಯನ್ನು ತೋರಿಸುತ್ತಾರೆ ಪುಡಿಕಾಸು ಕೊಡುತ್ತಾರೆ ಸುಖದುಃಖಗಳನ್ನು ವಿಚಾರಿಸುತ್ತಾರೆ. ಅಂತೂ ನನ್ನ ಮಟ್ಟಿಗೆ ಶ್ರೀಧರರಾಯ ಒಳ್ಳೆಯ ಜನ. ಮೋಟರ್ ಹೊಡೆವವನಿಗೆ ಹೆಚ್ಚಿನ ಅಧಿಕ ಪ್ರಸಂಗವೇಕೆ? ಅವರ ನಾಟಕ ಸಿನೆಮಗಳ ಗುಟ್ಟನ್ನು ಕಣ್ಣಾರೆ ಕಂಡರೂ 'ಹೀಗಿರಬೇಕಯ್ಯ ಮನುಷ್ಯರೆಂದರೆ!' ಎನ್ನುವಂತೆ ಮುಖಭಾವದಲ್ಲಿ ತೋರಿಸಿ ನನ್ನ ಕೆಲಸವನ್ನು ತಪ್ಪಿಲ್ಲದೆ ಮಾಡಿಬಿಡುತ್ತೇನೆ ನೀವು ಕೊಟ್ಟ ವಿದ್ಯೆಯಿಂದ ನನ್ನ ಅನ್ನಕ್ಕೆ ದಾರಿಯಾಯಿತು.

ತಿಂಡಿ ಕಾಫಿಗಳು ಮಾಯವಾಗುವಾಗ, ಪೆಟ್ರೋಲ್ ಮುಗಿದ ವೇಗ ಶಕಟದಂತೆ, ಇವರ ಮಾತೂ ನಿಂತಿತು. ಇಬ್ಬರೂ ಎದ್ದರು. ತಿಂದು ತೇಗಿದುದರ ಪ್ರತಿಫಲವಾದ ದುಡ್ಡನ್ನು ಬಿಚ್ಚಿದರು. ಬಾಯಿಗೆ ಬೀಡ ಸಿಗರೇಟುಗಳನ್ನು ಸೇರಿಸಿಕೊಂಡರು. ತಂತಮ್ಮ ವಾಹನಗಳನ್ನೇರಿ, ಭೂಂಕಾರದಿಂದ ಬೀಳ್ಕೊಂಡು ಬೇರೆ ಬೇರೆ ದಾರಿಗಳನ್ನು ಹಿಡಿದರು.

ಮೋಟರು ಚಲಿಸುತ್ತಿದ್ದಾಗ, ಹಿರಿಯನು 'ಕೆಟ್ಟುಹೋದಳು ಹುಡುಗಿ; ಕೆಟ್ಟುಹೋದಳು; ನರಕಕ್ಕೆ ದುಮುಕಿದಳು!' ಎಂದು ಉದ್ಗಾರವೆತ್ತಿದನು.

# ಹದಿಮೂರನೆಯ ಪ್ರಕರಣ

ಹಳ್ಳಿಗೆ ಹೋದುದಾಯಿತು, ಹಳ್ಳಿಯ ಹವೆ ರೋಗವನ್ನು ಒದೆದು ಓಡಿಸಬಹುದೆಂದು ಯಾರೂ ಭಾವಿಸಿದ್ದಿಲ್ಲ ಆದರೆ ಕ್ರಮೇಣವಾದರೂ ಅಲ್ಪ ಸ್ವಲ್ಪ ಗುಣವಾಗಬಹುದೆಂದೂ ಭಾವಿಸಿದವರಿದ್ದರೇ? ಎಂಬುದು ಸಂದೇಹಾಸ್ಪದವೆ. ಶ್ರೀಧರನಿಗೆ ಹೆಂಡತಿಯು ಕಸಕಡ್ಡಿಗಿಂತ ಕೀಳಾದುದರಿಂದ, ಅವಳ ಪ್ರಕೃತಿಯು ಸುಧಾರಿಸಿದರೂ ಸುಧಾರಿಸದಿದ್ದರೂ ಫಲ ಒಂದೇ. ಇನ್ಫ್ಲುಯೆನ್ಝರ ಗಡ್ಡ ಹೊತ್ತುವಾಗ 'ಬೆಂಕಿಯನ್ನು ನಂದಿಸಬೇಡಿರಿ, ಸಿಗರೇಟು ಹೊತ್ತಿಸಿಕೊಳ್ಳುತ್ತೇನೆ' ಎನ್ನುವ ಸ್ವಭಾವವದು. ಅವನ ನಡತೆಯಿಂದಲೆ ಇದನ್ನು ತಿಳಿದುಕೊಳ್ಳಬಹುದು.

ಚಂಚಲೆ, ದಾದಿಯ ವೇಷವನ್ನು ಕಟ್ಟಿಬಂದವಳಾದರೂ ಅವಳಿಗೆ ಇದ್ದ ಕೆಲಸವಿಷ್ಟು – ದಿನಕ್ಕೆ ಎರಡು ಮೂರು ಬಾರಿ ಪಾರ್ವತಿಯ ಬಳಿಗೆ ಹೋಗಿ, 'ಹೇಗಿದ್ದೀರಮ್ಮ?' ಎಂದು ಪ್ರಶ್ನಿಸಿ ಹೋಗಿಬಿಡುವುದು. ಈ 'ಹೇಗಿದ್ದೀರಿ?' ಎಂಬ ಪ್ರಶ್ನೆಗೆ 'ಇನ್ನೂ ಸಾಯಲಿಲ್ಲವೇ?' ಎಂಬುದೇ ಅರ್ಥವೆಂದು ಪಾರ್ವತಿ ಭಾವಿಸುತ್ತಿದ್ದಳು. ಶುಶ್ರೂಷೆಗಿಂತ ತನ್ನ ವೇಷಭೂಷಣಗಳ ಶಾಸ್ತ್ರೋಕ್ತ ವಿಧಿಗೆ ಅವಳು ಹೆಚ್ಚು ಗಮನ ಕೊಡುತ್ತಿದ್ದಳು. ಪಾರ್ವತಿಯ ಒಡನಾಟಕ್ಕಿಂತ ಶ್ರೀಧರನ ಸಾಹಚರ್ಯದಲ್ಲಿ ಅಧಿಕಾಸಕ್ತಿ. ಸಂಗೀತವೇನು? ಹಾರ್ಮೋನಿಯಮ್ಮನ್ನು ಒತ್ತಿ ಪೀಡಿಸುವ ಬೆಡಗೇನು? ಒನಪೇನು? ಒಯ್ಯಾರವೇನು? ಶ್ರೀಧರನನ್ನು ಕಂಡರೆ ಸರಸವೇನು? ಪಾರ್ವತಿ ಶ್ರೀಧರನ ಕೈಹಿಡಿದ ಹೆಂಡತಿಯೇ ಆಗಿದ್ದರೂ ಅಶಿಕ್ಷಿತೆ; ಪ್ರಾಚೀನ ಸಭ್ಯಾಚಾರದವಳು; ಪುರಾಣ ವಸ್ತು; ತನ್ನಂತೆ ಹೊಸ ಬೆಡಗಿನ ಪರಿಯನ್ನು ಅರಿತವಳಲ್ಲ, ಎಂಬುದನ್ನು ನಡನುಡಿಯಲ್ಲಿ ತೋರುವ ವೈಖರಿಯೇನು? ಸೀತಮ್ಮನಂತೂ ತೊತ್ತು; ಗಯ್ಯಾಳಿ. ಅವಳೊಡನೆ ಆಕೆಗೆ ಮಾತುಕತೆಯೇ ಕಡಿಮೆ. ಶ್ರೀಧರನ ನಡತೆಯನ್ನು ಪಾರ್ವತಿ ತಪ್ಪಾಗಿ ತಿಳಿದಿರಲಿಲ್ಲ; ಸರಿಯಾಗಿಯೇ ತಿಳಿದಿದ್ದಳು. ಆತನ ಪ್ರತಿಯೊಂದು ವರ್ತನೆಯಲ್ಲಿಯೂ ಗೂಢವಾದ ವರ್ತನೆಯೊಂದು ಇದ್ದೇ ಇದೆಯೆಂದು ಅರಿತಿದ್ದಳು. ಹೀಗಾದುದರಿಂದ ತನ್ನ ಆರೋಗ್ಯಸಂಪಾ

ದನೆಯು ನೆಪವನ್ನಿಟ್ಟುಕೊಂಡು ಸ್ವಸುಖಸಾಧನೆಗಾಗಿ ಶ್ರೀಧರನು ಅವನ ಜೀವನದ ಕಪಟನಾಟಕದಲ್ಲಿ ಈ ಪರಿವರ್ತನ ದೃಶ್ಯವನ್ನು ಸಂಯೋಜಿಸಿದ್ದನೆಂಬುದು ಪಾರ್ವತಿಯ ನಿಶ್ಚಯ; ಬಲವಾದ ನಿಶ್ಚಯ. ತನ್ನ ಗಂಡನೆ ಇಷ್ಟು ಸ್ವಾತಂತ್ರ್ಯ ಕೊಟ್ಟಿರುವಾಗ, ಚಂಚಲೆಯು ಅದರ ಸಂಪೂರ್ಣ ಫಲವನ್ನು ಅನುಭವಿಸುತ್ತಿದ್ದಳೆಂಬುದರಲ್ಲಿ ಆಕೆಗೆ ಸಂದೇಹವಿರಲಿಲ್ಲ.

ಶ್ರೀಧರನು ಸ್ವಚ್ಛಭಾವನೆಯಿಂದಲೆ ಪಾರ್ವತಿಗೆ ಗ್ರಾಮವಾಸದ ಸುಖವನ್ನು ಒದಗಿಸಿದನೆನ್ನೋಣ. ಹೀಗಿದ್ದರೂ ಅವಳ ರೋಗವು ಗುಣಮುಖವಾಗಲಿಲ್ಲ. ದಿನೇ ದಿನೇ ಕೃಶವಾಗುತ್ತಾ ಬಂದಳು. ನಗರದಲ್ಲಿದ್ದಾಗ ಮಲಗುಮಂಚವನ್ನು ಬಿಟ್ಟು ಮನೆಯ ಸುತ್ತುಮುತ್ತಿನಲ್ಲಿ ತಿರುಗಾಡುತ್ತಿದ್ದಳು. ಇಲ್ಲಿ ತಿರುಗುವ ಶಕ್ತಿಯೂ ಕುಂದಿಹೋಯಿತು. ಕೆಮ್ಮು ಹೆಚ್ಚಿತು, ಅಜೀರ್ಣ ಹೆಚ್ಚಿತು; ಆಯಾಸ ಹೆಚ್ಚಿತು; ರೋಗದ ಸಕಲ ಲಕ್ಷಣಗಳೂ ಹೆಚ್ಚಿದುವು ಇಲ್ಲಿಗೆ ಬಂದು ಒಂದು ತಿಂಗಳು ಕಳೆದು ಹೋದರೂ ಸ್ವಚ್ಛ ವಾಯುಸೇವನೆಯಿಂದ ಪಾರ್ವತಿಯನ್ನು ಬದುಕಿಸುವ ಶ್ರೀಧರನ ಪ್ರಯತ್ನವು ಕಡಿಮೆಯಾಗಲಿಲ್ಲ.

ಒಂದು ದಿನ ಸೀತಮ್ಮನೂ ಪಾರ್ವತಿಯೂ ಮಾತಾಡುತ್ತಾ ಕುಳಿತಿದ್ದರು.

ಪಾರ್ವತಿ:— ಏನಕ್ಕ! ಯಜಮಾನರಿಗಿನ್ನೂ ಹುಚ್ಚು ಬಿಡಲಿಲ್ಲವೆಂದು ತೋರುತ್ತದೆ.

ಸೀತಮ್ಮ:— ನಾನೇನು ಹೇಳುವುದು ಅಕ್ಕ?

ಪಾರ್ವತಿ:— ಆ ರಂಭೆಯೊಬ್ಬಳು ಬಂದು ನನ್ನ ರೋಗವನ್ನು ಗುಣಪಡಿಸುವುದಂತೆ . . .

ಸೀತಮ್ಮ:— ಹೊಸ ಕ್ರಮಗಳೆಲ್ಲ ನಮ್ಮಂತಹ ಹಳ್ಳಿಯ ಹೆಂಗುಸರಿಗೆ ಏನು ಗೊತ್ತು?

ಪಾರ್ವತಿ:— ಕೆಲಸಕ್ಕಾಗಿ ಬಂದವಳು ಹಾಕಿದ ಕೂಳು ತಿಂದು ಬಡಕುನ್ನಿಯಂತೆ ಸುಮ್ಮನೆ ಇರಬೇಕು; ಮಹಾರಾಣಿಯ ಹೆಮ್ಮೆ ತೋರಿಸುವುದಲ್ಲ.

ಸೀತಮ್ಮ:— ಅವಳು ಮಹಾರಾಣಿಯೆಂಬ ಹೆಮ್ಮೆ ಹೊಂದಿದ್ದರೆ ನನಗೇನು ನಿನಗೇನು?

ಪಾರ್ವತಿ:— ಮಂಗಳೂರಲ್ಲಿ ಆಗಿದ್ದರೆ, ಮನೆಯೊಳಗೆ ಇಂತಹ ಪಿಶಾಚಿಗಳ ಕುಣಿದಾಟವನ್ನು ನೋಡುವ ಸಂದರ್ಭವಿರಲಿಲ್ಲ. ಮನೆಯು ಒಳಗಾದರೂ ಪರಿಶುದ್ಧತೆ ಇರುತ್ತಿತ್ತು. ಇಲ್ಲಿ ಅದೂ ಇಲ್ಲದಂತಾಗಿದೆ.

ಸೀತಮ್ಮ – ಯಾರೇನು ಮಾಡುವುದಕ್ಕ! ನಮ್ಮ ಹಣೆಬರಹವದು.

ಪಾರ್ವತಿ:— ಅವರಿಗೆ ಸ್ಪಷ್ಟವಾಗಿ ಎಲ್ಲವನ್ನೂ ತಿಳಿಸಿಬಿಡುತ್ತೇನೆ.

ಸೀತಮ್ಮ.— ಏನೆಂದು?

ಪಾರ್ವತಿ – ಈ ದಾದಿ ನಮ್ಮ ಮನೆಯೊಳಗೆ ಇರುವುದು ಬೇಡವೆಂದು.

ಸೀತಮ್ಮ – ಭಾವನ ಕೋಪದ ಬಿಸಿ ಎಷ್ಟಿದೆಯೆಂದು ನಿನಗೆ ಗೊತ್ತಿದೆ ಅಕ್ಕ!

ಪಾರ್ವತಿ - ಅವರಿಗೆ ಕೋಪ ಬಂದರೆ ಒರಲಿ. ಇಂತಹ ಹೊಲಸನ್ನು ಯಾರು ಸಹಿಸುತ್ತಾರೆ.

ಸೀತಮ್ಮ – ನೀನೇನು ಮಾಡುವೆ? ನಾವು ಹೆಂಗುಸರೆಂಬುದು ಗೊತ್ತಿಲ್ಲವೆ? ಗಂಡುಸರು ಏನು ಮಾಡಿದರೂ 'ಹುಂ' ಎಂದು ಕುಳಿತು ಬಿಡುವುದೇ ನಮಗೆ ಲೇಸು.

ಪಾರ್ವತಿ – ಎಲ್ಲರಿಗೂ ಇರುವ ಒಂದೇ ಒಂದು ಹೆದರಿಕೆಯೆಂದರೆ ಪ್ರಾಣ ಹೋದೀತು, ಎಂದಿಷ್ಟೇ ಅಲ್ಲವೆ?

ಸೀತಮ್ಮ— ಹೌದು.

ಪಾರ್ವತಿ:— ನನ್ನ ರೋಗ ಪ್ರಾಣವನ್ನು ಹಿಂಡುವ ರೋಗ. ಪ್ರಾಣ ತೆಗೆಯುವ ಕೀರ್ತಿ ಆ ರೋಗಕ್ಕೇಕೆ ಬರಬೇಕು? ಅವರಿಗೇ ದೊರೆಯಲಿ.

ಸೀತಮ್ಮ:— ಹಾಗೆ ಹೇಳಬಾರದಕ್ಕ.

ಪಾರ್ವತಿ:— ಏಕೆ ಹೇಳಬಾರದು? ಅಂದೇ ಅವರಿಗೆ ತಿಳಿಸಿದ್ದೆ, ನಿಮ್ಮ ಮಂಗಚೇಷ್ಟೆ ಮನೆಯೊಳಗೆ ಬೇಡವೆಂದು. ಅವರೇನೂ ಹುಟ್ಟುಗುಣವನ್ನು ಬಿಡುವಂತಿಲ್ಲ. ನಾಳೆ ಹೋಗುವ ಜೀವ ಇಂದೇ ಹೋಗಲಿ. ಆ ಹೆಂಗುಸನ್ನು ಕಳುಹಿಸಿಬಿಡಿ. ಇಲ್ಲದಿದ್ದರೆ ಕಸಬರಿಗೆಯಿಂದ ಆಕೆಗೆ ಸಂಭಾವನೆ ಮಾಡಿ ಬಿಡುತ್ತೇನೆ ಎಂದು ಹೇಳಿಬಿಡುತ್ತೇನೆ.

ಸೀತಮ್ಮ:— ಅವಳದು ತಪ್ಪೇನು?

ಪಾರ್ವತಿ:— ನಿಜವೆ; ಆ ಮಾತೂ ನಿಜವೇ! ನಾನೇ ಕುತ್ತಿಗೆಗೆ ನೇಣು ಹಾಕಿ ಪ್ರಾಣಬಿಟ್ಟರೆ ಇತರರಿಗೆ ಅನ್ಯಾಯವಿಲ್ಲವಷ್ಟೆ?

'ಅಂದೇ ಹೇಳಿದ್ದೇನೆ' ಎಂಬ ಮಾತು ಸೀತಮ್ಮನ ಎದೆಗೆ ಶಲ್ಯದಂತೆ ನಾಟಿತು. ಅದರ ವಿಕಾರವೂ ಮುಖದಲ್ಲಿ ಕಂಡುಬಂದಿತು. ಎಲ್ಲ ಲೆಕ್ಕಾಚಾರಗಳನ್ನು ಮುಗಿಸಿಬಿಡಬೇಕೆಂದು ಪಾರ್ವತಿಗೆ ತೋರಿತು. 'ನಿನಗಾವರೂ ಆ ಭೂತದ ಉಪದ್ರವವಿಲ್ಲವಷ್ಟೆ?' ಎಂದು ಕೇಳಿದಳು. 'ಹುಂ . . . ಇಲ್ಲ' ಎಂದೀಕೆಯ ಉತ್ತರ.

ಪಾರ್ವತಿಗೆ ಸಂಶಯನಿರಸನವಾಗಲಿಲ್ಲ. 'ಮೊನ್ನೆ ನಮ್ಮ ಮನೆಗೆ ಬಂದ ಕಳ್ಳರಾರು?' ಎಂದು ಪ್ರಶ್ನಿಸಿದಳು.

ಸೀತಮ್ಮ:— ಯಾರೆಂದು ಖಂಡಿತವಾಗಿ ತಿಳಿದಿದ್ದರೆ ಮುಚ್ಚುಮರೆ ಮಾಡುತ್ತಿದ್ದೆನೇ?

ಪಾರ್ವತಿ:— ಅವರು ಆ ರಾತ್ರಿ ತಾವು ಇಲ್ಲವೆಂದು ಹೇಳಿಹೋದುದು, ಅದೇ ರಾತ್ರಿಯಲ್ಲಿಯೇ ಕಳ್ಳರು ನುಗ್ಗಿದುದು. ಇದನ್ನೆಲ್ಲ ವಿಚಾರಿಸುವಾಗ ನನಗೆ ಸಂದೇಹವಾಗುತ್ತಿದೆ.

ಸೀತಮ್ಮನಿಗೆ ಸಂದೇಹವಿರಲಿಲ್ಲ. ನಿಶ್ಚಯವೇ ಹಾಗಿತ್ತು. ಹಾಗೆಯೇ ಹೇಳಿಬಿಡಲೇ? ಮೊದಲೇ ಹಾಸಿಗೆ ಹಿಡಿದ ಪಾರ್ವತಿ, ಮತ್ತೆ ಏಳುವಂತಿಲ್ಲ. ಸತ್ಯವನ್ನು ಮರಸಲೆ? ಜೀವದ ಗೆಳತಿಯಾದ, ಇಬ್ಬರ ಮಾನಾಪಮಾನಗಳೂ ಒಂದೇ ತರವೆಂದು ಭಾವಿಸಿದ, ನಡೆದ, ಮೊರೆಯಲ್ಲಿ ತಂಗಿಯಾದರೂ, ಪ್ರಾಯದಲ್ಲಿ, ಗುಣದಲ್ಲಿ, ನಡತೆಯಲ್ಲಿ, ಅಕ್ಕನಾಗಿರುವವಳಲ್ಲಿ ವಂಚನೆ ಮಾಡಿದಂತಾಯಿತಲ್ಲ? ಒಂದು ವೇಳೆ ಹೇಳಿದರೂ, ಆಕೆಗೆ ಶ್ರೀಧರನ ನಡತೆಯಲ್ಲಿ, ಹೊಸ ವಿಷಯವು ತಿಳಿದಂತಾಗಲಿಲ್ಲ. ಆದುದರಿಂದ ಆಕೆ ಏನು ಬಗೆದರೂ ಚಿಂತೆಯಿಲ್ಲ . . . ಎಂದು ಮೌನವಾಗಿದ್ದಳು.

ತಾನು ದಾದಿಯಾದಂದಿನಿಂದ, ಪಾರ್ವತಿಯ ರೋಗವು ಖಂಡಿತವಾಗಿ ಪಲಾಯನ ಮಾಡತೊಡಗಿರಬೇಕು; ರೋಗವು ಎಷ್ಟು ದೂರ ಓಡಿತು? ಒಂದು ಮೈಲೇ? ಹರದಾರಿಯೇ? ಎಂದು ಪುಸ್ತಕದಲ್ಲಿ ಬರೆದುಕೊಳ್ಳುವುದೊಂದೇ ತನ್ನ ಕರ್ತವ್ಯವೆಂಬಂತೆ ವರ್ತಿಸುತ್ತಿದ್ದ ಚಂಚಲೆ, ಸಾಯಂಕಾಲದಲ್ಲಿ 'ನೀವು ಹೇಗಿದ್ದೀರಿ?' ಎಂದು ಪ್ರಶ್ನಿಸುವುದಕ್ಕೆ ಪಾರ್ವತಿ ಅಮ್ಮನ ಕೋಣೆಯ

ಬಳಿಗೆ ಬಂದಿದ್ದವಳು, ಅವರ ಮಾತು ನಡೆಯುವಷ್ಟು ಕಾಲ, ತೊಂದರೆ ಕೊಡುವುದೇಕೆ? ಎಂದು ಮರೆಯಾಗಿ ನಿಂತಿದ್ದಳು. ಅವರ ಮಾತು ಪೂರ್ಣ ವಿರಾಮ ಹೊಂದಿದ ಮೇಲೆ ಒಳಗೆ ಪ್ರವೇಶಿಸಿ 'ಈದಿನ ಹೇಗಿದ್ದೀರಮ್ಮಾ!' ಎಂದು ಮೊಗವನ್ನು ಸಪ್ಪಗೆ ಮಾಡಿ ಕೇಳಿದಳು.

ಪಾರ್ವತಿ – ಇರುವುದು ಹೇಗೆ? ನೀವು ಬಂದಂದಿನಿಂದ ರೋಗ ಹೆಚ್ಚಿದೆ. ದಯಮಾಡಿ ಇಲ್ಲಿಂದ ಹೋಗುವ ಅನುಗ್ರಹ ಮಾಡಿದರೆ, ಕೂಡಲೆ ಗುಣ ವಾಗುತ್ತದೆ.

ಚಂಚಲೆಯ ಉರಿವ ಎದೆಹುಣ್ಣಿಗೆ ಮೆಣಸಿನಕಾಯಿಯನ್ನು ನುರಿದಂತಾ ಯಿತು. 'ನಿಮ್ಮ ಗಂಡನ ಹಣ ನುಂಗುವುದಕ್ಕಾಗಿ ನಾನೇಕೆ ಇಲ್ಲಿ ಇರುತ್ತೇ ನಮ್ಮ? ಬರಹೇಳಿದರು, ಬಂದೆ. ಬೇರೆಯವರ ಕಾಲು ಹಿಡಿದು ಹೊಟ್ಟೆ ತುಂಬಿಸುವವರಿಗೆ ಮರ್ಯಾದೆಯೇನಮ್ಮ? ಅವರು ಹೋಗೆಂದರೆ ಹೋಗು ತ್ತೇನೆ. ಸ್ತ್ರೀಯರ ರೋಗಶುಶ್ರೂಷೆ ಮಾಡುವುದು ಪುಣ್ಯದ ಕೆಲಸ. ತಮ್ಮಂಥ ಕುಲೀನೆಯರಿಗೂ ಹೇಸುವ ಕೆಲಸವಲ್ಲ. ಇರಲಿ; ಅವರು ಹೋಗೆಂದು ಹೇಳಲಿ. ಕಸಬರಿಗೆಯ ಸಂಭಾವನೆಯಿಲ್ಲದೆಯೂ ನಾನು ಹೋದೇನು' ಎಂದಳವಳು.

ಪಾರ್ವತಿ – ನೀವು ಹಾಗೆಯೇ ಮಾಡಿರಿ. ನನ್ನ ಕೈಗೆ ಕಸಬರಿಗೆಯ ಆಯುಧ ಹಿಡಿವ ಸಂದರ್ಭವನ್ನು ತಂದುಕೊಡಬೇಡಿರಿ.

ಚಂಚಲೆಯ ದೇಹವು ನಖಶಿಖಾಂತವಾಗಿ ಬೆವರು ಸುರಿಸಿತು. ನಂದಿ ಸಿದ ದೀಪದಂತೆ ಪ್ರಕಾಶಹೀನವಾದ ಮುಖದಿಂದ ಪರಾಭವ ದುಃಖದ ಹೊಗೆ ಹೊರಟಿತು. ನಿಟ್ಟುಸಿರು ಕರೆದು ಇನ್ನೊಂದೆಡೆಗೆ ನಡೆದಳು.

ಹೋಗುವಾಗ ಅವಳ ಹೃದಯವನ್ನು ಈ ಪರಿಯ ಆಲೋಚನೆಗಳು ಕಡಿಯತೊಡಗಿದುವು:– ಪಾರ್ವತಿಯ ಮಾತನ್ನು ಕೇಳಿದರೆ, ಶ್ರೀಧರನ ಸ್ವಭಾವವು ಮೋಹನನ ವರ್ಣನೆಗೆ ಅನುಗುಣವಾಗಿದೆ ಎನ್ನಬೇಕು. 'ನಿನ ಗೇನೂ ಭೂತಬಾಧೆ ಇಲ್ಲವಲ್ಲ!' ಎಂದು ಪಾರ್ವತಿ ಸೀತಮ್ಮನಲ್ಲಿ ಪ್ರಶ್ನಿಸಿ ದಳಲ್ಲ! ಜನರು ಆಡುವುದೆಲ್ಲ ನಿಜವೇ? ಪಾರ್ವತಿಯ ಅಡ್ಡ ಸವಾಲುಗಳಲ್ಲಿ ಒಂದಕ್ಕೂ ಸಮರ್ಪಕವಾದ ಉತ್ತರವನ್ನು ಸೀತಮ್ಮನು ಕೊಡಲಿಲ್ಲ. ಇದೇಕೆ? ಸೀತಮ್ಮನೂ ಶ್ರೀಧರನಲ್ಲಿ ಅನುರಕ್ತೆಯೆ? ಶ್ರೀಧರನು ಎರಡು ದೋಣಿಗೆ

ಕಾಲಿಟ್ಟವನೇ? ಮನೆ ಹೆಂಗುಸರು ನಿರಾಧಾರನಾಗಿ, ತಮಾಷೆಗಾಗಿ, ತಮ್ಮವನ ವಿಷಯದಲ್ಲಿ ಅಪವಾದ ಹೇಳುವರೇ? ಸೀತೆಯ ನಡತೆ ಹೇಗೂ ಇರಲಿ; ಅವಳು ಸಾಧುಪ್ರಾಣಿ ಎಂಬುದು ನಿಜ. ಪಾರ್ವತಿ ಹಾಗಲ್ಲ. ಹೆಂಡತಿಯ ಅಧಿಕಾರವಿರುವುದರಿಂದ ಅವಳ ಗುಣದಲ್ಲಿ ಕಾರ ಹೆಚ್ಚು. ಒಣಶುಂಠಿ ಯಂತೆ ದೇಹವು ಆರಿದರೂ ಆ ಕಾರವು ಕಡಿಮೆಯಾಗಲಿಲ್ಲ. ಶ್ರೀಧರನ ಸೌಂದರ್ಯದ, ಸಿರಿವಂತಿಕೆಯ ಹೊಲದಲ್ಲಿ ಪಾರ್ವತಿಯೆಂಬ ಬೆರ್ಚನ್ನು ಕಟ್ಟಿದನೆ ಪರಮಾತ್ಮ?

ಚಂಚಲೆ ಆ ದಿನ ಚಂಚಲೆಯೆ ಆದಳು. ಬಿರುಗಾಳಿ ಹೊಡೆದ ಕೋಮಲವಾದ ಬಳ್ಳಿಯಂತೆ ತತ್ತರಿಸಿದಳು. ಅಪಮಾನವೇದನೆಯಿಂದ ಕಣ್ಣೀರು ಸುರಿಸಿದಳು.

ಅವಳು ಹೋಗುತ್ತಿದ್ದಾಗ, ಅವಳಿಗೆ ಕೇಳಬೇಕೆಂದೆ ಪಾರ್ವತಿ 'ನೋಡಕ್ಕ ಅವಳ ಕಣ್ಣೀರನ್ನು! ಪಾತ್ರ ಹಿಡಿದರೆ ಅವಳ ಕಣ್ಣೀರು ಒಂದು ಸೇರಾದೀತು. ಕಪಟಿಗಳ ಕಣ್ಣೀರೆ ಹಾಗೆ; ಕಣ್ಣಿನಿಂದ ಮಾತ್ರವಲ್ಲ, ಮೂಗಿನಿಂದ, ಬಾಯಿಯಿಂದ, ರೋಮರೋಮಗಳಿಂದ, ಅಂಗೋಪಾಂಗಗಳಿಂದ ಸುರಿದೀತು' ಎಂದು ತನ್ನ ವಯೋಜ್ಯೇಷ್ಠತೆಯ ಅಧಿಕಾರದಿಂದ ಮಾನವ ಸ್ವಭಾವದ ನಿರೂಪಣೆಯಲ್ಲಿ ನಿರತಳಾದಳು.

'ಈಕೆಗೆ ಇಂತಹ ನಿಷ್ಠುರವಾದ ನಾಲಗೆ ಹಿಂದೆಂದೂ ಇರಲಿಲ್ಲ. ದೇಹದ ರೋಗವೊಂದೆಡೆ. ಮನೋರೋಗವೊಂದೆಡೆ. ಇಂತಹ ಸ್ಥಿತಿಯಲ್ಲಿ ಎಲ್ಲರೂ 'ಇಷ್ಟೆ' ಎಂದೆಣಿಸಿಕೊಂಡು ಸೀತಮ್ಮ ಸುಮ್ಮನಿದ್ದಳು.

# ಹದಿನಾಲ್ಕನೆಯ ಪ್ರಕರಣ

ಮರುದಿನ ಸಂಜೆಗ ಶ್ರೀಧರರಾಯನು ಹಳ್ಳಿಗೆ ಬಂದನು. ಚಂಚಲಾ ಶ್ರೀಧರರ ಸಹವಾಸವು ಹಳ್ಳಿಯ ನಡುವೆ ಪಲ್ಲವಿಸಿದಂದಿನಿಂದ ಒಂದು ದಿನವಾದರೂ ಆತನು ಅನುಪಸ್ಥಿತನಾದುದನ್ನು ಯಾರೂ ಕಾಣರು. ಬರುವಾಗ ಸ್ವಲ್ಪ ತಡವಾದರೆ, 'ಕಾರ್ಯಬಾಹುಲ್ಯ, ತಡವಾಯಿತು ಚಂಚಲೇ! ಅಗಸರ ಕತ್ತೆ ನಾನು . ಒಂದು ನಿಮಿಷವೂ ಬಿಡುವಿಲ್ಲ ನಿನ್ನ ಸಾಹಚರ್ಯದ ಸುಖವನ್ನನುಭವಿಸಬೇಕಾದರೂ, ಕೆಲಸವನ್ನು ಕಡಿದು, ಸಮಯವನ್ನು ಕದ್ದು ಬರಬೇಕಾಗುತ್ತದೆ' ಹೀಗೆಲ್ಲ ಉಪಚಾರೋಕ್ತಿಗಳನ್ನಾಡಿ, ಚಂಚಲೆಯ ಮನಃ ಪ್ರಸಾದವನ್ನೆಸಗುವುದು ಆತನ ಕಟ್ಟಳೆಯಾಗಿದ್ದಿತು. ಇಂದು ಅದೇನೂ ಇಲ್ಲ. ಬಂದನು, ಮೋಟರಿನಿಂದ ಕೆಳಗಿಳಿದನು. ಚಂಚಲೆಗೆ ಅಪರಿಚಿತವಾಗಿದ್ದ ಖಿನ್ನತೆಯ ಹೊರೆ ಹೊತ್ತು ಮನೆಯೊಳಗೆ ಪ್ರವೇಶಿಸಿದನು. ಚಂಚಲೆ ಆತನ ಕಡೆಗೆ ಸಾಕೂತದೃಷ್ಟಿಯನ್ನೆಸೆದಳು,

ಶ್ರೀಧರನು 'ಬಾ ಮುದ್ದು! ಇಲ್ಲಿ ಕುಳಿತುಕೊ!' ಎಂದು ಪ್ರೇಮಾಧಿಕಾರ ದಿಂದ ಮಾತಾಡಿದನು. 'ಮುದ್ದು' ಇಂದು, ಎಂದಿನಂತಹ 'ಮುದ್ದು' ಆಗಿರ ಲಿಲ್ಲ. ಅಭಿಮಾನದ ಮುದ್ದೆಯಾಗಿದ್ದಳು. ಆಕೆಯ ಮನಸ್ಸನ್ನು ಏನೋ ಒಂದು ಕಾತರತೆಯು ಪೀಡಿಸುತ್ತಿದ್ದಿತೆಂಬುದನ್ನು ಶ್ರೀಧರನು ತಿಳಿಯದಿರಲಿಲ್ಲ.

ಶ್ರೀಧರ: ಇದೇಕೆ ನಿನ್ನ ಮುಖದಲ್ಲಿಂದು ಮೌನ? ಮುಚ್ಚಿಟ್ಟ ವೀಣೆ ಯಂತ್ರ ಅದೇಕೆ ಅಶಬ್ದವಾಗಿದೆ?

ಪಾರ್ವತಿಗೂ ತನಗೂ ನಡೆದ ಸಂಭಾಷಣೆಯನ್ನೊಮ್ಮೆ ಹೇಳಿಬಿಡಲೇ? ಎಂದೊಮ್ಮೆ ಆಕೆಗೆ ಎನಿಸಿತು. ಅದರಿಂದೇನೂ ಪ್ರಯೋಜನವಿಲ್ಲವೆಂದು ಪುನ ರಾಲೋಚನೆ ಬಂತು.

ಚಂಚಲೆ:- ಮೀಟುವ ವೈಣಿಕನಿಲ್ಲ. ವೀಣೆ ಹೇಗೆ ನುಡಿದೀತು?

ಶ್ರೀಧರ:- ಹೌದು; ನಾನೊಂದು ತಪ್ಪು ಮಾಡಿದೆ. ನಿನ್ನೆ ಇಲ್ಲಿಗೆ ಬರಲಿಲ್ಲ. ಮಹಾಪರಾಧವಾಯಿತು. ಆದರೆ ಇದು ಅನಿವಾರ್ಯವಾಗಿದ್ದಿತು ಚಂಚಲೇ! ನಮ್ಮ ಸಂಬಂಧವನ್ನು ನೋಡಿ ಯಾರೋ ಅಸೂಯೆಪಟ್ಟಂತೆ

ತೋರುತ್ತದೆ. ಪ್ರೇಮದ ಮಧುರಗಾನಸುಖದಲ್ಲಿ ಇಹಪರಗಳನ್ನು ಮರೆತ ಕೋಗಿಲೆಗಳೆರಡನ್ನು ನೋಡಿ, ಮತ್ಸರಪಟ್ಟು ದೂರದ ನಾಯಿಯೊಂದು ಬೊಗಳುತ್ತಿದೆ . . . ಅಷ್ಟೆ.

ಚಂಚಲೆ:- ಯಾವ ನಾಯಿಯದು?

ಶ್ರೀಧರ.- ಯಾವುದೋ ಒಂದು ಹುಚ್ಚುನಾಯಿ. ಹುಚ್ಚಾದ ಕಾರಣ ಕಚ್ಚುವ ಭೀತಿ . . . ಅಷ್ಟೆ.

ಚಂಚಲೆ:-ನನಗೇನೂ ಅರ್ಥವಾಗುವುದಿಲ್ಲ

ಶ್ರೀಧರ.-ಎಲ್ಲವನ್ನೂ ಬಿಚ್ಚಿಹೇಳುತ್ತೇನೆ ಚಂಚಲೆ! ನನಗೊಂದು ಪತ್ರ ಬಂದಿತ್ತು. 'ನನ್ನ ಸಮೀಪದ ಹುಡುಗಿಯೊಬ್ಬಳನ್ನು ಅಪಹರಿಸಿರುವೆ. ಜಾಗ್ರತೆ ತೆಗೆದುಕೊ. ಮಾನಮರ್ಯಾದೆಯ ಸಮೇತವಾಗಿ, ಅವಳನ್ನು ಆಕೆಯ ತಾಯಿಯ ಬಳಿಯಲ್ಲಿ ತಂದು ಬಿಡದಿದ್ದರೆ, ನಿನ್ನ ಎಲುಬು ಸಹ ದೂಳಾಗುವುದು. ಜಾಗ್ರತೆ!' ಎಂದಿತ್ತು ಅದರಲ್ಲಿ. ಸಹಿಯಿರಲಿಲ್ಲ. ಈ ಹುಚ್ಚುನಾಯಿ ಯಾವುದೆಂದು ಅರಸುವುದಕ್ಕೆ ವಿಲಂಬವಾಯಿತು ಚಂಚಲಾ! ದೊಣ್ಣೆಯಿಂದ ಹೊಡೆಯಬೇಕು ಅದರ ತಲೆಗೆ . . . ಹೊಲೆಯರಿಂದ ಎಳೆಯಿಸಬೇಕು ಅದರ ಶವವನ್ನು!

ಚಂಚಲೆಯ ಹೃದಯದಲ್ಲಿ ಆಶ್ಚರ್ಯಾವೇಗಗಳು ಏಕಕಾಲದಲ್ಲಿ ತಲೆದೋರಿದುವು. 'ಅಯ್ಯೋ' ಎಂದಳು.

ಶ್ರೀಧರ:-ಈತ ಯಾರು ಚಂಚಲೆ? ಅವನ ಸಮೀಪದ ಹುಡುಗಿಯಂತೆ ನೀನು!

ಚಂಚಲೆ:- ನನಗೆ ಗೊತ್ತೇ ಇಲ್ಲವಲ್ಲ!

ಶ್ರೀಧರ:- 'ಸಮೀಪ' ಎಂಬುದಕ್ಕೆ ಎರಡರ್ಥವಾಗುತ್ತದೆ. ಒಂದನಯದು – ಒಬ್ಬರು ಇನ್ನೊಬ್ಬರ ಮೊರೆಯಲ್ಲಿ ಹೇಗೋ ಹುಟ್ಟಿಬಿಡುವುದು; ಸಂಬಂಧಕರಾಗಿರುವುದು. ಎರಡನೆಯದು ಆಕರ್ಷಣಶಕ್ತಿಯಿಂದಾಗುವ ಸಾಮೀಪ್ಯ- ಇದರರ್ಥ ನಿನಗೆ ಗೊತ್ತಾಗದಿರದು. ನನಗೂ ನಿನಗೂ ವಿಧಿ ಕೂಡಿಸಿದ ಸಾಂಸಾರಿಕ ಸಂಬಂಧವಿಲ್ಲದಿದ್ದರೂ ಹೃದಯ ಸಂಬಂಧವಿದೆಯಲ್ಲ! ಆ ತೆರದ್ದು.

ಚಂಚಲೆ: ಹೀಗೆ ಎರಡು ಬಗೆಯಲ್ಲಿಯೂ ನನ್ನ ಹತ್ತಿರಕ್ಕೆ ಬರುವವರಿಲ್ಲ.

ಶ್ರೀಧರ.- ಆಲೋಚನೆ ಮಾಡು, ಕಳೆದುಹೋದ ನೆನಪುಗಳನ್ನು ಅರಸು.

ಚಂಚಲೆ – ನನಗೇನೂ ತಿಳಿಯುವುದಿಲ್ಲ.

ಶ್ರೀಧರ – ದ್ವಿತೀಯ ರೀತಿಯ ಸಂಬಂಧಕ್ಕೆ ಹಕ್ಕುದಾರನು ಒಬ್ಬನ ಎಂದು ಬಲ್ಲೆ . . . ಆದರೆ . . ಅಣ್ಣನ ಮಗ ಆತ, ತಂಗಿಯ ಮಗಳು ಈಕೆ, ಎನ್ನುವಂತಹ ಮೊರೆ ಹಿಡಿದು ಸಂಬಂಧಿಕರೆನಿಸಿಕೊಳ್ಳುವವರು ಯಾರಾದರೂ ಇರುವರೇ?

ಚಂಚಲೆ·– ನನ್ನ ಮನಸ್ಸು ಮುಂದೋಡುವುದಿಲ್ಲ.

ಶ್ರೀಧರ:– ಹಾಗಾದರೆ ನಾನು ಓಡಿಸುತ್ತೇನೆ ಕೇಳು. ನಿನಗೊಬ್ಬ ಭಾವಸಿದ್ದಾನೆ. ಅವನ ಹೆಸರು ಮೋಹನ . . .

ಚಂಚಲೆ· ಮೋಹನನೆ? ಅವನೆಂದಿಗೂ ಹೀಗೆ ಬರೆಯುವುದು ಅಸಂಭವ

ಶ್ರೀಧರ – ನೀನು ಅಸಂಭವವೆಂಬುದನ್ನು, ನಾನು ಸತ್ಯವೆಂದು ರುಜು ಪಡಿಸುತ್ತೇನೆ. ಈ ಕಾಗದವನ್ನು ಕಂಡೊಡನೆ ನಾನು ನೆಟ್ಟನೆ ನಿಮ್ಮ ಮನೆಗೆ ಹೋದೆ. ಕಾಶಿ ಅಮ್ಮನನ್ನು ಕೇಳಿದೆ. ಅವಳಿಗೆ ಸಂಬಂಧದ ನನಪಿತ್ತು. ಹೀಗ ಬರೆದವನು ಮೋಹನನೆ ಆಗಿರಬೇಕೆಂದೂ, ಇಲ್ಲಿಗೆ ಹೊರಡುವ ಮೊದಲು ವಿದುರನೀತಿಯನ್ನು ನಿನಗೆ ಬೋಧಿಸಿದ್ದನೆಂದೂ, ನೀತಿಬೋಧೆ ಕೊಡುವುದಲ್ಲದೆ ಬೇರೇನೋ ಉದ್ದೇಶವು ಆತನ ಎದೆಯೊಳಗೆ ಅವಿತಿರುವುದೆಂದೂ ಆಕೆಯೇನೋ ಹೇಳಿದಳು. ನಿನಗೆ ಮರೆತಿರಬಹುದು.

ಚಂಚಲೆ:– ಈಗ ನೆನಪಾಯಿತು; ಅಮ್ಮ ಹೇಳಿದುದು ನಿಜ.

ಶ್ರೀಧರ:– ನಿಜವಾದ ನೆನಪುಗಳು ಈಗಲಾದರೂ ಬರಲಿ, ಚಂಚಲೆ! ಹೌದು; ಅದು ನಿನಗೂ ಗೊತ್ತಿದೆ ಅವನಿಗೆ ಏನು ಪ್ರತೀಕಾರ ಮಾಡಿದೆನೆಂದು ಗೊತ್ತೊ? ಅದನ್ನು ಕೇಳಿದರೆ ನಿನಗೆ ವ್ಯಸನವಾದೀತು; ಅಷ್ಟೆ!

ಚಂಚಲೆ:– ವ್ಯಸನವೇನು? ಮಾಡಿದ ಕರ್ಮದ ಫಲವನ್ನು ಯಾರೂ ಉಣ್ಣಬೇಕಲ್ಲವೇ?

ಶ್ರೀಧರ.– ಸಹಜವಾದ ಮಾತಿದು; ಹೀಗೆ ಹೇಳು. ಮಾಡಿದುದರ ಫಲವನ್ನು ಎಲ್ಲರೂ ಉಣ್ಣಲೇಬೇಕು ಇನ್ನೊಬ್ಬರ ಎಲುಬನ್ನು ಕಾಫಿಪುಡಿ ಮಾಡುವ ಯಂತ್ರದಲ್ಲಿ ಕುಟ್ಟಿ ಪುಡಿಮಾಡುವ ಆ ನಾಯಿಯ ಎಲುಬು ನುಚ್ಚಾಯಿತು.

ಚಂಚಲೆ. - ಏನು ಸತ್ತನೇ?

ಶ್ರೀಧರ:– ಕೊಲ್ಲುವುದರಲ್ಲಿ ಪೌರುಷವೇನಿದೆ ಚಂಚಲೆ? ಸತ್ತವನು ತನಗಾದ ಅಪಮಾನವನ್ನು ಸ್ಮರಿಸುವುದುಂಟೆ? ಮನುಷ್ಯರನ್ನು ಕೊಲ್ಲಬಾರದು ನೋಡು. ಕೊಂದರೆ ಜೀವ ಹೋಯಿತು. ಕರ್ಮಫಲವನ್ನು ಅನುಭವಿಸುವ ಜೀವ ಪಲಾಯನಮಾಡಿತು. ಅವನು ಸಾಯಲಿಲ್ಲ. ನಡುಬೀದಿಯಲ್ಲಿ ಆತ ನಿಗೆ ಪಾದರಕ್ಷೆಯ ಸೇವೆಯಾಯಿತು.

ಚಂಚಲೆ:- (ಗಾಬರಿಯಿಂದ) ಏನು ಮಾಡಿದಿರಿ?

ಶ್ರೀಧರ:- ಮಾಡಿದುದೇನೂ ಇಲ್ಲ. ನಡುರಸ್ತೆಯಲ್ಲಿ ಹೋಗುತ್ತಿದ್ದಾಗ, ಯಾರೋ ಪುಂಡರು ಅವನ ಕೈಹಿಡಿದು ನಿಲ್ಲಿಸಿ, ಮರ್ಮಸ್ಥಾನಗಳನ್ನು ಬಿಟ್ಟು, ಮರಣವಾಗದಂತೆ ಜಾಣತನದಿಂದ ಹೊಡೆದರು. ಅವನನ್ನು ಸಂಬಳಕ್ಕಿಟ್ಟಿದ್ದ ಧನಿಗಳು 'ನಾಳೆಯಿಂದ ನಿನಗೆ ಕೆಲಸವಿಲ್ಲ' ಎಂದರು; ಅಷ್ಟೆ!

ಚಂಚಲೆ.– ಇದೂ ನಿಜವೇ?

ಶ್ರೀಧರ:– ಸುಳ್ಳಾದುದನ್ನು ಶ್ರೀಧರನು ಎಂದಾದರೂ ಹೇಳುವನೇ?

ಚಂಚಲೆ:– ನಿಮ್ಮ ಮಾತು ಸುಳ್ಳೆಂದಲ್ಲ. ಅಂತಹ ಕಾಗದವನ್ನು ಅವನೇ ಬರೆದನೆಂಬುದಕ್ಕೆ ಆಧಾರ?

ಶ್ರೀಧರ.– ಆಧಾರವೇನು? ಅವನ ಒಪ್ಪಿಗೆ. ನಿನ್ನ ತಾಯಿ ಕಾಶಿ ಅಮ್ಮನ ಹೇಳಿಕೆ.

ಚಂಚಲೆಯ ಮುಖವನ್ನು ಕಾರ್ಮೋಡ ಮುಸುಕಿತು. ಮನುಷ್ಯನು ಸುಖದ ಹವಣಿಕೆಗಳನ್ನು ಎಷ್ಟು ಜಾಣತನದಿಂದ ನೆರವೇರಿಸಿದರೂ ದುಃಖಗಳು ಸಮೀಪಕ್ಕೆ ಬಂದು ಇಣಿಕಿ ನೋಡಿ 'ನಾವೂ ಬರಲೇ?' ಎಂದು ಕೇಳುತ್ತಿರುವುವಲ್ಲ?

ಶ್ರೀಧರನು ಸಮಾಧಾನಪಡಿಸಿದನು.– ವ್ಯಸನಪಡಬೇಡ ಚಂಚಲೆ ವ್ಯಸನ

ಪಡಬೇಡ. ನನಗೂ ಒಬ್ಬ ಸಮೀಪಬಂಧುವಿದ್ದಾನೆ. ಅವನ ಸಮೀಪದ ವಸ್ತುವನ್ನು ನಾನು ಅಪಹರಿಸಿದೆನೆಂದು (ಇಷ್ಟು ಹೇಳುವಾಗ ನಾಲಗೆ ಹಿಂದೆಳೆಯಿತು. 'ಅನವಶ್ಯ ಸಂಗತಿಯಿದು; ಚಂಚಲೆಯ ಕಿವಿಗೆ ಬೀಳಬೇಕಾದುದಲ್ಲ' ಎಂದು ನಾಲಗೆಯನ್ನು ಕಚ್ಚಿಹಿಡಿದು, ಮಧ್ಯದಲ್ಲಿಯೇ ಮಾತನ್ನು ನಿಲ್ಲಿಸಿಬಿಟ್ಟರೆ, ಚಂಚಲೆಗೆ ಬೇಸರವಾದೀತೆಂದು ಹೇಳತೊಡಗಿದನು) ನಾಚಿಗೆಯಾಗುತ್ತಿದೆ ಚಂಚಲೆ . . . ಇಂತಹ ದುಷ್ಕಾರ್ಯವನ್ನು ನಾನು ಮಾಡಿದೆನೆಂದು ಆತನ ಮನಸ್ಸಿಗೆ ಆಲೋಚನೆ ಬರುವುದಕ್ಕಾದರೂ ಆಧಾರ ಬೇಕಲ್ಲವೆ? ಹುಚ್ಚರ ಕತೆಯನ್ನಾಡಲು ನಾಚಿಕೆಯಾಗುತ್ತಿದೆ. ಹೌದು . . . ಅವನೂ ಒಂದು ಇದೇ ತರದ ಪತ್ರ ಬರೆದಿದ್ದಾನೆ ನೂರರಲ್ಲಿ ತೊಂಬತ್ತೊಂಬತ್ತು ಮಂದಿಯ ಭ್ರಾಂತಿಗೆ ಡೊಣ್ಣೆಯೇ ಮದ್ದು.

ಚಂಚಲೆ ಮೌನವಾಗಿದ್ದಳು.

ಶ್ರೀಧರ:– ವ್ಯಸನಪಡಬೇಡ! ನಾವಿಬ್ಬರೂ ಸಮಾನಧರ್ಮರೆಂದಾಯಿತು. ಚಿಂತೆಯ ಬಾಗಿಲನ್ನು ಯಾವಾಗಲೂ ಮುಚ್ಚಿಬಿಡಬೇಕು ನೋಡು. ಅದನ್ನು ತೆರೆದಿಟ್ಟರೆ, ದಾಸರು ಹೇಳಿದಂತೆ, 'ಅನುಗಾಲವು ಚಿಂತೆ ಜೀವಕ್ಕೆ!' ಎಂದು ಪಲ್ಲವಿ ಹಾಡಬೇಕಾದೀತು. ಇತ್ತ ಬಾ .. ಎಂದು ಶ್ರೀಧರನು ಚಂಚಲೆಯ ಅತಿ ಸಮೀಪಕ್ಕೆ ಬಂದನು

ಚಂಚಲೆಯ ಅಂತರಂಗವನ್ನು ಏನೋ ಒಂದು ದುಃಖಚ್ಛಾಯೆ ಆವರಿಸಿದ್ದರೂ, ಕೃತಕಹಾಸವನ್ನು ತೋರಿ, ಬರಿಯ ಮಾತಿನಿಂದ ತೃಪ್ತನಾಗದೆ ಕಾತರಿಸುತ್ತಿದ್ದವನ ಕಡೆಗೆ ಅಶ್ರುಸಿಕ್ತವಾದ ಕಟಾಕ್ಷವನ್ನು ಬೀರಿದಳು.

ಆಕೆಯ ಮನಸ್ಸಿಗೂ ನಗುವಿಗೂ ಇರುವ ತಾಳ-ಮೇಳ ಸರಿಯಾಗಿಲ್ಲವೆಂದು ಶ್ರೀಧರನಿಗೆ ವಿದಿತವೇ ಆಗಿದ್ದರೂ, ತಮ್ಮ ಜೀವನ ನಾಟಕದಲ್ಲಿ ಪಟಾಕ್ಷೇಪದಿಂದ ಅಕ್ರಮಪ್ರವೇಶ ಮಾಡಬೇಕೆಂದಿದ್ದ, ಮೋಹನನ ಮರುಳುಬುದ್ಧಿಗಾಗಿ ಆಕೆ ನೊಂದಿರಬೇಕೆಂದು ಕಾರಣ ಕೊಟ್ಟು, ಈ ನೋವು ತನ್ನಿಂದ ತಾನೆ ಮಾಸಿಹೋದೀತೆಂದು ಭಾವಿಸಿಕೊಂಡನು. ಹೇಗೂ ಇರಲಿ, ಸಾಧ್ಯವಿರುವಷ್ಟು ಕಾಲ ಸುಖವನ್ನು ಅನುಭವಿಸುವುದರಲ್ಲಿ ಅಪರಾಧವುಂಟೆ?

ಚಂಚಲೆಯ ಮನಸ್ಸು ವಿಹ್ವಲವಾಗಿದ್ದಿತು. ಇದುವರೆಗೆ ಶ್ರೀಧರನ ಹೃದಯರಾಜ್ಯವು ಅಜ್ಞಾತಪ್ರದೇಶವಾಗಿದ್ದಿತು. ಈಗ ಸಮೀಪಕ್ಕೆ ಬಂದಂತೆ,

ಅದರಲ್ಲಿಯ ಏರು-ತಗ್ಗುಗಳು, ದರಿ-ಸರುಗಳು, ಸೌಂದರ್ಯ-ವೈರೂಪ್ಯಗಳು, ಒಂದೊಂದಾಗಿ ಕಾಣತೊಡಗಿದುವು ಎನ್ನಬಹುದು. ವಿಚಾರವು ವ್ಯಸನಹೇತು ವಾಯಿತು

ಒಂದೆಡೆ, ಹಿಂದಿನ ದಿನ ಪಾರ್ವತಿಯೂ ಸೀತಮ್ಮನೂ ಆಡುತ್ತಿದ್ದ ಸಂಭಾಷಣದಿಂದ ಹೆಕ್ಕಿದ ಸಂಗತಿಗಳು; ಇನ್ನೊಂದೆಡೆ ಸೀತಮ್ಮನು ಶ್ರೀಧರನ ವಿಷಯದಲ್ಲಿ ಪ್ರದರ್ಶಿಸುತ್ತಿದ್ದ ಮೂಕಸ್ವಭಾವ; ಮತ್ತೊಂದೆಡೆ ಶ್ರೀಧರನ ಮನಸ್ಸು ಬೇರೆಬೇರೆ ಹೊಲಗಳಲ್ಲಿ ಮೇಯಹೋಗುವ ಕಳ್ಳಹಸು ಎಂಬ ಸಂದೇಹ; ಅದರೊಡನೆ, ಈಗತಾನೆ ಅವನ ಬಾಯಿಯಿಂದಲೇ ಬಿದ್ದ ಯಾರೋ ಒಬ್ಬ ಸಮೀಪಬಂಧು - ಯಾವುದೋ ಒಂದು ವಸ್ತುವಿನ ಕುರಿತಾಗಿ ಏನೋ ಬರೆದನೆಂಬ ಸಮಾಚಾರ-ಇವುಗಳನ್ನೆಲ್ಲ ಸೇರಿಸಿ ಅರ್ಥಮಾಡಿದಾಗ, ಶ್ರೀಧರನ ಹಾವಭಾವಗಳಿಂದ ಸೂಚಿತವಾಗದ, ಒಂದು ಪ್ರಕೃತಿಯು ಅವನಲ್ಲಿದೆ, ಎಂಬ ಊಹೆಯು ಚಂಚಲೆಯಲ್ಲಿ ಉಂಟಾಯಿತು.

ಶ್ರೀಧರನಲ್ಲಿಯೂ ಅಂತಹದೇ ಊಹೆ. 'ನನ್ನ ಸಮೀಪದವಳು' ಎಂದು ಮೋಹನ ಬರೆದನಲ್ಲ? ಸಮೀಪದವಳು ಎಂಬ ಪದಕ್ಕೆ ಎರಡರ್ಥ ಆಗದೇ?

ಸತ್ಯಸ್ಥಿತಿಯೇನೆಂದರೆ, ಏಕಕಾಲದಲ್ಲ ಶ್ರೀಧರನಿಗೆ ಎರಡು ಭಯೋತ್ಪಾದಕ ಪತ್ರಗಳು ಹೋಗಿದ್ದುವು. ಒಂದನೆಯದು ಮೋಹನನದು, ಎರಡನೆಯದು ಅವನಣ್ಣನದು. ಅದರಲ್ಲಿ 'ನನ್ನ ಹೆಂಡತಿಯನ್ನು ಕೆಡಿಸಿದ ನೀಚ! ನಿನ್ನ ರಕ್ತ ಕುಡಿಯದೆ ನನಗೆ ಸಮಾಧಾನವಾಗದು–ನಿನ್ನ ಭ್ರಾಂತ ಸಹೋದರ' ಎಂಬ ಒಕ್ಕಣೆ ಇದ್ದಿತು.

ಇಬ್ಬರೂ ತಂತಮ್ಮ ಅಂತರಂಗಗಳನ್ನು ಬಚ್ಚಿಟ್ಟುಕೊಂಡರು. ಹಾಗಾಗದೆ ಗತ್ಯಂತರವಿರಲಿಲ್ಲ.

# ಹದಿನೈದನೆಯ ಪ್ರಕರಣ

ಆ ದಿನ ಆದಿತ್ಯವಾರ. 'ಒಮ್ಮೆ ಮನೆಗೆ ಹೋಗಿ ಬರುತ್ತೇನೆ. ತಾಯಿಯ ಕ್ಷೇಮಸಮಾಚಾರವನ್ನು ವಿಚಾರಿಸಿ ಬರುತ್ತೇನೆ' ಎಂದು ಚಂಚಲೆ ಕೇಳಿ ಕೊಂಡಳು.

'ನಿನ್ನ ತಾಯಿ ಸುಖವಾಗಿದ್ದಾಳೆ' ಎಂದು ಶ್ರೀಧರನು ಉತ್ತರ ಕೊಟ್ಟನು.

'ತಾಯಿಯನ್ನು ನೋಡಿಬರುವುದರೊಡನೆ, ಮೋಹನನನ್ನೂ ಕಂಡು ಆತ ನಿಗೂ ಬುದ್ಧಿನೀತಿ ಹೇಳಿಬರಬೇಕೆಂಬ ಆತುರವಿದೆ' ಎಂದಳು ಚಂಚಲೆ. 'ಆ ಹುಚ್ಚುನಾಯಿಗೆ ಮದ್ದುಮಾಡಿದ್ದೇನೆ. ಹುಚ್ಚಿಳಿಯುವಾಗ ಬುದ್ಧಿಬಂದೀತು. ಅಷ್ಟಕ್ಕಾಗಿ ನೀನು ಹೋಗಬೇಕಾದುದಿಲ್ಲ. ಸುಮ್ಮನೆ ನೋಡಿಬರಬೇಕೆಂದರೆ ನಾನೇನು ಅಡ್ಡಿಮಾಡುವುದಿಲ್ಲ' ಎಂದು ಶ್ರೀಧರನ ಉತ್ತರ.

ಚಂಚಲೆಯ ಎದೆಯನ್ನು ಮುಳ್ಳುಮೊನೆಯಿಂದ ಚುಚ್ಚಿದಂತಾಯಿತು. ಶ್ರೀಧರನ ಮಾತಿಗೆ 'ನೀನು ಹೋಗುವ ಆವಶ್ಯಕತೆಯಿಲ್ಲ. ಆದರೂ ಹೋಗು ವುದಕ್ಕೆ ಅಡ್ಡಿಯಿಲ್ಲ' ಎಂದರ್ಥ. ಚಂಚಲೆಯೂ ಹಟಮಾರಿ. ಶ್ರೀಧರನಿಗೆ ವ್ಯಕ್ತಿಸ್ವಾತಂತ್ರ್ಯವನ್ನು ಮಾರಿದ್ದಳೇ? 'ಹೇಗೂ ಇರಲಿ, ಹೋಗಿಬರುತ್ತೇನೆ' ಎಂದಳು 'ಹೂಂ, ಮೋಟರು ಸಿದ್ಧವಾಗಿಯೇ ನಿಂತಿದೆ' ಎಂದು ಶ್ರೀಧರನು ಹೇಳಿದನು. ಚಂಚಲೆ ಮೋಟರು ಹತ್ತಿದಳು.

ಶ್ರೀಧರನು ತನ್ನ ಅಂತಃಪುರವಾಸಿನಿಯ ಕಡೆಗೆ ಲಕ್ಷ್ಯವನ್ನು ತಿರು ಗಿಸಿ, ಪಾರ್ವತಿಯಿದ್ದಲ್ಲಿಗೆ ಹೋಗಿ ಆಕೆಯ ಯೋಗಕ್ಷೇಮಗಳನ್ನು ವಿಚಾರಿಸಿ ದನು

ಪಾರ್ವತಿ:– ಆ ಹುಚ್ಚು ಹುಡುಗಿಯನ್ನು ಕಳುಹಿಸಿಕೊಡದೆ ನನ್ನ ರೋಗವು ವಾಸಿಯಾಗುವಂತಿಲ್ಲ.

ಶ್ರೀಧರ.–ನನ್ನ ನಡತೆಯಲ್ಲಿ ಸಂದೇಹವೇ?

ಪಾರ್ವತಿ:– ಇದುವರೆಗೆ ಇಷ್ಟು ವರ್ಷ ನಿಮ್ಮ ಗೃಹಿಣಿಯಾಗಿದ್ದವಳಿಗೆ ನಿಮ್ಮ ನಡತೆಯಲ್ಲಿ ಸಂದೇಹವೆಂದರೇನು? ಅವಳನ್ನು ಕಂಡರೆ ನನಗಾಗುವ

ದಿಲ್ಲ. ಆ ಪಿಶಾಚಿಯ ವೇಷ ನೋಡಿದೊಡನೆ ನೆತ್ತರು ಬಿಸಿಯೇರುತ್ತದೆ. ಕಸಬರಿಗೆ ಹಿಡಿದು ಚಾಮರಸೇವೆ ಮಾಡಬೇಕೆನಿಸುತ್ತದೆ.

ಶ್ರೀಧರ – ನನ್ನ ನಡತೆಯಲ್ಲಿ ತಪ್ಪು ತಿಳಿವಳಿಕೆ ಮಾಡಿಕೊಂಡು, ಇಲ್ಲದ ರಗಳೆಯನ್ನು ತಲೆಗೆ ಹಚ್ಚಿ ದೇಹವನ್ನು ಸವೆಯಿಸುತ್ತಿರುವೆ. ರೋಗದ ಹೆಸರಲ್ಲಿ ಡಾಕ್ಟರರಿಗೆ ಕೊಟ್ಟ ಹಣವೆಷ್ಟು? ಪಟ್ಟ ಕಷ್ಟವೆಷ್ಟು? ನೀನು ಇದೊಂದನ್ನೂ ಎಣಿಸುವುದಿಲ್ಲವಲ್ಲ?

ಪಾರ್ವತಿ:– ರೋಗದ ಹೆಸರಲ್ಲಿ ಹಣ ಹಾಳುಮಾಡಿದ್ದೀರಿ. ದಾದಿಯರ ಹೆಸರಲ್ಲಿಯೂ ಎಷ್ಟೋ ಹಾಳುಮಾಡುತ್ತೀರಿ ರೋಗವೆಂದರೆ ದಾದಿಗಳ ಕೈಗೂಸೆ? ನಾನು ಮಂಗಳೂರಿಗೆ ಹೋಗುತ್ತೇನೆ ಅಲ್ಲಿಯ ಮಸಣದಲ್ಲಿ ಮಲಗುತ್ತೇನೆ

ಶ್ರೀಧರ.– ನೀನು ಇತ್ತೀಚೆಗೆ ಹಟಮಾರಿಯಾಗಿರುವೆ. ರೋಗದಿಂದ ನಿನ್ನ ದೇಹವು ಕ್ಷಯಿಸುವುದಕ್ಕಿಂತಲೂ ಹೆಚ್ಚಾಗಿ ಬುದ್ಧಿ ಕ್ಷಯಿಸುತ್ತಿದೆ. ಯಾರೇನು ಮಾಡಲಿ?

ಶ್ರೀಧರನ ದೃಷ್ಟಿ ಆಕೆಯ ಮೇಲೆ ಬಿದ್ದಿತು, ದೇಹ ಸವೆದುಹೋದ ಗಂಧದ ಕೊರಡಿನಂತಿದ್ದಿತು. ಕೃಷ್ಣಪಕ್ಷ ಚತುರ್ದಶಿಯ ಚಂದ್ರಬಿಂಬದಂತಿದ್ದಿತು. ಜೀವನ–ಮರಣಗಳ ನಡುವೆ ತತ್ತರಿಸುತ್ತಿದ್ದ ಜೀವಕಳೆಯೊಂದು ಈಗಳೋ ಮತ್ತೆಯೋ ಆರುವಂತೆ ಮುಖದಲ್ಲಿ ಹೊಳೆಯುತ್ತಿದ್ದಿತು. 'ಮದನಪಳ್ಳಿಗೆ ಹೋಗುವುದಲ್ಲದೆ ಬೇರೆ ಗತಿಯಿಲ್ಲ' ಎಂದು ಶ್ರೀಧರನು ಉದ್ಗಾರವೆತ್ತಿದನು.

ಪಾರ್ವತಿ.– ನಾನು ಪಳ್ಳಿಗೂ ಬರುವುದಿಲ್ಲ; ದೇವಾಲಯಕ್ಕೂ ಬರುವುದಿಲ್ಲ. ಒಮ್ಮೆ ಆ ಬಿಂಕದ ಹೆಣ್ಣನ್ನು ಒದೆದು ನಮ್ಮ ನೆಲದಲ್ಲಿಯೇ ಸಾಯುತ್ತೇನೆ.

ಮಾತಾಡಿ ಪ್ರಯೋಜನವಿಲ್ಲ. ತಾನೇ ನಂದುವ ದೀಪವದು; ಊದುವುದೇಕೆ? ಶ್ರೀಧರನಿಗೆ ಸಿಟ್ಟುಸಿರೊಂದು ವೆಚ್ಚವಾಯಿತು.

ಪಾರ್ವತಿ:–ನೀವಾಗಿ ಕಳುಹಿಸದಿದ್ದರೆ, ನಾನೇ ಅದಕ್ಕೆ ವಿಲೆವಾರಿ ಮಾಡುತ್ತೇನೆ. ಆಕೆಯಲ್ಲಿ ಸ್ಪಷ್ಟವಾಗಿ ಹೇಳಿದ್ದೇನೆ. ಒಂದಿಷ್ಟು ನಾಚಿಕೆ ಇರುವ ಹೆಣ್ಣಾದರೆ, ಇನ್ನು ನನ್ನಿದಿರಲ್ಲಿ ಮುಖ ತೋರಿಸಳು.

ಶ್ರೀಧರ – ಏನು ಹೇಳಿದೆ?

ಪಾರ್ವತಿ – ನಿಮ್ಮಲ್ಲಿ ಹೇಳಿದುದನ್ನೇ.

ಶ್ರೀಧರ - ನಿನ್ನ ಸೇವೆಗೆ ಬಂದವಳಲ್ಲಿ–

ಪಾರ್ವತಿ – ಲಜ್ಜೆಗೇಡಿಗಳಲ್ಲಿ ಬೇರೇನು ಹೇಳುವುದು?

ಶ್ರೀಧರ.– ಇಲ್ಲಿಗೆ ಬಂದುದರಲ್ಲಿ ಅವಳ ತಪ್ಪೇನು?

ಪಾರ್ವತಿ: ತಪ್ಪು ಯಾರದೆಂದು ಹುಡುಕುವ ಕೆಲಸ ನನ್ನದಲ್ಲ. ಅವಳನ್ನು ಇಲ್ಲಿಂದ ಓಡಿಸುವುದೊಂದೆ ನನಗೆ ಬೇಕಾದುದು.

'ಅವಳ ಮೇಲೆ ಬೀಳುವ ಒದೆತ ನನ್ನ ಮೇಲೆ ಬೀಳಲಿ. ಅವಳನ್ನು ಹೊಡೆವ ಕಸಬರಿಗೆ ನನ್ನ ತಲೆಗೆ ಬೀಳಲಿ' ಎಂದು ಶ್ರೀಧರನು 'ಸತ್ಯಾಗ್ರಹ' ವನ್ನೆ ಹೂಡಿದನು.

ಎಲ್ಲರೂ ಸ್ವಲ್ಪಕಾಲ ಮೌನದಲ್ಲಿದ್ದರು. ಮತ್ತೆ ಶ್ರೀಧರ 'ಅತ್ತಿಗೆ ಒಮ್ಮೆ ಆ ಮನಗೆ ಬರುವಿರಾ'' ಎಂದು ಕೇಳಿದನು.

ಸೀತಮ್ಮ – ಯಾಕೆ?

ಶ್ರೀಧರ – ಮಾತಾಡುವುದಿದೆ.

ಸೀತಮ್ಮ.– ಇಲ್ಲಿಯೇ ಹೇಳಿಬಿಡಿ.

ಶ್ರೀಧರ – ನಿಮ್ಮಲ್ಲಿ ಮಾತ್ರ ಆಡುವುದಿದೆ

ಸೀತೆ ತಬ್ಬಿಬ್ಬಾದಳು. ಹೋಗುವುದೇ? ಹೋಗದಿರುವುದೇ? ಉಭಯ ಸಂಕಟ ಆಕೆಗೆ. ಶ್ರೀಧರನು ಇಷ್ಟು ಹೇಳಿ ತನ್ನ ಹೊಸಮನೆಯ ಕಚೇರಿಗೆ ನಡೆದನು ತನ್ನ ಉಪ್ಪನ್ನು ತಿನ್ನುವ ತೊತ್ತು ಇದಕ್ಕಿಂತ ಹೆಚ್ಚಿನ ಪ್ರಾರ್ಥನೆ ಇಲ್ಲದೆ, ನಾಯಿಯಂತೆ ತನ್ನ ಹಿಂದೆ ಬರಬೇಕೆಂಬ ನಿರೀಕ್ಷಣೆಯಿಂದ ನಡೆದನು.

ಪಾರ್ವತಿ - ಹೋಗಿಬಿಡು, ಅಕ್ಕ! ನಾನು ಇಲ್ಲಿಯೇ ಇಲ್ಲವೇ? ಅವರು ಏನೆಲ್ಲ ಆಟಮಾಡುತ್ತಾರೆ ನೋಡೋಣ. ನನ್ನ ಸಮಾಚಾರವನ್ನು ಆಡುವುದಕ್ಕೆ ಮಾತ್ರವೆ ಕರೆದುದಾಗಿರಲೂ ಬಹುದು' ಎಂದಳು.

ಸೀತೆಗೆ ಸ್ವಲ್ಪ ಧೈರ್ಯಬಂತು. 'ನಿನ್ನ ಮಾತನ್ನು ಅಲ್ಲಗಳೆಯುವುದಿಲ್ಲ' ಎಂದು ಹೋಗಲು ಅನುವಾದಳು. ಮನಸ್ಸು ಮಾತ್ರ ಹಿಂದೆಳೆಯಿತು.

ಕಣ್ಣುಗಳೆರಡೂ ಅಶ್ರುಪೂರ್ಣವಾದುವು. ಎದೆ 'ಡಬ್ ಡಬ್' ಎಂದು ಹೊಡೆಯುತ್ತಿದ್ದಿತು.

ಹೊಸ ಮನೆಗೆ ಬಂದೊಡನೆ ಶ್ರೀಧರನ ಸೌಂದರ್ಯದ ಭವ್ಯತೆಯು ಬೇರಾಗಿದ್ದಿತು. ಶೃಂಗಾರ ರಾವಣನಂತೆ ವೇಷಧರಿಸಿದ ಶ್ರೀಧರನು ಕುರ್ಚಿಯ ಮೇಲೆ ಕುಳಿತಿದ್ದನು.

ಸಂಧ್ಯಾಕಾಲದ ಛಾಯೆಯಂತೆ ಸೀತಮ್ಮನು ಒಳಗೆ ಪ್ರವೇಶಿಸಿದಳು. ಸಭ್ಯಮೂರ್ತಿಯಾದ ಶ್ರೀಧರನು 'ಕುಳಿತುಕೊಳ್ಳಿ' ಎಂದು ಕುರ್ಚಿಯನ್ನು ತೋರಿಸಿದನು. ಕುರ್ಚಿ ಖಾಲಿಯಾಗಿಯೇ ಇದ್ದಿತು. ಸೀತಮ್ಮನು ನಿಂತುಕೊಂಡೇ ಇದ್ದಳು.

ಶ್ರೀಧರನು ಮೆಲ್ಲನೆ ಎದ್ದು ಕೋಣೆಯ ಅಗುಳಿಯನ್ನು ಬಲಿದನು. 'ಏನಿದು?' ಎಂದು ಸೀತೆ ಕಂಗಾಲಾದಳು.

'ನಮ್ಮ ಡ್ರೈವರ್ ಶೀನಪ್ಪ ಬರುವ ಸಮಯವಾಯಿತು ನಮ್ಮ ಗೃಹಕೃತ್ಯದ ಸುಖದುಃಖ ಸಮಾಚಾರದಲ್ಲಿ ಅವನೇಕೆ ಪಾಲು ಪಡೆಯಬೇಕು?'

ಸೀತೆಯ ಹೃದಯವು ಮೋಟರಿನ ಶಂಖದಂತೆ ಬಲವಾಗಿ ಕೂಗಿತು. ಯಾರ ಕಿವಿಗೂ ಕೇಳದ ಕೂಗದು!

ಶ್ರೀಧರ.– ಮತ್ತೇನೂ ಇಲ್ಲ ಅತ್ತಿಗೆ. ಪಾರ್ವತಿ ಹಟಹಿಡಿದಂತೆ ತೋರುತ್ತದೆ. ಚಂಚಲೆಯು ಆಕೆಯ ಮನಸ್ಸಿನಲ್ಲಿ ಉದ್ವೇಗವನ್ನುಂಟು ಮಾಡಿದ್ದಾಳೆ.

ಸೀತಮ್ಮ:— ಹೂಂ . . .

ಶ್ರೀಧರ:– ಕಷ್ಟಪ್ರಸಂಗ ಬಂದಿದೆ. ಆಕೆಯನ್ನು ಕಳುಹಿಸಬೇಕಂತೆ.

ಸೀತಮ್ಮ:– ಅಕ್ಕನ ಶುಶ್ರೂಷೆಯು ನನಗೆ ಭಾರವಾಗದು.

ಶ್ರೀಧರ:– ಅದು ನನಗೆ ಗೊತ್ತಿದೆ. ಪಾರ್ವತಿಯು, ನಿನ್ನ ಜೀವ ಪ್ರೇಮದ ಬೇಸಿಗೆಯಿಂದ ಸೇರಿಹೋಗಿದೆ. ಆದರೆ ನಾನು ಮಾತ್ರ ಆ ಬಸಿಗೆಯಲ್ಲಿ ಸೇರಿಲ್ಲ.

ಸೀತಮ್ಮ:— ಆಕೆಗೆ ನಿಮ್ಮಲ್ಲಿರುವ ಪ್ರೀತಿ ಅನನ್ಯವಾದುದು.

ಶ್ರೀಧರ — ಆಕೆಯ ಪ್ರೀತಿಗೂ ಅಪ್ರೀತಿಗೂ ಇನ್ನು ಒಂದೇ ಬೆಲೆ.

ಸೀತಮ್ಮ - ಪತಿವ್ರತೆ ಸುಮಂಗಲೆಯಾಗಿಯೇ ಪರಲೋಕದ ದಾರಿಯನ್ನು ಹಿಡಿಯುತ್ತಾಳೆ.

ಶ್ರೀಧರ.- ಅದೆಲ್ಲ ನಿಜವೆ. ಆದರೆ . .

ಸೀತಮ್ಮ — ಅಂತಹ ಹೆಂಗುಸಿನ ಕೈಹಿಡಿಯುವ ಭಾಗ್ಯವು ಸಾಮಾನ್ಯವಾದುದಲ್ಲ.

ಶ್ರೀಧರ – ಹೌದು, ಆ ಭಾಗ್ಯದ ಭಂಡವಳ ಮುಗಿಯಿತು; ಈಗ ಮುಗಿಯದಿದ್ದರೆ ಬೇಗನೆ ಮುಗಿಯುತ್ತದೆ, ಎಂದು ಭಾವಿಸಿಕೊ.

ಸೀತಮ್ಮ – ಅವಳ ಜೀವ ಉಳಿಯುವುದಿದ್ದರೆ ನನ್ನ ಜೀವ ಹೋದರೂ ಚಿಂತೆಯಿಲ್ಲ.

ಶ್ರೀಧರ:- ನನ್ನ ಹೆಂಡತಿಯ ಗುಣ ನನಗೆ ಗೊತ್ತು. ಅವಳ ಹೊಗಳಿಕೆಯನ್ನು ನಿನ್ನ ಬಾಯಿಯಿಂದ ಕೇಳಬೇಕೆಂದು ನಿನ್ನನ್ನು ಬರಿಸಿದುದಿಲ್ಲ. ಚಂಚಲೆಯನ್ನು ಹಿಂದೆ ಕಳುಹಿಸುತ್ತೇನೆ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

ಸೀತಮ್ಮ– ನನಗೇನು ಅಭಿಪ್ರಾಯ?

ಶ್ರೀಧರ – ನೀನು ಅಪವಾದಕ್ಕೆ ಹೆದರಬೇಕಾಗಿಲ್ಲ. ಲೋಕದಲ್ಲಿ ಯಾರೇನಾದರೂ ಹೇಳಿದರ, ಮನಮುದುಡಿಸಿಕೊಂಡಿರುವುದಾದರೆ, ಪ್ರಪಂಚವು ನರಕವಾದೀತು.

ಸೀತಮ್ಮ:– ಸಂದೇಹವೇನು? ನನ್ನ ವ್ರತವು ನಿಶ್ಚಲವಾಗಿರುವಾಗ ಯಾರೇನೆಂದರೆ ನನಗೇನು?

ಶ್ರೀಧರ·– ನಿನಗಾಗಿ ನಾನೆಷ್ಟು ಕಷ್ಟಪಟ್ಟಿದ್ದೇನೆ ಅತ್ತಿಗೆ?

ಸೀತಮ್ಮ:– ಹೌದು; ನಾನೂ ತಾಪತ್ರಯವೂ ಒಟ್ಟೊಟ್ಟಿಗೆ ನಿನ್ನ ಮನೆಯೊಳಗೆ ಕಾಲಿಟ್ಟುದು.

ಶ್ರೀಧರ:– ನಿನ್ನ ಗಂಡನಿಗಾಗಿ ಏನು ಬವಣೆ ಬಂದೆ!

ಸೀತಮ್ಮ:– ಅದೂ ನಿಜ; ಎಣಿಸುವುದಕ್ಕೆ ಈ ಜನ್ಮ ಸಾಲದು.

ಶ್ರೀಧರ:– ನನ್ನ ಮನೆಯಲ್ಲಿ ನಿನಗೇನು ಕಡಿಮೆಯಾಗಿದೆ?

ಸೀತಮ್ಮ:– ಅವರೊಬ್ಬರು ಇರುತ್ತಿದ್ದರೆ ಬೇರೇನೂ ಲೋಪ ಇರುತ್ತಿರಲಿಲ್ಲ.

ಶ್ರೀಧ – ಲೋಪಗೀಪ . . . ಅದನ್ನೆಲ್ಲ ತಂದುಕೊಳ್ಳುವವರು ನಾವೇ!

ಇಷ್ಟು ಹೇಳುತ್ತಾ ಶ್ರೀಧರನು ಸ್ವಲ್ಪ ಮುಂದೆ ಸರಿದನು. ಸೀತಮ್ಮ ಹಿಂದೆ ಸರಿದಳು.

ಶ್ರೀಧರ – ನಿನ್ನ ಎಲ್ಲ ಗುಣವೂ ಚಿನ್ನ ಅತ್ತಿಗೆ! ಆದರೆ ಒಂದು ಮಾತ್ರ . . .

ಸೀತಮ್ಮ – ಅಯ್ಯೋ! ನನಗಂತಹ ಗುಣವೆಲ್ಲಿಂದ?

ಶ್ರೀಧರ:– ನೀನು ನನ್ನನ್ನು ಏನೆಂದು ಭಾವಿಸಿರುವೆ?

ಸೀತಮ್ಮ – ಗಂಡನ ತಮ್ಮ–ನನ್ನ ಅಣ್ಣ–ಎಂದು

ಶ್ರೀಧರ:– ಇಂಥ ಮಾತಿನಲ್ಲಿ ಹುರುಳಿಲ್ಲ ನೀನು ಇತರರೊಡನ ಮಾತಾಡುವಾಗ, ವರ್ತಿಸುವಾಗ ನಿನ್ನ ಹೃದಯಸೌಂದರ್ಯವು ರಸವಾಗಿ ಮಾತಿನಲ್ಲಿ ಚೆಲ್ಲುತ್ತಿದೆ. ನನ್ನಲ್ಲಿ ಮಾತ್ರ ಅಕಾರಣ ಸಂಕೋಚ.

ಸೀತಮ್ಮ – ನಾನು ಹೋಗಲೆ?

ಶ್ರೀಧರ – ನನ್ನ ಮಾತಿಗೆ ಉತ್ತರ ಕೊಡು, ಹೋಗು! ನಿನ್ನ ಮುಖ ಕಂಡೊಡನೆ, ಬೆಂಕಿಯ ಬಳಿಯ ಬೆಣ್ಣೆಮುದ್ದೆಯಂತೆ ಎದೆ ಕರಗುವುದಲ್ಲ! ಸಕಲೇಂದ್ರಿಯಗಳೂ ಎದ್ದುನಿಂತು 'ಇವಳೇ ನಿನ್ನ ಹೆಣ್ಣು' ಎಂದು ಡಂಗುರ ಹೊಡೆಯುವುವಲ್ಲ? ನಿನಗೆ ದೇವರು ಕೊಟ್ಟ ಸೌಂದರ್ಯವಿದೆ, ಮನುಷ್ಯರು ತಿದ್ದಬಹುದಾದ ಬುದ್ಧಿಯಿದೆ, ಯೌವನವಿದೆ, ಪ್ರಪಂಚದ ಸುಖವೇನೆಂದು ಗೊತ್ತಿದೆ, ನಿನ್ನನ್ನೂ ಚಂಚಲೆಯನ್ನೂ ಒಟ್ಟಿಗೆ ಒಂದೇ ಕಡೆಯಲ್ಲಿರಿಸಿದರೆ ನಿನ್ನ ಸೌಂದರ್ಯ ಜಗಜಗಿಸುವ ವಜ್ರ; ಅವಳದು ಕವಡುಮಣಿ.

ವರ್ಷಾಕಾಲದ ಮೋಡದಿಂದ ಹೊಡೆಯುವ ವಿದ್ಯುಲ್ಲತೆಯಂತೆ, ಶ್ರೀಧರನ ಮುಖದಲ್ಲಿ ಕಿಡಿಯುಗುಳುತಿದ್ದ ಕಣ್ಣನ್ನು ನೋಡಿ ಸೀತೆ ಬೆಚ್ಚಿಬಿದ್ದು, ಬಾಗಿಲ ಕಡೆಗೆ ಧಾವಿಸಿದಳು.

'ಅತ್ತಿಗೆ! ಎಲ್ಲಿ ಹೋಗುವೆ?! ಎಂದು ಶ್ರೀಧರನು ಅಡ್ಡಗಟ್ಟಿದನು. ಸೀತೆ ಬಿಕ್ಕಿಬಿಕ್ಕಿ ಅಳಹತ್ತಿದಳು.

ಶ್ರೀಧರ – ಅಳುವುದರಲ್ಲಿ ಅರ್ಥವಿಲ್ಲ. ಪ್ರಪಂಚದ ವಿಸ್ತೃತಕೋಶದಲ್ಲಿ ಅಳುವೂ ಇದೆ; ನಗುವೂ ಇದೆ. ಯಾವುದನ್ನು ಬೇಕಾದರೂ ಆಯ್ದುಕೊಳ್ಳು ವವರು ನಾವೇ, . . ನೀನು ಎಲ್ಲವನ್ನೂ ಸ್ಪಷ್ಟವಾಗಿ ತಿಳಿದಿರಬೇಕು. ನಿನ್ನ ಮದುವೆಯಾದುದೇ ನನ್ನಿಂದಾಗಿ. ಅಂದಿನಿಂದ ಇಂದಿನವರೆಗೆ ನನ್ನ ಉದ್ಯಾನ ದಲ್ಲಿ ವಿಕಸಿತವಾದ ಮಂದಾರಪುಷ್ಪದಂತೆ ಗಮಗಮಿಸುತ್ತಾ ಬಂದಿರುವೆ. ದೇವರು ನಿನಗೆ ಸೌಂದರ್ಯಪ್ರಕೃತಿಯನ್ನು ಕೊಟ್ಟಿರಬಹುದು. ಅದನ್ನು ಕಸಿಮಾಡಿ ದವ ನಾನು. ಅದನ್ನು ನೋಡಿ ಆನಂದಿಸಿದವ ನಾನು. ನಿನ್ನ ದೇಹದಲ್ಲಿ ಸೌಂದರ್ಯಮಯ ಮಾಂಸರಾಶಿಯು ಅಭಿವರ್ಧಿಸಿದ್ದರೆ, ಅದು ನನ್ನ ಉಪ್ಪನ್ನದಿಂದ!

ಸೀತೆ –ಅಯ್ಯೋ! ಕೈಹಿಡಿದ ಪುಣ್ಯಾತ್ಮ! ನೀನೆಲ್ಲಿರುವೆ?

ಶ್ರೀಧರ–ಅವನಿಗೆ ನಿನ್ನ ಗೊಡವೆಯಿಲ್ಲ ಇನ್ನೊಮ್ಮೆ ವಿಚಾರಿಸಿ ನೋಡು. ಲೋಕದಲ್ಲಿ ಮೊದಲೇ ಅಪವಾದವೆದ್ದಿದೆ. ಇನ್ನು ಬೇರೆ ಅಪವಾದ ವೆಂಬಿಲ್ಲ. ಹೀಗಿರುವಾಗ ನಮ್ಮ ಸಂಬಂಧವು ನನ್ನ ಅಪೇಕ್ಷೆಯಂತೆ ಮುಂದೆ ಇದ್ದರೂ, ಕೆಟ್ಟ ಮಾತಿನ ಹೊರೆ ಭಾರವೇರುವುದೆಂದಿಲ್ಲ. ಇದು ಒಂದನೆಯ ವಿಷಯ ನಿನಗೆ ಇತರರಾರೂ ಗತಿಯಿಲ್ಲ. ಗಂಡನ ಅವಸ್ಥೆ ಹಾಗಾಯಿತು. ನಿನ್ನಣ್ಣ ನನ್ನ ಕೂಲಿಯಾಳು. ನೀನು ನನ್ನನ್ನೊದೆದರೆ, ನನ್ನ ಒಂದು ಕಾಲು ನಿನ್ನ ಅಣ್ಣನ ಎದೆಯ ಮೇಲೆ. ಇನ್ನೊಂದು ಗಂಡನ ತಲೆಯ ಮೇಲೆ. ನೀನು ಬಿಕ್ಕೆಬೇಡಬೇಕಾದೀತು. ಈಗ ಇರುವ ಮನೆಯೊಂದು ಇದೆ. ತನ್ನವ ರೆನ್ನುವ ಬಂಧುಗಳಿದ್ದಾರೆ. ಗಂಡನು ಕೈಬಿಟ್ಟರೂ ಕೈಬಿಡದ ಮಂದಿಗಳಿದ್ದಾರೆ. ಇದು ಎರಡನೆಯ ವಿಚಾರ. ನನ್ನ ಅವಕೃಪೆಯ ಪರಿಣಾಮವಾಗಿ, ನೀನು ಅನಾಥೆಯಾಗುವುದೆಂದರೆ ಬೀದಿಯ ಹೆಣ್ಣಾಗುವುದೆಂದರ್ಥ ಉಡುವುದಕ್ಕೆ ಬಟ್ಟೆಯಿಲ್ಲ, ಉಣ್ಣುವುದಕ್ಕೆ ಅನ್ನವಿಲ್ಲ. ಮಾನಮುಚ್ಚುವುದಕ್ಕೆ ಕೈಗಳೆರ ಡನ್ನೂ ಎದೆಯ ಮೇಲಿಟ್ಟುಕೊಂಡು, ಅನಂತವಾದ ಅಶ್ರುಧಾರೆಯನ್ನು ಸುರಿಸಿ ಕೊಂಡು, ವಿಧಿಯನ್ನು ದೂರುತ್ತ, ಬೀದಿಯಲ್ಲಿ ಅಲೆದಾಡುತ್ತ, 'ಇಂದಿನ ರಾತ್ರಿ ಯನ್ನು ಯಾರ ಮನೆಯಲ್ಲಿ ನೂಕಲಿ? ಈ ದಿನದ ತುತ್ತನ್ನು ಯಾರಿಂದ ಪಡೆ ಯಲಿ?' ಎಂದು ಕೂಗುತ್ತ ಹೋಗಬೇಕಾದೀತು, ಬಲ್ಲೆಯಾ? ಇಲ್ಲಿ ಹಾಗಲ್ಲ.

ನನ್ನ ಅಂಕಿತದಲ್ಲಿದ್ದರೆ, ಇದುವರೆಗಿನ ಸೌಭಾಗ್ಯವು ಶಾಶ್ವತವಾಗಿರುವುದು. ಇದು ಮೂರನೆಯ ವಿಚಾರ, ನೀತಿ–ಅನೀತಿಗಳನ್ನು ದೇವರು ಮಾಡಲಿಲ್ಲ. ಮನುಷ್ಯನೇ ಮಾಡಿದುದು. ಮಾನವನ ಕೃತ್ರಿಮಕ್ಕೆ ಹೆದರಿ, ಜೀವನಸವನ್ನು ಕಷ್ಟದ ಕೆಸರುಹೊಂಡಕ್ಕೆ ಇಡುಕುವುದೆಂದರೇನು?

ಶ್ರೀಧರನ ಭಾಷಣವು ಆವೇಶಮಯವಾಗಿ ಗಂಟೆಗೆ ನೂರಾರು ಗಾವುದದ ವೇಗದಲ್ಲಿ ಸಾಗುತ್ತಿದ್ದಿತು ನಿಂತಿದ್ದ ಸೀತೆ ಅಲ್ಲಿಯೆ ಬಿದ್ದು ಧೂಳಿಯಲ್ಲಿ ಹೊರಳಾಡುತ್ತಿದ್ದುದು ಶ್ರೀಧರನಿಗೆ ತಿಳಿದಿರಲಿಲ್ಲ. ಬಿದ್ದವಳನ್ನು ನೋಡಿ, ಮೇಲೆತ್ತುವುದಕ್ಕಾಗಿ ಬಾಗಿದಾಗ, ಸೀತೆ ಘಟಸರ್ಪಿಣಿಯಂತೆ ಬುಸುಗುಟ್ಟಿ, 'ನನ್ನ ಮೈಮುಟ್ಟುವ ಅಧಿಕಾರ ನಿನಗಿಲ್ಲ' ಎಂದು ದರ್ಪದಿಂದ ಆಡಿ ಎದ್ದು ನಿಂತಳು.

ಶ್ರೀಧರ:–ನಿನಗೆ ಅನ್ನಕೊಟ್ಟ ದೇಹದಲ್ಲಿ ಕೊಬ್ಬು ಬೆಳೆಯಿಸುವ ಅಧಿಕಾರ ನನಗಿದೆಯೆ?

ಸೀತೆ:– ನಿನ್ನ ಅನ್ನದ ಋಣವನ್ನು ಮಾನಕಳೆಯದೆ ಹೇಗಾದರೂ ಸಲಿಸುತ್ತೇನೆ.

ಶ್ರೀಧರ:– ಶ್ರೀಧರನ ಮನೆ ಹೊಟೇಲಲ್ಲ, ಕಾರ್ಖಾನೆಯಲ್ಲ, ಕೆಲಸದ ತೊತ್ತುಗಳು ಬೇಕಾಗಿಲ್ಲ.

ಸೀತೆ:–ಹೊಟೇಲಲ್ಲ; ನರಕವೆಂದು ಭಾವಿಸುತ್ತೇನೆ.

ಶ್ರೀಧರ.–ದುಷ್ಟೆ! ಸ್ಪಷ್ಟವಾಗಿ ಹೇಳಿಬಿಡುತ್ತೇನೆ, ನೀನು ನನ್ನ ಗೂಡಿನಲ್ಲಿ ಸಿಕ್ಕಿಬಿದ್ದ ಗಿಳಿ. ನನ್ನನ್ನು ಕೋಪಗೊಳಿಸಿದರೆ, ನಿನ್ನ ಗಂಡನಿಲ್ಲ, ಅಣ್ಣನಿಲ್ಲ; ಮನೆ-ಮಾರಿಲ್ಲ; ಇಹದಲ್ಲಿ ಸ್ಥಿತಿಯಿಲ್ಲ; ಪರದಲ್ಲಿ ಗತಿಯಿಲ್ಲ; ಯಾವುದೂ ಇಲ್ಲ.

ಸೀತೆ:– ಗಂಡನಿರುವಲ್ಲಿಗೆ ನನ್ನನ್ನು ಕಳುಹಿಸಿಕೊಡು.

ಶ್ರೀಧರ:– ನಿನ್ನ ಗಂಡ . . . ಅವನು ಎಲ್ಲಿದ್ದಾನೆ? ಇನ್ನು ಆತನ ಸ್ಥಾನ ಹುಚ್ಚಾಸ್ಪತ್ರೆಯಲ್ಲಿ.

ಸೀತೆ:– ಏನೆಂದೆ?

ಶ್ರೀಧರ.— ಅವನಿಗೆ ಸ್ಥಾನವನ್ನು ಸಿದ್ಧಮಾಡಿಟ್ಟಿದ್ದೇನೆ. ದೂರದ ನಕ್ಷತ್ರಗಳನ್ನು ಕಂಡು ನಗುವ, ಆಕಾಶದೊಡನೆ ಮಾತಾಡುವ, ನೆಲದ ಧೂಳಿಯನ್ನು ನಡುಬೀದಿಯಲ್ಲಿ ತಲೆಗೆರಚಿಕೊಳ್ಳುವ ಜನರಿಗೊಂದು ಮಾವನ ಮನೆ ಇದೆಯಲ್ಲ! ಅದರಲ್ಲಿ ಅವನಿಗೆ ಸ್ಥಾನ.

ಸೀತೆ.—ದುಷ್ಟ! ಏನೆಲ್ಲ ಮಾಡಿದೆ?

ಶ್ರೀಧರ – ಇದುವರೆಗೆ ಏನೂ ಮಾಡಿಲ್ಲ. ನಿನ್ನ ಹಟವನ್ನು ನೀನು ಬಿಡದಿದ್ದರೆ . . .

ಸೀತೆ – ನನ್ನಿಂದ ನಿನಗೆ ಯಾವ ಅನ್ಯಾಯವಾಗಿದೆ?

ಶ್ರೀಧರ - ಮೊನ್ನೆಯ ರಾತ್ರಿ ನನ್ನ ಮನೆಗೆ ಕಳ್ಳರು ನುಗ್ಗಿದರಲ್ಲ!

ಸೀತೆ - ನೀನೆ ಎಂದು ಗೊತ್ತಿದ್ದರೂ ಇದುವರೆಗೆ ಯಾರಲ್ಲಿಯೂ ಹೇಳಿರಲಿಲ್ಲ.

ಶ್ರೀಧರ.- ಮಾನವತಿಯಾದ ಹೆಣ್ಣಾಗಿದ್ದರೆ ನೀನು ಬೀಗಹಾಕದೆ ಮಲಗಿದುದೇಕೆ?

ಸೀತೆ – ದುಷ್ಟ! ಬೀಗವನ್ನಪಹರಿಸಿ ಮಾನಾಪಹರಣ ಮಾಡುವುದಕ್ಕಾಗಿ ನಟ್ಟಿರುಳಲ್ಲಿ ಬಂದೆಯಲ್ಲವೇ?

ಶ್ರೀಧರ.— ಮಾತಿನ ಮೇಲೆ ಅಂಕೆಯಿಡು. ನಾನಿನ್ನೂ ನಿನ್ನ ಮಟ್ಟಿಗೆ ದುಷ್ಟತೆಯನ್ನು ತೋರಿಸಲಿಲ್ಲ. ತೋರಿಸುವ ಕಾಲ ಬರುತ್ತಿದೆಯೆಂದು ಭಾವಿಸುತ್ತೇನೆ. ನಿನ್ನ ಭವಿಷ್ಯ ನನ್ನ ಮುಷ್ಟಿಯೊಳಗಿದೆ. ಎಷ್ಟು ಹಾರುವೆಯೋ ನೋಡುತ್ತೇನೆ.

ಸೀತೆ.- ನನ್ನ ಮಾನ ನನ್ನ ಮುಷ್ಟಿಯೊಳಗಿದೆ ಶ್ರೀಧರಾ! ನಿನ್ನ ದುಷ್ಟತೆಯಿಂದ ಏನಾದೀತು?

ಅಷ್ಟರಲ್ಲಿ ಮನೆಯ ಅಂಗಳದಿಂದ ಮೋಟರಿನ ಶಬ್ದವಾಯಿತು. ಶ್ರೀಧರ 'ಇನ್ನೂ ವಿಚಾರಿಸು. ಹೆಂಗುಸರ ಜನ್ಮಸಿದ್ಧವಾದ ಅವಿವೇಕವನ್ನು ತೊಳೆದು ಬಿಡಲು ಅವಕಾಶ ಕೊಡುತ್ತೇನೆ' ಎಂದುಕೊಂಡು ಶ್ರೀಧರನು ಕೆಳಗಿಳಿದನು.

ಬಿರುಗಾಳಿಯಲ್ಲಿ ತೂರುವ ಗರಿಯಂತೆ, ಆಕೆಯ ದೇಹವು ರೋಷಾ

ವೇಶದಿಂದ ಹಾರುತ್ತಿದ್ದಿತು. 'ಒಮ್ಮೆಗೆ ಬದುಕಿದೆ. ಪರಮಾತ್ಮ! ನೀನೇ ನನ್ನನ್ನು ಅಂಧಕೂಪದಿಂದ ಮೇಲೆತ್ತಿದೆ' ಎಂದು ಕೈಮುಗಿದು ಮಿಂಚಿನಂತೆ ಓಡಿದಳು.

ಅವಳ ಆಗಮನವನ್ನು ನಿರೀಕ್ಷಿಸುತ್ತಿದ್ದ ಪಾರ್ವತಿ 'ಏನಮ್ಮ, ಇಷ್ಟು ಗಲಿಬಿಲಿ?' ಎಂದು ಕೇಳಿದಳು. ಸೀತೆ 'ಮತ್ತೇನಮ್ಮ! ನಾನು ಪ್ರಪಂಚಕ್ಕೆ ಬಂದುದು ದೊಡ್ಡ ತಪ್ಪಾಯಿತು' ಎಂದಳು. 'ಅಯ್ಯೋ ನನ್ನ ಹಣೆಬರಹವೇ!' ಎಂದು ಪಾರ್ವತಿ ಮೇಳಕೂಡಿಸಿದಳು.

ಅಷ್ಟರಲ್ಲಿ ಶ್ರೀಧರನು ಅವರ ಕೋಣೆಯವರೆಗೆ ಹೋಗಿ, ಒಳ ಹೊಗದೆ, ಹೊರಗೇ ನಿಂತು 'ಕೂಡಲೇ ಮಂಗಳೂರಿಗೆ ಹೋಗುತ್ತೇನೆ. ಇಂದೂ ನಾಳೆಯೂ ಬಾರದಿರಲೂ ಸಾಕು' ಎಂದು ಗಂಭೀರವಾಣಿಯಿಂದ ಆಡಿದನು.

ಆ ದಿನ ಇಡೀ ರಾತ್ರಿ, ಆ ಎರಡು ಪರಿಶುದ್ಧಾತ್ಮಗಳು, ಆ ಎರಡು ಜತೆ ಹಕ್ಕಿಗಳು, ಸಮಾನದುಃಖಾನುಭವವೇ ಅದೊಂದು ಸುಖವೆಂದು ನಿರಾತಂಕ ವಾಗಿ ಆಡುತ್ತಿದ್ದುವು.

# ಹದಿನಾರನೆಯ ಪ್ರಕರಣ

ಅದೇ ದಿನ ಮಧ್ಯಾಹ್ನ ರಾಧಮ್ಮನು ಮನೆಯೊಳಗೆ ಕುಳಿತುಕೊಂಡು ಏನೋ ಒಂದು ಹಳೆಯ ಹಾಡನ್ನು ಹೇಳಿ, ಏಕಾಂತವಾಸದ ಬೇಸರವನ್ನು ಓಡಿಸುತ್ತಿದ್ದ ವೇಳೆಯಲ್ಲಿ ಮನೆಯ ಅಂಗಳಕ್ಕೆ ಯಾವುದೋ ಒಂದು ವ್ಯಕ್ತಿ ಬಂದ ಕಾಲಹಜ್ಜೆಯ ಸಪ್ಪುಳವಾಯಿತು

ಹೊರಹೋಗಿ ನೋಡಿದಳು. ಫಕ್ಕನ ಯಾರೆಂದು ತಿಳಿಯಲಿಲ್ಲ. ನೋಡಿದ ಮುಖ, ನೋಡಿದ ನೆನವು. ಎಷ್ಟೆಂದರೂ ಮಾತೃಹೃದಯವಲ್ಲವೇ? 'ಮಗನೇ! ನಿನಗೆ ಈ ಅವಸ್ಥೆಯಾಯಿತೇ'' ಎಂದು ಅಂಗಳಕ್ಕೆ ದಡದಡನೆ ಇಳಿದು, ಮಗನನ್ನು ಈ ಜನ್ಮದಲ್ಲಿ ಬಿಡಲಾರೆನೆನ್ನುವಷ್ಟು ಬಲವಾದ ಆಲಿಂಗನ ದಿಂದ ಬಿಗಿದಳು

ವೆಂಕಟರಾಯನು 'ಹಹ್ಹಹ್ಹಾ! ನಾನೇನು ಹಸುಗೂಸೇ? ಏನಮ್ಮ ಇದು'' ಎಂದು ವಿಕಟವಾಗಿ ನಕ್ಕನು ಆತನ ಕೆನ್ನೆ ಅಡಸಿತ್ತು. ಕಣ್ಣು ಕುಳಿಬಿದ್ದಿತ್ತು. ಕೇಶಜಾಲ ನಾಲ್ಕು ದೆಸೆಗೂ ತೂಗಿ ತೂರಿಹೋಗಿತ್ತು. ಮೊಣಕಾಲವರೆಗೆ ಇಳಿಯದ ಕಸರಾದ ಚಿಂದಿ; ಒಂದು ಹರುಕಂಗಿ. ಅರ್ಧ ಗೇಣುದ್ದದ ಗಡ್ಡ, ದೇಹವು ಒಣಗಿಹೋದುದರಿಂದ, ಒಂದು ಅಸ್ಥಿಪಂಜರಕ್ಕೆ ಚರ್ಮವನ್ನು ಹೊದೆಯಿಸಿದಂತೆ ಕಾಣುತ್ತಿದ್ದಿತಲ್ಲದೆ, ಒಂದು ದಿನ, ಶ್ರೀಧರ ನಂತೆಯೇ ಗುಂಡುಗುಂಡಾಗಿ, ತನ್ನ ಕಣ್ಣಿಗೆ ಮುದ್ದುಮುದ್ದಾಗಿ, ಅದೇ ಬೆಡಗಿನಿಂದ ಒಪ್ಪುತ್ತಿದ್ದ ಆತನ ಅಣ್ಣನ ಆಕಾರವಿದು — ಎಂದು ಊಹಿಸುವುದು ರಾಧಮ್ಮನಿಗೂ ಕಷ್ಟವಾಗಿದ್ದಿತು.

ರಾಧಮ್ಮನಿಗ ಒಂದು ಗಳಿಗೆ ಬಿಕ್ಕಿ ಬಿಕ್ಕಿ ಅಳುವುದೊಂದೇ ಕೆಲಸ. ಮತ್ತ ಚೇತರಿಸಿಕೊಂಡು 'ಮಗೂ! ಒಳಗೆ ಬಾ! ಸ್ವಚ್ಛವಾದ ಬಟ್ಟೆಯ ನ್ನುಡು; ಸ್ನಾನಮಾಡು, ಊಟಮಾಡು, ವಿಶ್ರಾಂತಿ ತೆಗೆದುಕೊ' ಎಂದು ಹತ್ತು ಮಾತುಗಳನ್ನು ಒಂದೇ ಉಸಿರಲ್ಲಿ ಆಡಿದಳು.

**ವೆಂಕಟರಾಯ.**– ಊಟಮಾಡುವುದಕ್ಕೇನೂ . ಅಡ್ಡಿಯಿಲ್ಲ. ಆದರೆ ಇಲ್ಲಿಯೇ ಸಮೀಪದಲ್ಲಿ ಬ್ರಾಹ್ಮಣರ ಮನೆಯಿದೆಯೇ?

ರಾಧಮ್ಮ :– ಹೀಗೇನು ಕೇಳುವೆ ವೆಂಕು? ನಿನ್ನನ್ನು ಹೆತ್ತಾಕೆ ಬ್ರಾಹ್ಮಣ ಸ್ತ್ರೀಯಲ್ಲವೇ?

ವೆಂಕಟರಾಯ – ಹೌದಮ್ಮ ಹೌದು, ಅಲ್ಲವೆಂದರೆ ದೇವರು ಮುನಿದಾರು; ನೀನು ಪರಿಶುದ್ಧ ಬ್ರಾಹ್ಮಣಿ. ಆದರೆ ನಿನ್ನ ಹೊಟ್ಟೆಯಲ್ಲಿ ಹುಟ್ಟಿದಾತನೊಬ್ಬ ನೀಚ ಚಂಡಾಲ!

ರಾಧಮ್ಮ : - ಯಾಕೆ ಮಗು ಹೀಗೆ ಹೇಳುವೆ? ನಿನ್ನನ್ನು ಕಾಣದೆ ವರ್ಷವೆಷ್ಟಾಯಿತು ಮಗು?

ವೆಂಕಟರಾಯ. - ಅದೆಲ್ಲ ನಿಜ. ಆದರೆ ನನ್ನ ತಮ್ಮ ಚಂಡಾಲ ಅವನ ಮನೆಯಲ್ಲಿ ನೀರು ಮುಟ್ಟುವುದಕ್ಕೂ ಸಾಧ್ಯವಿಲ್ಲ.

ರಾಧಮ್ಮನ ಕರುಳೇ ಬೆಂದಿತು ಅವನ ವೇಷಭಾಷೆಗಳಂತೂ ಹುಚ್ಚುತನವನ್ನೆ ಸ್ಫುಟವಾಗಿ ಕಾಣಿಸುತ್ತಿದ್ದುವು

ರಾಧಮ್ಮ – ನಿನ್ನ ತಾಯಿ ನಾನು ಸ್ವತಃ ಅಡಿಗೆಮಾಡಿ ಬಡಿಸುತ್ತೇನೆ.

ವೆಂಕಟರಾಯ. - ನೀನೂ ಚಂಡಾಲಸಂಸರ್ಗದಿಂದ ಕೆಟ್ಟುಹೋಗಿರುವೆಯಮ್ಮ! ಅವನ ಮನೆಯಿಂದ ಹೊರಟ ಮೇಲೆ ನೀನು ನನ್ನಮ್ಮನಾಗುವೆ.

ರಾಧಮ್ಮ :– ನಿನಗೆ ಅವನಲ್ಲಿ ಸಿಟ್ಟೇಕೆ?

ಈ ಮಾತು ಕಿವಿಗೆ ಬಿದ್ದುದೇ ತಡ. ವೆಂಕಟರಾಯನು ಕೋಪ ಭೀಕರನಾಗಿ ಕಣ್ಣು ಕೆರಳಿಸಿ 'ಯಾಕೆ? ಎಂದು ಕೇಳುವೆಯಾ ಅಮ್ಮ! ನನ್ನ ಹೆಂಡತಿಯನ್ನು ಕೆಡಿಸಲಿಲ್ಲವೆ? ನನ್ನಿಂದ ಬಿಕ್ಕೆ ಬೇಡಿಸಿ ಆಕೆಯನ್ನು ಹಾರಿಸಿಕೊಂಡು ಹೋಗಲಿಲ್ಲವೆ? ಇಗೋ ಅವನೆದೆಗೆ ಚೂರಿಯಿದೆ. ಆತನ ಹೊಗೆಯನ್ನು ಕಂಡ ಮೇಲೆ, ನೀನು ಹೇಳಿದಂತೆಯೇ ಇದೇ ಮನೆಯನ್ನು ಹೊಕ್ಕು, ನಿನ್ನ ಅಡಿಗೆಯನ್ನುಂಡು, ಢರ್ರೆಂದು ತೇಗುತ್ತೇನೆ. ಅವನೆಲ್ಲಿ? ಸೀತೆಯೆಲ್ಲಿ? ಎಂದು ಚೂರಿ ಹಿಡಿದು ಸುತ್ತಲೂ ತಿರುಗಾಡಲಾರಂಭಿಸಿದನು.

ರಾಧಮ್ಮ ದಿಗಿಲಾದಳು.

'ಅವನನ್ನು ಮುಗಿಸಿಯೇ ಎಲ್ಲ ಕೆಲಸಗಳು!' ಎಂದವನು ಮನೆಯ ಸುತ್ತುಮುತ್ತಲೂ ತಿರುಗಿ ಗರ್ಜಿಸಲಾರಂಭಿಸಿದನು.

ಏನು ಮಾಡಬೇಕೆಂದು ರಾಧಮ್ಮನಿಗೆ ತಿಳಿಯಲಿಲ್ಲ. ಆಗ ತಾನೇ ಎಲ್ಲಿಗೋ ಹೋಗುತ್ತಿದ್ದ ಡಾ ವೆಂಕೋಬರಾಯರು, ಮನೆಯ ಇದಿರಲ್ಲಿಯೇ ಸಾಗುತ್ತಿದ್ದುದನ್ನು ಕಂಡು, ರಾಧಮ್ಮ ಕರೆದಳು

ಡಾ. ವೆಂಕೋಬರಾಯರು ಬಂದು ವಂಕಟರಾಯನನ್ನು ಕಂಡು, 'ಹಾ! ಎಂಥ ಮನುಷ್ಯ! ಹೇಗಿದ್ದ? ಈಗ ಹೇಗಾಗಿ ಬಿಟ್ಟ?' ಎಂದು ವ್ಯಸನಪಟ್ಟು, ರಾಧಮ್ಮನ ಅಶ್ರುಪ್ರವಾಹವು ಪ್ರಬಲವೇಗದಿಂದ ಹರಿಯುವುದಕ್ಕೆ ಕಾರಣ ವಾದರು

ವೆಂಕೋಬರಾಯರು - ಮಾಡುವುದೇನಮ್ಮ? ಆದುದು ಆಗಿ ಹೋಯಿತು ಬುದ್ಧಿ ಹಾಳಾಗಿದೆ ಇವನಿಗೆ. ಬುದ್ಧಿ ಹಾಳಾದ ಮೇಲೆ ಮನುಷ್ಯನೆಂದರೆ ಏನು? ಗಾಬರಿ ಹೊಂದಬೇಡಿ. ಈತನನ್ನು ಮನೆಗೆ ಕರೆದು ಕೊಂಡು ಹೋಗಿ ಇರಿಸುತ್ತೇನೆ ಇವನನ್ನು ಹೀಗೆಯೇ ಬಿಟ್ಟರೆ, ಈತನ ಸಮಾಚಾರವು ಶ್ರೀಧರನಿಗೆ ಗೊತ್ತಾಗದಿದ್ದರೆ ಏನು ಸಂಭವಿಸೀತೋ ಕಾಣೆ. ನಿನ್ನ ಸಂಸಾರ, ನನ್ನ ಸಂಸಾರ ಎಂದು ಭೇದವಿಡದೆ, ಇಬ್ಬರನ್ನೂ ದಾರಿಗೆ ತರಲು ಯತ್ನಿಸುತ್ತೇನೆ.

ಹೀಗೆ ಹೇಳಿ ವೆಂಕಟರಾಯನನ್ನು ಮಾತಾಡಿಸಿದರು. ಡಾ. ವೆಂಕೋಬ ರಾಯರಲ್ಲಿ ಮಾತಾಡುವಾಗ ಅವನ ಭಾಷಣದಲ್ಲಿ ವಿಶೇಷತೆಯೇನೂ ಇರಲಿಲ್ಲ. ರಸಿಕತೆ ಎಂಬ ಅಭಿಪ್ರಾಯದಿಂದ ಏನಾದರೂ ಅತಿರೇಕವಾಗಿ ಆಡುವುದು; ನಗುವುದು; ಅಭಿನಯ ಮಾಡುವುದು; ಹೇಳಿದುದನ್ನೆ ಹೇಳುವುದು; ಅಷ್ಟೆ! ಶ್ರೀಧರನ ಹೆಸರನ್ನೆತ್ತಿದೊಡನೆ ಅವನದು ಭಯಂಕರ ಮೂರ್ತಿ! ವೆಂಕೋಬ ರಾಯರು, ಉಪಾಯದಿಂದ, ಮೃದುವಾಕ್ಯಗಳನ್ನಾಡಿ, ತಮ್ಮ ಪೂರ್ಣ ಪರಿ ಚಯವನ್ನು ಹೇಳಿ, ತಾವು ಬ್ರಾಹ್ಮಣರೆಂಬುದನ್ನು ರುಜುಪಡಿಸಿ, ಮನೆಗೆ ಕರೆದುಕೊಂಡು ಹೋಗಿ ಬೇಕಾದ ಆತಿಥ್ಯವನ್ನು ಮಾಡಿದರು. ಹೊಸಬಟ್ಟೆ ಬರೆಗಳನ್ನಿತ್ತರು; ಶ್ರೀಧರನಿಗೆ ಈ ಸಂಗತಿಯನ್ನು ತಿಳಿಸಿದರು.

# ಹದಿನೇಳನೆಯ ಪ್ರಕರಣ

ಹೃದಯಸಮೀಪವರ್ತಿನಿಯೆಂದು ತಾನು ಭಾವಿಸಿದ್ದ ಚಂಚಲೆ, ತನ್ನನ್ನು ಕಡೆಗಣಿಸಿ ಶ್ರೀಧರನ ವಶಾನುವರ್ತಿನಿಯಾದುದು, ಚಂಚಲೆ ಎಷ್ಟಾದರೂ ಹುಡುಗಿ, ಇನ್ನೂ ಬುದ್ಧಿ ಮಾಗುವ ಪ್ರಾಯ ಬಂದಿಲ್ಲ, ಅಂತಹ ಮುಗುಮೆಯ ಮುಖಕ್ಕೆ ಮಸಿ ಬಳಿದ ಶ್ರೀಧರನಿಗೆ ವಿವೇಕೋದಯವಾಗುವಂತ. ಸಣ್ಣ ದೊಂದು ಸಾಹಸಕಾರ್ಯವನ್ನೆಸಗಿ ಮೈಯನ್ನು ಜಜ್ಜಿಸಿಕೊಂಡುದು, ಶ್ರೀಧರನ ಶ್ರೀಮದ್ಗಾಂಭೀರ್ಯವು ತನ್ನ ಪ್ರತೀಕಾರಕ್ಕೆ ಹೊರಗಾಗಿದ್ದು, ತಾನು ಅಕೃತಾರ್ಥರೋಷನಾಗುವ ಸಂಭವವೇ ಹೆಚ್ಚಾಗಿರುವುದು, ಇವೆಲ್ಲ ಮೋಹ ನನ ಮನಸ್ಸಿಗೆ, ಬೆಂಕಿಕೊಳ್ಳಿಯಿಂದ ಸುಟ್ಟಿಟ್ಟಂತೆ ವೇದನೆಯನ್ನುಂಟು ಮಾಡಿದುವು. ಆದರೆ ಮಾಡುವುದೇನು? ಶ್ರೀಧರನ ಛಲಬಲಸಾಮರ್ಥ್ಯಗಳು ದಿಗಂತವ್ಯಾಪಿಗಳಾದುವು. ಮೋಹನನು ಮಾತ್ರ ಕಿರಿಯ ಗೂಗೆಯಂತೆ, ಕೋಣೆಯ ಕತ್ತಲೆಯೊಳಗೆ ಸಿಟ್ಟಿನಿಂದ ಕುದಿಯುತ್ತಿದ್ದನು ಈ ಸಿಟ್ಟಿಗೆ ಕೋಣೆಯ ಹೊರಗೆ ಸ್ಥಳವೆ ಇರಲಿಲ್ಲ.

ಮೋಹನನು ಎಲ್ಲ ಡ್ರೈವರರ ಅಂತಸ್ತಿನಲ್ಲಿರುವ ಸಾಮಾನ್ಯ ವ್ಯಕ್ತಿ ಯಾಗಿರಲಿಲ್ಲ. ಮೋಟರ್ ಓಡಿಸುವುದು ತನ್ನಂತಹ ವೇದಾಂತಪರರಿಗೆ ಉಚಿತವಾದ ವಿದ್ಯೆಯಲ್ಲವೆಂಬುದು ಅವನಿಗೂ ಗೊತ್ತು. ಹೊಟ್ಟೆ ಗೇಣುದ್ದ ವಾದರೂ ಚತುರ್ದಿಕ್ಕುಗಳ ಮೂಲೆಮೂಲೆಗೆ ಧಾವಿಸಿದರೂ ಅದು ತುಂಬುವುದಿಲ್ಲ, ಮಾಡುವುದೇನು? ಇದಾದರೂ ಒಂದು ಕಾಯಕವಿರಲಿ, ಎಂದು ತನ್ನ ವೃತ್ತಿಯನ್ನು ನಿರತಿಶಯ ಭಕ್ತಿಯಿಂದ ಸಾಗಿಸುತ್ತಿದ್ದನು. ಮೋಟರಿನ ಚಕ್ರ ತಿರುಗಿಸಿಕೊಂಡು ಬೀದಿ ಬೀದಿಗಳಲ್ಲಿ ಸಂಚರಿಸುವಾಗಲೂ ಅವನಿಗೆ 'ಹಾ ಪ್ರಪಂಚವೇ? ಎಂಥ ಮೂಢತ್ವವಿದು! ದೇವರು ಕೊಟ್ಟ ಆಯುಸ್ಸನ್ನು ಇಹಕ್ಕೂ ಬಾರದ ಪರಕ್ಕೂ ಸಲ್ಲದ ದುಷ್ಕೃತ್ಯಗಳಲ್ಲಿ ಸವೆಯಿಸುತ್ತಾರಲ್ಲವೆ ಮನುಷ್ಯರು?' ಎಂಬ ಎಣಿಕೆ. ಕೈ ಚಕ್ರ ತಿರುಗಿಸಿ ದರೂ ಮನಸ್ಸು ಮಾತ್ರ ವೇದಾಂತಚಕ್ರದ ಸಂಚಾಲನದಲ್ಲಿ ಮಗ್ನ

ವಾಗಿದ್ದಿತು ಮೋಟರಿನಿಂದ ಕೆಳಗಿಳಿದು, ಅದೇ ಮೂಢ ಪ್ರಪಂಚದ, ಅದೇ ಮೂಢ ಜನರ ಸಮಾಜದಲ್ಲಿ ಕಾಲಿಡುವಾಗ, ಅವನ ಮನಸ್ಸಿಗೂ ಕೆಲವು— ಇತರರಿಗೆ ವಿಶೇಷ ಹಾಸಿಕರವಲ್ಲದ ಸಣ್ಣಪುಟ್ಟ ದುರ್ಗುಣಗಳು ಅಂಟಿಕೊಳ್ಳುತ್ತಿದ್ದುವು ಮೋಹನನೆಂದರೆ ಉಬ್ಬಾಳು ತರುಣಿಯರಂತೂ ಸ್ವಲ್ಪ ಮೆದುಮಾತಿನಿಂದ ಸಂಬೋಧಿಸಿದರೆ, ಚೆಂಡಿನಂತೆ ಉಬ್ಬಿ ಆಕಾಶದ ವರೆಗೂ ಹಾರುವ ಸ್ವಭಾವ, ಎಂದರೆ ದುರ್ವ್ಯಸನಿ ಎಂಬ ಅಭಿಪ್ರಾಯವಲ್ಲ. ತರುಣಿಯರೆಂದರೆ ಪ್ರಪಂಚದ ಸುಂದರ ವಸ್ತುಗಳು; ಅವರ ಅನುಗ್ರಹ ಸಂಪಾದನಶಕ್ತಿಯಿರಬೇಕಾದರೆ, ಪೂರ್ವಸಂಚಿತ ಪುಣ್ಯದ ಭಂಡವಳವು ಅಪರಿಮಿತವಾಗಿರಬೇಕು, ಎಂದು ಮೊದಲಾದ ಭಾವನೆ ಅವನದು. ವಿಲಾಸಿನಿಯರಿಂದ ಹೆಚ್ಚಿನ ಸ್ವಾರ್ಥವನ್ನಪೇಕ್ಷಿಸುವಾತನಲ್ಲ ಅವರು ಹತ್ತು ಬಾರಿ ನಕ್ಕು, ಮೆದುಮಾತಿನಲ್ಲಿ ಕರೆದು, ತಮ್ಮ ಸಮೀಪದಲ್ಲಿ ಕುಳ್ಳಿರಿಸುವ ಅನುಗ್ರಹ ಮಾಡಿದರೆ ಸಾಕು, ತಾನು ಧನ್ಯನಾದೆನೆಂಬ ಎಣಿಕೆ ಅಂತಹ ಕೃಪೆಯುಳ್ಳವರ ಸೇವೆಗಾಗಿ ದೇಹದ ಕೆನ್ನೆತ್ತರನ್ನು ಬಸಿಯುವುದಕ್ಕೂ, ಎಲುಬುಗಳನ್ನೆ ಕಿತ್ತು ತೆಗೆದು ಬೀಸುವುದಕ್ಕೂ ಹಿಂಜರಿಯದ ಮನುಷ್ಯನವನು.

ಚಂಚಲೆಗೂ ಅವನಿಗೂ ಇದುವರೆಗೆ ಇದ್ದ ಸಂಬಂಧವಿಷ್ಟೆ:- ಆಕೆ, ವಾಡಿಯ ಪ್ರಕಾರ ತನ್ನ ಅರ್ಧಾಂಗಿಯಾಗತಕ್ಕವಳು, ಇದು ಕಾಶಿ ಅಮ್ಮನಿಗೂ ಗೊತ್ತು, ಆಕೆಗೂ ಗೊತ್ತು ಇಂತಹ ಸಂಬಂಧವಿರುವಾಗ, ಆಕೆಯ ಪಾಣಿಗ್ರಹಣದ ಪ್ರಥಮಾಧಿಕಾರ ತನಗೆ; ಹೆಚ್ಚು ಮಾತೇಕೆ? ಎಂದವನು ಅಧಿಕಪ್ರಸಂಗಕ್ಕೆ ಹೋಗಿರಲಿಲ್ಲ. ಕೈ ಮೋಟರಿನ ಯಂತ್ರಕ್ಕೆ ಮೀಸಲಾಗಿದ್ದರೂ, ಊರೂರು ಸುತ್ತಾಡಿ ದೇಹವು ಕ್ಷೀಣಿಸುತ್ತಿದ್ದರೂ ಮನಸ್ಸು ಮಾತ್ರ ಚಂಚಲೆಯ ಸುತ್ತುಮುತ್ತಲೂ ತಿರುಗಾಡುತ್ತಿದ್ದಿತು. ‘ನನ್ನನ್ನು ಮದುವೆಯಾಗುವೆಯೋ’’ ಎಂದು ಕೇಳುವುದೇನು? ತನ್ನ ಚಪ್ಪರದಲ್ಲಿ ಬೆಳೆದ ಮುಳ್ಳುಸೌತೆಯನ್ನು ಬೇಕಾದಾಗ ಕೊಯಿದುಬಿಡಬಹುದು ಎಂಬ ಆತನ ಧೈರ್ಯವು ಬಹುಕಾಲ ಬಾಳಿತು. ಈ ಮಧ್ಯೆ ವರ್ಷಕ್ಕೆ ಹತ್ತೆಂಟು ಸೀರೆಗಳ, ಕುಪ್ಪಸಗಳ, ಚಳಿ ಸಮಯದಲ್ಲಿ ಮಡಿಕೇರಿಯ ಕಿತ್ತಳೆಗಳ, ಮಳೆಗಾಲದಲ್ಲಿ ಬಂಗಳೂರ ಮಾವಿನಹಣ್ಣುಗಳ, ಇತರ ದಿವಸಗಳಲ್ಲಿ ಹೊರೆ ಹೊರೆ ತರಕಾರಿಗಳ ಮೂಲಕ, ಅವನ ಹೃದಯದಲ್ಲಿ ಅಡಗಿದ್ದ ಪ್ರೇಮವು ಪ್ರಕಟರೂಪವನ್ನು

ಹೊಂದುತ್ತಿದ್ದಿತಷ್ಟೆ. ಇವುಗಳನ್ನು ಅಕ್ಕರೆಯಿಂದ ಸ್ವೀಕರಿಸುತ್ತಿದ್ದವಳು, ಇವುಗಳ ಹಿಂದೆ ಇದ್ದ ಪ್ರೇಮವನ್ನು ತಿರಸ್ಕರಿಸುವಳೇ?

ಶ್ರೀಧರ – ಚಂಚಲಾ ಪ್ರಕರಣವು ಆತನನ್ನು ನಿರಾಶೆಗೆ ದೂಡಿತು. ಚಂಚಲೆ ಇಂತಹ ಪಾಷಾಣಹೃದಯೆಯೆಂದು ಅವನೆಂದೂ ಭಾವಿಸಿರಲಿಲ್ಲ ದೇಹಕ್ಕೆ ಒದಗಿದ ಮರ್ದನವಂತೂ ಕಣ್ಣಿಗೆ ಜ್ಞಾನಾಂಜನವನ್ನಿಕ್ಕಿತು. ಇದಕ್ಕೆ ಯಾರು ಕಾರಣ? ಶ್ರೀಧರನಲ್ಲವೆ? ತನ್ನ ವಸ್ತುವನ್ನು ಅನ್ಯರು ಬಲಾತ್ಕಾರ ದಿಂದ ಸೆಳೆದೊಯ್ಯುವಾಗ ಭಯೋತ್ಪಾದಕ ಪತ್ರವೊಂದನ್ನು ಬರೆದುದು ತಪ್ಪೆಂದು ಯಾವ ರಾಜ್ಯದ ಶಾಸನವೂ ಹೇಳಲಾರದೆಂಬುದರಲ್ಲಿ ಅವನಿಗ ಸಂದೇಹವೇ ಇರಲಿಲ್ಲ.

ಮೋಹನನು ಆಲೋಚನಾಮಗ್ನನಾಗಿದ್ದ ಸಮಯದಲ್ಲಿಯೇ ಆತನ ಕೋಣೆಯ ಬಾಗಿಲು ತೆರೆಯಿತು. ಒಳಗೆ ಅವಸರದಿಂದ ಹೊಕ್ಕುಬಂದವಳು ಚಂಚಲೆ . . . ಒಂದು ಕಾಲದಲ್ಲಿ ತನ್ನ ಹೃದಯಪೀಠದಲ್ಲಿ ಅಧಿಷ್ಠಿತೆಯಾಗಿದ್ದ ದೇವಿ!

ಮೋಹನನು ಪಕ್ಕನೆ ಎದ್ದುನಿಂತು 'ಕುಳಿತುಕೊಳ್ಳಿರಮ್ಮಾ!' ಎಂದನು. 'ಚಂಚಲೆ! ಕುಳಿತುಕೊ' ಎಂದಿರಬೇಕಾಗಿದ್ದ ಮಾತು 'ಕುಳಿತುಕೊಳ್ಳಿರಮ್ಮಾ!' ಎಂದು ವ್ಯತ್ಯಾಸ ಹೊಂದಿದುದಕ್ಕಾಗಿ ಆಕೆಗೆ ವ್ಯಸನವಾಯಿತೋ ಏನೋ! ಗಂಟಲು ಕೆರಸಿ 'ಹುಂ . . . ಹುಂ . . .' ಎಂದು ಕುಳಿತುಕೊಂಡಳು. ಮುಖ ಮಾತ್ರ ಒಣಗಿದ ಬಾಳೆಮೋತೆಯಂತೆ ಜೋತು ಹೋಗಿದ್ದಿತು.

ಚಂಚಲೆ:– ಎಲ್ಲವನ್ನೂ ಕೇಳಿದೆ, ಮೋಹನ! ವ್ಯಸನವಾಯಿತು; ನೀನು ಹೇಗಿರುವೆಯೆಂದು ವಿಚಾರಿಸುವುದಕ್ಕಾಗಿ ಬಂದೆ.

ಮೋಹನ:– ಮಾಡಿದ ಅಧಿಕಪ್ರಸಂಗಕ್ಕೆ ತಕ್ಕ ಪ್ರಾಯಶ್ಚಿತ್ತವಾಯಿ ತಮ್ಮ! ಪರಸ್ತ್ರೀ ಏನಾಗಿದ್ದರೂ ನಾನು ಉದ್ವೇಗ ಹೊಂದಬೇಕಾಗಿರಲಿಲ್ಲ.

ಚಂಚಲೆ:– ಬೇರೆ ಏನು ಬೇಕಾದರೂ ಹೇಳು; ಪರಸ್ತ್ರೀ ಎನ್ನಬೇಡ ಮೋಹನ! ನಮ್ಮ ರಕ್ತಸಂಬಂಧವು ಅಳಿದು ಹೋಗುವುದುಂಟೇ?

ಮೋಹನ:– ಹೃದಯಸಂಬಂಧವಿಲ್ಲದ ರಕ್ತಸಂಬಂಧ ಏಕಮ್ಮ?

ಚಂಚಲೆ: ತನ್ನ ಬಾಂಧವ್ಯವುಳ್ಳ ಹುಡುಗಿ ಇನ್ನೊಬ್ಬನ ಕೈ ಹಿಡಿದರೆ,

ತನಗೂ ಅವಳಿಗೂ ಇರತಕ್ಕ ಸಾಂಸಾರಿಕ ಬಂಧವು ಕಡಿದು ಹೋಯಿತೆಂದು ಯಾರಾದರೂ ಭಾವಿಸುವರೇ?

ಮೋಹನ - ನಮ್ಮ ಸಂಬಂಧವು ಬಾಹ್ಯದಲ್ಲಿ ಮಾತ್ರವಲ್ಲ; ಏನೋ ಒಂದು ಅಂತರಂಗ ಸಂಬಂಧದಿಂದ ಕೂಡಿ ಒಂದಾಗಿದ್ದೆ ತೆಂದು ನಾನು ಎಣಿಸಿದ್ದೆ. ಅದು ತಪ್ಪಾಯಿತು. ಆ ಮಾತು ಹಾಗಿರಲಿ. ನೀನು ಅವನ ಕೈ ಹಿಡಿದು ಗೃಹಿಣಿಯೆನಿಸಿದೆಯೊ? ಹಾಗಿದ್ದರೆ, ಇಗೋ, ಈ ಹಣೆ ನಿನ್ನ ಪಾದದಲ್ಲಿ! ನನ್ನ ಸರ್ವಾಪರಾಧಗಳನ್ನು ಕ್ಷಮಿಸಬೇಕೆಂದು ಬೇಡುತ್ತೇನೆ. ನೀನು ಪೂಜ ನೀಯ ಸ್ತ್ರೀಯೆಂಬುದನ್ನು ಒಪ್ಪಿಕೊಳ್ಳುತ್ತೇನೆ. ಹಿಂದಿನದನ್ನು ಮರೆಯು ತ್ತೇನೆ. ಹೆಚ್ಚೇನು? ಶ್ರೀಧರನ ಪಾದಕ್ಕೆ ದಂಡಪ್ರಣಾಮ ಮಾಡಿ 'ಕ್ಷಮಿಸಿರಿ, ಅಪರಾಧವಾಯಿತು!' ಎಂದಾತನ ಕಾಲಬೆರಳುಗಳನ್ನು ನಕ್ಕುತ್ತೇನೆ.

ಚಂಚಲೆ – ಈ ಮೊದಲೆ ಆಗದಿದ್ದರೆ ಇನ್ನು ಹಾಗಾಗುತ್ತೇನೆಂದು ಭಾವಿಸು.

ಮೋಹನ ಇದುವರೆಗೆ ಆಗಲಿಲ್ಲ! ಇನ್ನು ಆಗುವೆ! ಜಾತಿನೀತಿಯನ್ನು ನೋಡುವುದಿಲ್ಲ; ಕುಲಗೋತ್ರವನ್ನು ನೋಡುವುದಿಲ್ಲ, ನಿನ್ನ ಕೈ ಹಿಡಿಯು ತ್ತೇನೆ ಎಂದಾತ ಭರವಸೆ ಕೊಟ್ಟಿದ್ದಾನೆ. ನೀನದನ್ನು ನಂಬಿರುವೆ. ಎಂದಿಷ್ಟ ಲ್ಲವೆ ಇದರರ್ಥ?

ಚಂಚಲೆ·– ಹೌದು, ಸತ್ಯವೂ ಹಾಗೆಯೆ.

ಮೋಹನ:– ಹುಚ್ಚು ಹುಡುಗಿ! ಮೋಸಹೋದೆ ನೀನು! ಶ್ರೀಧರನ ಹೃದಯಾಂತರಾಳದ ಗುಹೆಯನ್ನಿನ್ನೂ ನೀನು ಪ್ರವೇಶಿಸಲಿಲ್ಲ.

ಚಂಚಲೆ.– ಇದು ಆಗದೆಂದು ನೀನೇಕೆ ಹೇಳುವೆ?

ಮೋಹನ: ಆತನ ಕಪಟ ಸ್ವಭಾವವನ್ನು ಅರಿತಿರುವುದರಿಂದ! ಸೂರ್ಯಚಂದ್ರರು ಇದೇ ಸ್ಥಿತಿಯಲ್ಲಿರುವಷ್ಟು ಕಾಲ ನಿನ್ನ ನಿರೀಕ್ಷಣೆಗಳೂ. ಆತನ ಭರವಸೆಗಳೂ ಸುಳ್ಳು! ಈ ದೇಹವನ್ನು ಹೊಣೆಮಾಡಿ ಹೇಳುವ ಮಾತಿದು.

ಚಂಚಲೆ: - ನಿನ್ನ ಮಾತಿಗೆ ನನಗೇನೂ ಅರ್ಥವಾಗುವುದಿಲ್ಲ.

ಮೋಹನ:– ಅರ್ಥವಾಗುವಂತೆ ಸುಲಭ ಭಾಷೆಯಲ್ಲಿ ಹೇಳುತ್ತೇನೆ

ಕೇಳು, ಕೇಳುವ ಅವಕಾಶನಾದರೂ ಇದೆಯೇ? ಹಿಂದಿನಂತೆ 'ನಿನ್ನ ನೀತಿ ಬೋಧನೆ ಬೇಡ'ವೆಂದು ನನ್ನ ಬಾಯಿಯನ್ನು ಮುಚ್ಚಿಸುವೆಯೊ? . . . ಇಗೋ . . . ಇದು ನಿನಗೆ ಕೊಟ್ಟ ನೀತಿಬೋಧೆಯ ಫಲ! ಎಂದು ಮೋಹ ನನು ತನ್ನ ಬೆನ್ನಿನಲ್ಲಿದ್ದ ಗಾಯುಗಳನ್ನು ತೋರಿಸಿದನು.

ಚಂಚಲೆಯ ಮನಸ್ಸು ಚಂಚಲವಾಯಿತು ದೊಡ್ಡ ಮೀನು ಬಾಲ ದಿಂದ ಹೊಡೆದುಬಿಟ್ಟರೆ, ಪ್ರಶಾಂತ ಕಾಸಾರವು ಪ್ರಕ್ಷುಬ್ಧವಾಗಿ ತೆರೆಗಳೇಳು ವಂತೆ, ಆಕೆಯ ಮನಸ್ಸಿನಲ್ಲಿ ವೈಕ್ಲವ್ಯವುಂಟಾಯಿತು

ಮೋಹನ: ಶ್ರೀಧರನು ಈ ಮೊದಲೆ ಹತ್ತೆಂಟು ಸಲ ಮದುವೆಯಾ ಗಿದ್ದರೂ ಅವನಿಗೆ ಹೆಂಡತಿಯೊಬ್ಬಳೇ, ಇದು ನಿನಗೆ ಗೊತ್ತಿದೆಯೆ?

ಚಂಚಲೆ:– ಆತನ ಹತ್ತು ಮದುವೆಯ ಸಮಾಚಾರ ನನಗೇನು ಗೊತ್ತು!

ಮೋಹನ:– ಒಂದಿಷ್ಟು ಮಾನಮರ್ಯಾದೆಯಿರುವ ಹುಡುಗಿಯರನ್ನು ವಂಚಿಸುವುದಕ್ಕಾಗಿ 'ನಾನು ಸುಧಾರಕ, ಅಂತರ್ಜಾತೀಯ ವಿವಾಹಕ್ಕೂ ಸಿದ್ಧನಾಗಿದ್ದೇನೆ' ಎಂಬ ಮಾತು ನಾಲಗೆಯ ಮೇಲೆ ನಲಿಯಬೇಕು; ಅದರಿಂದ ಸುಲಭವಾಗಿ ಇಷ್ಟಾಪೂರ್ತಿಯಾಗುವುದು ಚಂಚಲೇ!

ಚಂಚಲೆ:– ಇರಬಹುದು.

ಮೋಹನ.– ಶ್ರೀಧರನಂಥವರಿಗೆ ಮದುವೆಯೇಕೆ? ಅವರಿಗೆ ಬೇಕಾ ದುದು ಸುಖ, ಅದರಲ್ಲಿಯ ವೈವಿಧ್ಯ. ಅದರ ಪ್ರಾಪ್ತಿಯ ಹೆದ್ದಾರಿ ಇದೇ ನೋಡು.

ಚಂಚಲೆ.- ಹೇಳುವುದನ್ನೆಲ್ಲ ಹೇಳಿಬಿಡು.

ಮೋಹನ.– ಮದುವೆಯೆಂದರೆ ಆಮರಣವಾದೊಂದು ಬಂಧನ. ಹಾರ್ದಿಕ ಬಂಧನ . . .

ಚಂಚಲೆ:– ಹುಂ . . .

ಮೋಹನ:– ಹೆಣ್ಣೂ ಗಂಡೂ ಸೇರಿ 'ನಿನ್ನೆದೆ'ಯಲ್ಲಿ ನಾನು ಸೆರ ಯಾಳು; ನನ್ನ ಹೃದಯದಲ್ಲಿ ನೀನು ಬಂದಿ' ಎಂದು ಮಾಡಿಕೊಳ್ಳುವ ಒಪ್ಪಂದ ಅದು.

ಚಂಚಲೆ:– ಅದೂ ನಿಜ.

ಮೋಹನ:– ವಿವಾಹವಾದ ಮೇಲೆ ಇಬ್ಬರಿಗೂ ಪರಸ್ಪರ ತುಷ್ಟಿ ಸಮಾಧಾನಗಳು ಇರಬೇಕಲ್ಲವೆ? ಇಲ್ಲದಿದ್ದರೆ ಅವುಗಳನ್ನು ಕಲಿಯಬೇಕಲ್ಲವೇ?

ಚಂಚಲೆ:– ಸಂದೇಹವೇನು?

ಮೋಹನ – ಶ್ರೀಧರನ ಹೆಂಡತಿ ಪಾರ್ವತಿ, ಸೌಂದರ್ಯದಲ್ಲೇನೂ ಕಡಿಮೆಯಿಲ್ಲ ಗುಣದಲ್ಲಿ ಸಕಲ ಸ್ತ್ರೀಶಿರೋಮಣಿ. ಅಂಥ ಹೆಂಡತಿ ಇದ್ದೂ ಬೇರೆಯವಳನ್ನು ಮದುವೆಯಾಗುತ್ತೇನೆ ಎನ್ನುವಾತನ ಮಾತನ್ನು ನಂಬಬಹುದೇ?

ಚಂಚಲೆ – ಹುಂ, ಮತ್ತೆ!

ಮೋಹನ – ಮತ್ತೇನು ಚಂಚಲೆ, ನಿನ್ನ ಪ್ರಾಯದ ಎಷ್ಟೋ ಅಬೋಧ ತರುಣಿಯರು, ದುಷ್ಟನ ಸವಿಮಾತನ್ನು ನಂಬಿ, ಹೇಗೆ ಮೋಸಹೋದರೋ ಹಾಗೆ ನೀನೂ ಆದೆ

ಚಂಚಲೆ – ಇದು ನಿಜವೇ?

ಮೋಹನ ನೀನೇ ನೋಡು ಚಂಚಲೆ ಈಗ ಒಬ್ಬಾಕೆ ಹೆಂಡತಿ ಎನಿಸಿದ್ದಾಳೆ. ಇನ್ನೊಬ್ಬಳನ್ನು ಮದುವೆಯಾಗುವುದಾದರೂ ಹೇಗೆ? ಇಂದು ನಿನ್ನನ್ನು ನಂಬಿಸಿ ಪಾಪಕೂಪಕ್ಕೆ ಇಳಿಸಿದ್ದಾನೆ

ಚಂಚಲೆ ಅಳತೊಡಗಿದಳು

ಮೋಹನ – ಅಳಬೇಡ ಹುಡುಗಿ! ಅಳಬೇಡ! ಆಗುವುದೆಲ್ಲ ಆಗಿ ಹೋಯಿತು. ಬೇರೆ ವಿಷಯಗಳು ಹೇಗೂ ಇರಲಿ. ಇನ್ನು ಮುಂದಾದರೂ ಜಾಗ್ರತೆಯಿಂದಿರು. ಚಿಕ್ಕ ಪ್ರಾಯದಲ್ಲಿ ಎಂತಹ ಹುಡುಗಿಗೂ ಶ್ರೀಧರನಂತಹ ಸಂಪನ್ನನ ಕೈಹಿಡಿಯಬೇಕೆಂಬ ಲವಲವಿಕೆಯಿದ್ದೀತು. ಪ್ರಾಯದ ದೋಷವದು. ನನ್ನ ಮಾತನ್ನು ಮೀರಿ ಕೆಟ್ಟೆ. ಆದರೂ ಕೆಟ್ಟುದರಲ್ಲಿಯೇ ಒಳ್ಳೆಯದನ್ನು ಸಾಧಿಸು. ಶ್ರೀಧರನಿಗೆ ಬುದ್ಧಿ ಕಲಿಸದೆ ಈ ಜೀವ ಹೋಗದು. ಹೇಗೆಂದು ನೋಡಬೇಕು. ಆತನು ದೊಡ್ಡ ಮದ್ದಾನೆಯಂತೆ ನಮ್ಮನ್ನೆಲ್ಲ ತುಳಿಯಬಹುದು. ಇದಿರು ನಿಂತು ಹೋಡೆದಾಡುವ ಶಕ್ತಿ ಸಾಲದು ನಮ್ಮಂತಹ ಬಡಪಾಯಿಗಳಿಗೆ. ಸಮಯ ಸಾಧಿಸಿ ಹೊಡೆಯಬೇಕು ಚಂಚಲೆ. ನಿನ್ನಲ್ಲಿ ಒಂದನ್ನು ಹೇಳುತ್ತೇನೆ. ಶ್ರೀಧರನ ಮುಷ್ಟಿಪ್ರಹಾರ

ದಿಂದ ನನ್ನ ಎಲುಬು ಪುಡಿಯಾದೀತು. ಆದರೂ ಈ ದೇಹದಲ್ಲಿ ಇದೇ ಪ್ರಾಣವಾಯು ಸಂಚರಿಸುತ್ತಿದ್ದರೆ ಅವನ ಪಂಚಪ್ರಾಣಗಳನ್ನು ಹೀರದಿರ ಲಾರೆ ಚಂಚಲೆ. ನಿನಗೆ ಸಮಯವನ್ನು ಕೊಟ್ಟಿದ್ದೇನೆ, ವಿಚಾರಿಸು. ನನ್ನ ಮಾತು ಸತ್ಯವೋ ನೋಡು ಸುಳ್ಳಾದರೆ ನನ್ನೀ ವಿಶಾಲ ವಕ್ಷಸ್ಥಲವನ್ನು ನಿನ್ನ ಕಾಲಡಿಯಲ್ಲಿ ಚಾಚುತ್ತೇನೆ ಸಿರ್ದಾಕ್ಷಣ್ಯವಾಗಿ ಒದೆ. ಸುಳ್ಳು ಹೇಳಿದುದಕ್ಕೆ ಪ್ರಾಯಶ್ಚಿತ್ತ ಕೊಡು ಮೋಹನನ ಪ್ರಾಣ ಎಲ್ಲರ ಪ್ರಾಣದಂತೆ ಸುಮ್ಮನೆ ಹೋಗದು. ನಿನ್ನಲ್ಲಿ ನನಗೆ ಸಿಟ್ಟಿಲ್ಲ.

ಮೋಹನನು ಹೇಳಿದುದೆಲ್ಲ ನಿಜವಾಗಿರಲಿ, ಇಲ್ಲದಿರಲಿ. ಅವನ ಅಭಿಪ್ರಾಯಗಳಲ್ಲಿ ಕೆಲವು ತನ್ನ ಆಲೋಚನೆ ಕೆಲವಕ್ಕೆ ಸಮರ್ಥನೆಕೊಟ್ಟ ಕಾರಣ ಚಂಚಲೆಗೆ ಮತ್ತಷ್ಟು ಖೇದವೆ ಆಯಿತು ಮೋಹನನೆಂದೂ ಜಳ್ಳು ಮಾತಿನ ಬಾಯಿಬಡಿಕನಲ್ಲ. ಆದುದರಿಂದ, ಅವನ ರೋಷವಾಕ್ಯಗಳಿಂದ ಎದೆ ತತ್ತರಿಸಿತು. ತನ್ನೊಬ್ಬಳ ನೆವನದಿಂದ ಶ್ರೀಧರ ಮೋಹನರು ಕತ್ತಿಕಟ್ಟಿ ಹೋರಾ ಡುವ ಸಂಭವವನ್ನು ಮುಂಗಂಡು ಭಯಭ್ರಾಂತಿ ಹಿಡಿಯಿತು. ಆದರೆ ಮಾಡು ವುದೇನು? ಮೋಹನನೆಂದಂತೆ, ಆಗಬೇಕಾದುದು ಆಗಿಹೋಯಿತಲ್ಲ! ಈಗ ತನಗೆ ಹೆಸರು 'ಜಾರೆ' ಎಂದು. ಇದನ್ನು ತೆಗೆದುಹಾಕಿ, ಗೃಹಿಣಿಯೆನ್ನಿಸು ವುದಕ್ಕೆ ಕೂಡಲೆ ಪ್ರಯತ್ನಿಸಬೇಕು, ಸಾಧ್ಯವಲ್ಲವಾದರೆ ಮತ್ತೇನಾಗುವುದೋ ನೋಡಬೇಕು. ಈ ಮಧ್ಯೆ ತಾನು ತಾನೇ ಆಗಿದ್ದು, ಅತ್ತ ಶ್ರೀಧರನ–ಇತ್ತ ಮೋಹನನ ಪಕ್ಷ–ವಿಪಕ್ಷಗಳ ಗೊಂದಲಕ್ಕೆ ಬೀಳದೆ, ಜಾಗರೂಕತೆಯಿಂ ದಿರಬೇಕೆಂದು, ಚಂಚಲೆ ಗದ್ಗದಕಂಠದಿಂದ 'ನಾನು ಹೋಗಿಬರುತ್ತೇನೆ' ಎಂದಳು.

ಚಂಚಲೆ ಹೊರಟಳು. ಬರಿಯ ಮೋಟರ್ ಡ್ರೈವರನಾಗಿದ್ದರೂ ಮೋಹ ನನ ಸ್ವಭಾವವೆಷ್ಟು ಉದಾತ್ತವಾದುದು? ತಾನು ತಿರಸ್ಕರಿಸಿದುದರಿಂದ ಸಿಟ್ಟಾ ದನೆ? ತನ್ನ ಮಾನಾಪಹಾರದ ಪ್ರತೀಕಾರದ ಸಾಧನೆಗಾಗಿ ಜೀವಹೋದರೂ ಚಿಂತೆಯಿಲ್ಲವೆಂದು ಹಟತೊಡಲಿಲ್ಲವೆ? ಇದರಲ್ಲಿ ಯಾವ ಸ್ವಾರ್ಥವಿದೆ? ಯಾವ ದುರುದ್ದೇಶವಿದೆ? ಇವನ ಗುಣ ಹೊನ್ನಲ್ಲವೆ? ಇವನ ಎದೆ ಬಂಗಾರದ ಅದು ರಲ್ಲವೆ? ಕೆಲವು ಸಣ್ಣಪುಟ್ಟ ದುರ್ಗುಣಗಳಿರಬಹುದು. ಅಖಂಡ ಗುಣ ಸಮೂಹವನ್ನು ನೋಡಿದರೆ, ಆ ದೋಷಗಳೆಲ್ಲಿ? ಇಂತಹ ಮನುಷ್ಯರು,

ಪ್ರಪಂಚದಲ್ಲಿ ಎಷ್ಟು ಮಂದಿ ದೊರೆತಾರು? ಚಂಚಲೆಯ ಮನಸ್ಸಿನಲ್ಲಿ ಇದೇ ಆಲೋಚನೆ.

ಮೋಹನನ ಮನಸ್ಥಿತಿಯನ್ನು ವರ್ಣಿಸಬೇಕಾಗಿಯೆ ಇಲ್ಲ – ಮೊದಲು 'ಅಮ್ಮ'ನಾಗಿದ್ದವಳು ಈಗ ಚಂಚಲೆ ಎಂದು ಅವನ ಏಕವಚನ ಸಂಬೋಧನೆಗೆ ಪಾತ್ರಳಾಗಿದ್ದಳು!

## ಹದಿನೆಂಟನೆಯ ಪ್ರಕರಣ

ಶ್ರೀಧರರಾಯನನ್ನು ಒಮ್ಮೆ ಕಾಣಬೇಕು, ಸಕಲವನ್ನೂ ಬಿಚ್ಚಿ ಮಾತಾಡಬೇಕು, ಆತನ ಅಣ್ಣನ ಸ್ಥಿತಿಯನ್ನು ವಿವರಿಸಿ ಹೇಳಿ, ಅವರಿಬ್ಬರೂ ಮುಂದೆ ಸುಖವಾಗಿರುವುದು ಸಾಧ್ಯವಾದರೆ, ಅದಕ್ಕೆ ತಮ್ಮಿಂದ ಏನಾದರೂ ಸಹಾಯವಾಗುವುದಿದ್ದರೆ, ಅದನ್ನು ಮಾಡಿಯೇ ಬಿಡಬೇಕು. ಎಂದು ಡಾ. ವೆಂಕೋಬರಾಯರು, ಕುಳಿತಲ್ಲಿ ಕೂರದೆ, ನಿಂತಲ್ಲಿ ನಿಲ್ಲದೆ, ತಮ್ಮ ದೊಡ್ಡ ಹೊಟ್ಟೆಯನ್ನೆತ್ತಿಕೊಂಡು ಮನೆಯ ಅಂಗಳದಲ್ಲಿ, ಆನೆಯಂತೆ ಸಾವಕಾಶವಾಗಿ ತಿರುಗಾಡುತ್ತಿದ್ದರು. ಅಷ್ಟರಲ್ಲಿ ಶ್ರೀಧರನು ಕಾರಿನಿಂದಿಳಿದು ಮೇಲೆ ಬಂದು ಡಾ. ವೆಂಕೋಬರಾಯರು ತಮ್ಮ ಹೂದೋಟದ ಒಂದು ಮೂಲೆಗೆ ಅವನನ್ನು ಕರೆದೊಯ್ದು, ಅತಿ ಗಂಭೀರ ವ್ಯಸನವನ್ನು ವ್ಯಕ್ತಗೊಳಿಸಿ ಆಡತೊಡಗಿದರು.

ವೆಂಕೋಬರಾಯರು:– ಶ್ರೀಧರರಾಯರೆ, ನಿಮ್ಮಲ್ಲಿ ಮಹತ್ವದ ವಿಷಯವನ್ನು ಆಡಬೇಕೆಂದಿದ್ದೇನೆ. ಅಧಿಕಪ್ರಸಂಗಿಯೆಂದು ನನ್ನನ್ನು ಭಾವಿಸುವಂತಿಲ್ಲವಷ್ಟೆ?

ಶ್ರೀಧರ:– ನನ್ನ ಹೃದಯದರ್ಶಿಗಳಾದ ನಿಮ್ಮನ್ನು ತಪ್ಪಾಗಿ ತಿಳಿಯುವೆನೇ?

ವೆಂಕೋಬರಾಯ:– ಶ್ರೀಧರರಾಯರೆ, ನಿಮ್ಮ ಸುತ್ತಲೂ ಅಪಾಯಗಳು ಹೊಂಚುಹಾಕುತ್ತಿವೆ.

ಶ್ರೀಧರ.– ಮನುಷ್ಯಜನ್ಮ ಬಂದ ಮೇಲೆ ಅಂತಹ ಅಪಾಯಕ್ಕೆ ಇದಿರೊಡ್ಡುವ ಎದೆಯಿರಬೇಕು

ವೆಂಕೋಬರಾಯ – ಆದರೆ ಅಪಾಯವನ್ನು ಸುಲಭವಾಗಿ ನಿವಾರಿಸಲು ಸಾಧ್ಯವಿರುವಾಗ?

ಶ್ರೀಧರ.– ನಿಮ್ಮ ಅಭಿಪ್ರಾಯವೇನೆಂದು ಬಿಚ್ಚಿ ಹೇಳಿ ಡಾಕ್ಟರರೇ!

ವೆಂಕೋಬರಾಯ ನಿನ್ನ ಅಣ್ಣ ಹುಚ್ಚನಾಗಿ ಬಂದಿದ್ದಾನೆ

ಶ್ರೀಧರ – ಆತನು ಬಂದುದು ಇಂದಾಗಿರಬಹುದು ಹುಚ್ಚು ಇಂದಿನದಲ್ಲ.

ವೆಂಕೋಬರಾಯ.– ನಾನು ತಿಳಿದುದನ್ನು ಹೇಳಿಬಿಡುತ್ತೇನೆ. ಆತನಿಗೆ ನಿನ್ನ ನಡತೆಯಲ್ಲೇನೋ ಸಂದೇಹ ಬಂದಿದೆ.

ಶ್ರೀಧರ.– ಸಂದೇಹ ಬರಲೇಬೇಕು ಅದರಲ್ಲಿ ಆಶ್ಚರ್ಯವಿಲ್ಲ. ತಮ್ಮ ಹೆಂಡಿರನ್ನು ಇನ್ನೊಬ್ಬರು ಹೊರೆಯಬೇಕೆಂಬ ಅಭಿಪ್ರಾಯವಿರುವ ನಪುಂಸಕರಿಗೆ ಅಂತಹ ಭಾವ ಬರಲೇಬೇಕು.

ವೆಂಕೋಬರಾಯ ಆತನ ಯೋಗ್ಯತಾಯೋಗ್ಯತೆಗಳನ್ನು ಚರ್ಚಿಸುವುದಿಲ್ಲ; ಆದರೆ ಸೀತಮ್ಮ ಅವನೊಡನೆ ಸುಖವಾಗಿ ಸಂಸಾರಮಾಡಿಕೊಂಡಿರುವ ವ್ಯವಸ್ಥೆಯನ್ನು ಮಾಡಿಸಿದರೆ, ಆತನ ಹುಚ್ಚು ಇಂದೇ ಇಳಿಯುತ್ತದೆ

ಶ್ರೀಧರ – ಅದು ಸಂಪೂರ್ಣವಾಗಿ ಅವನ ಅಧೀನವಾಗಿದೆ. ಪೋಲೀಸರ ಪಡೆ ಬೇಡ, ಮನೆಗೆ ಬರಲಿ, ಹೆಂಡತಿಯನ್ನು ಕರೆಯಲಿ; ಕರೆದುಕೊಂಡು ಹೋಗಲಿ, ಹುಚ್ಚನ್ನು ಓಡಿಸಿಬಿಡಲಿ!

ವೆಂಕೋಬರಾಯ.- ಪಾಪ! ಕೈಯಲ್ಲಿ ಕಾಸಿಲ್ಲದ ಪರದೇಶಿಯಾಗಿದ್ದಾನೆ ಹೆಂಡತಿಯನ್ನು ಕಟ್ಟಿಕೊಂಡು ಈ ಸ್ಥಿತಿಯಲ್ಲಿ ಏನು ಮಾಡಿಯಾನು?

ಶ್ರೀಧರ:— ಈ ಭಾಗದಲ್ಲಿ ಯಾರೇನು ಮಾಡಬಹುದು? ನೀವೇ ಹೇಳಿ. ಇಂಥವರಿಗೆ ಎಲ್ಲಿಯಾದರೂ ಸ್ಥಳವಿದ್ದರೆ ಅದು ಹುಚ್ಚರ ಆಸ್ಪತ್ರೆಯಲ್ಲಿ.

ವೆಂಕೋಬರಾಯ.– ಹಾಗೆ ಹೇಳಬೇಡಿರಿ ಶ್ರೀಧರರಾಯರೇ! ಲೋಕವು ಏನೇನೋ ಆಡುತ್ತಿದೆ. ಅದಕ್ಕೆ ಸರಿಯಾಗಿ ಸ್ಥಿತಿಗತಿಗಳೂ ಅವೆ. ಅಪವಾದವೊಮ್ಮೆ ಹೋಗಲಿ.

ಶ್ರೀಧರ:– ನಿಮಗೇನು ಹುಚ್ಚು ವೆಂಕೋಬರಾಯರೇ! ಅಪವಾದಕ್ಕೆ ಹೆದರುತ್ತಿದ್ದರೆ, ಈ ಶ್ರೀಧರ ಇಷ್ಟು ವರ್ಷವಾದರೂ ಬದುಕುತ್ತಿದ್ದನೇ?

ವೆಂಕೋಬರಾಯ – ಅದು ನಿಜವೆ ಮನೆಯ ಒಳಗಿನ ಸಂಗತಿಗಳಿವು. ಇದನ್ನು ಅಂಗಡಿ ಬೀದಿಯಲ್ಲಿ ಪ್ರದರ್ಶನಕ್ಕೆ ಇಡುವುದೇ?

ಶ್ರೀಧರ:– ನನಗೆ ಗುಟ್ಟೆಂಬುದು ಇಲ್ಲ ಡಾಕ್ಟರರೇ! ಆಗುವುದು ಆಗುತ್ತದೆ. ಏಕಾಕಿಯಾದರೂ ಈ ಶ್ರೀಧರ ಕರ್ತವ್ಯಪಥದಲ್ಲಿ ಮುಂದುವರಿಯುತ್ತಾನೆ.

ವೆಂಕೋಬರಾಯ. – ವೆಂಕಟರಾಯನಲ್ಲಿ ಮಾತಾಡುವಾಗ, ಆತನ ಪಾಲಿಗೆ ಬಂದ ಹತ್ತು ಸಾವಿರ ನಿಮ್ಮ ವಶದಲ್ಲಿದೆಯೆಂದು ತಿಳಿಯುತ್ತದೆ

ಶ್ರೀಧರ – ಒಂದೇ ಹೊಟ್ಟೆಯಲ್ಲಿ ಹುಟ್ಟಿದವರೆಂಬ ಪ್ರೇಮವನ್ನಿಟ್ಟರೆ ಆಗುವ ಭವಿಷ್ಯವೇ ಹೀಗೆ

ವೆಂಕೋಬರಾಯ – ಹೇಗೂ ಇರಲಿ; ಇಷ್ಟೆಲ್ಲ ಮಾಡಿದೆ. ವೆಂಕಟರಾಯನಿಗೆ ಹುಚ್ಚು ಬಿಡದಿದ್ದರೂ ಕಷ್ಟಕ್ಕೆ ಈಡಾಗುವಾತನು ನೀನೆ ಆ ಕಷ್ಟವು ಬಾರದಂತೆ ಮಾಡುವುದೇ ಲೇಸಲ್ಲವೇ?

ಶ್ರೀಧರ:– ಕೃಪಾಳುಗಳಾದ ನಮ್ಮ ಸರಕಾರದವರು ಹುಚ್ಚರಿಗಾಗಿ ಪ್ರತ್ಯೇಕ ಸಾಮ್ರಾಜ್ಯವನ್ನೆ ಕಲ್ಪಿಸಿಕೊಟ್ಟಿರುವಾಗ ಬೇರೇನು ಹೆದರಿಕೆ? ಕಲವು ಮಾತುಗಳನ್ನಾಡಲು ನಿಮಗ ಸಂಕೋಚವಾಗುತ್ತಿದೆ. ನಾನೇ ಆಡಿಬಿಡುತ್ತೇನೆ. ಅತ್ತಿಗೆಯನ್ನು ಕೆಡಿಸಬೇಕೆಂದು ನಾನೆಣಿಸಿದೆ, ಅಥವಾ ಕೆಡಿಸಿಯೇ ಬಿಟ್ಟೆ. ಇನ್ನೊಬ್ಬಳನ್ನು–ಅವಳು ದಾದಿಯಾಗಿ ಬಂದವಳು ನಾಳೆಯೇ ಹೋಗಬಹುದಾದರೂ–ಮನೆಯಲ್ಲಿಯೇ ಇಟ್ಟುಕೊಂಡಿದ್ದೇನೆ, ಸ್ತ್ರೀ ಲಂಪಟನಾಗಿದ್ದೇನೆ. ಹೆಂಡತಿಯ ಶುಶ್ರೂಷೆಯನ್ನು ಸರಿಯಾಗಿ ಮಾಡಿಸುವುದಿಲ್ಲ. ಹೀಗೆ ಜನರು ಆಡುತ್ತಾರೆ. ನಾನು ಪರೋಪಕಾರಕ್ಕಾಗಿ ವೆಚ್ಚಮಾಡಿದ ಹಣವು ಇಷ್ಟು ಕೀರ್ತಿಯನ್ನು ತಂದಿತು. ಎಂದಲ್ಲವೇ ನೀವಾಡುವುದು?

ಶ್ರೀಧರನ ಮಾತು ಕೇಳಿ ವೆಂಕೋಬರಾಯರಿಗೆ ನಗುಬಂದು, ಹೊಟ್ಟೆಯ ಮೂಲೆ ಸಂದುಗಳನ್ನೆಲ್ಲ ಒಮ್ಮೆ ಅದಿರಿಸಿಬಿಟ್ಟಂತಾಯಿತು. 'ನಿನಗೆ ತಿಳಿಯದುದು ಒಂದೂ ಇಲ್ಲ; ತಿಳಿಸುವೆನೆಂದು ಸ್ವಯಂಸೇವಕನಾಗಿ ಬಂದ ನಾನೇ

ಹೆಡ್ಡನಾದೆ' ಎಂದು ವೆಂಕೋಬರಾಯರು ಕ್ಷಮೆಬೇಡಿದರು ಆ ಪ್ರಕರಣ ಅಲ್ಲಿಗೆ ಮುಗಿಯಿತು.

ವೆಂಕಟರಾಯನಿಗೆ ತಮ್ಮನನ್ನು ನೋಡಿದೊಡನೆ ತಲೆ ಕೆಟ್ಟಿತು. ಚೂರಿ ಹಾಕುತ್ತೇನೆಂದು ಓಡಿಬಂದ ಆದರೆ ಶ್ರೀಧರನ ಸಂಗಡದಲ್ಲಿಯೆ ನಾಲ್ಕು ಜನ ಕಟ್ಟಾಳು ದಡಿಗರು ಬಂದಿದ್ದರು. ಕಡಿಯಲಿರುವ ಹಂದಿಯ ಕೈಕಾಲುಗಳನ್ನು ಕಟ್ಟುವಂತೆ ವೆಂಕಟರಾಯನನ್ನು ಹೆಡಮುರಿ ಕಟ್ಟಿದರು. ಶ್ರೀಧರನು ಅವರನ್ನೆಲ್ಲಿಗೋ ಕಳುಹಿಕೊಟ್ಟನು.

'ಅಯ್ಯೋ! ಈ ತಲೆಹೋಕ ಎಂತಹ ಬಿರುಗಾಳಿಯನ್ನೆಬ್ಬಿಸಿದ್ದಾನೆ! ಇದಿನ್ನು ಯಾವ ಊರು ಕೇರಿಗಳ ಮನೆಗಳನ್ನು ನೆಲಕ್ಕಪ್ಪಳಿಸಿ ಅಂತ್ಯವಾಗುವುದೋ!' ಎಂದು ಡಾಕ್ಟರರು ವ್ಯಾಕುಲಪಟ್ಟರು.

ತಪ್ಪು ಯಾರದೇ ಆಗಿರಲಿ ತಮ್ಮ ಸ್ನೇಹಿತರಾದ ಈ ಸಹೋದರರಿಬ್ಬರು ಒಡನಾಡಿ ಸೊಗದಿಂದ ಬಾಳುವುದನ್ನು ನೋಡಬೇಕೆಂಬಾಶೆ ಅವರಿಗೆ!

'ಈತನ ಹುಚ್ಚು ಬಿಡುವುದಕ್ಕೆ ಮದ್ದುಕೊಡುವವರು ನನ್ನಂಥವರಲ್ಲ; ನಿಮ್ಮಂಥವರು' ಎಂದು ಕೃತಜ್ಞತೆಯನ್ನು ಸೂಚಿಸಿ ಶ್ರೀಧರ ಮಾಯವಾದನು.

# ಹತ್ತೊಂಬತ್ತನೆಯ ಪ್ರಕರಣ

'ನಿಮ್ಮ ಸುತ್ತಲೂ ಅಪಾಯಗಳು ಹೊಂಚುಹಾಕುತ್ತಿವೆ' – ಇದು ವೆಂಕೋಬರಾಯರು ಕೊಟ್ಟ ಮುಂಜಾಗ್ರತೆ! ಒಂದು ನಿಮಿಷದ ವರೆಗೆ ಶ್ರೀಧರನ ಹೃದಯಕಂದರದಲ್ಲಿ ಈ ಮಾತು ಪ್ರತಿಧ್ವನಿಸುತ್ತಿತ್ತು. ಚಿಂತೆಗಳನ್ನು ಹೆಚ್ಚುಕಾಲ ಬಾಳಬಿಡುವ ಜನವಲ್ಲ ಶ್ರೀಧರನೆಂದರೆ. 'ಪಾಪ! ಆ ಲಂಬೋದರನಿಗೆ ಮನುಷ್ಯರ ದೇಹಪರೀಕ್ಷೆ ಮಾಡಿ, ನಾಡಿ ಮುಟ್ಟಿ, ಎದೆಯನ್ನು ಸ್ಪರ್ಶಿಸಿ, ಒಡಲಿಗೆ ಮದ್ದುಕೊಡಲು ಗೊತ್ತಿದೆಯಲ್ಲದೆ, ಮನಃಶಾಸ್ತ್ರವನ್ನು ಕಲಿತು, ಅದರ ರೋಗಕ್ಕೆ ಚಿಕಿತ್ಸೆಮಾಡುವ ಕೈಚಳಕ ಎಲ್ಲಿಂದ ಬರಬೇಕು? ಮೂಢಪ್ರಾಣಿ ಅದು. ನನಗೆ ಒಳ್ಳೆಯದಾಗಬೇಕೆಂಬ ಸದ್ಭಾವವೆ ಹೀಗೆ ಆಡಿಸಿದುದು ಅದನ್ನು ಆದರೆ ತನ್ನ ಸೂಚನೆಯಂತೆ ನಡೆದರೆ ಏನಾಗುವುದೆಂದು ಆ ಜಂತುಗೆ ತಿಳಿದಿರುವುದೇ? ಹೋಗಲಿ ಆ ಮಾತು!' ಎಂದು ಶ್ರೀಧರನು, ಒಂದು ನಿಮಿಷವೇ ಬಾಳಿದ ವ್ಯಾಕುಲವನ್ನು ಮರುಕ್ಷಣದಲ್ಲಿಯೇ ಓಡಿಸಿ, ತಾನಾವ ವ್ಯೂಹರಚನೆಯಲ್ಲಿ ನಿರತನಾಗಿದ್ದನೋ ಅದರ ಸಂಪೂರ್ಣ ಸಾಫಲ್ಯಕ್ಕಾಗಿ, ಹಿಂದೆ ಮುಂದೆ ನೋಡದೆ ದುಡಮ್ಮನೆ ಹಾರಿದನು.

ವೆಂಕಟರಾಯನು ಬಂದ ಅನಂತರ ತಾಯಿಯ ಮುಖದರ್ಶನವೂ ಆಗದಿದ್ದುದರಿಂದ, ಆಕೆಯನ್ನೊಮ್ಮೆ ಕಂಡು, ಸಮಾಧಾನ ಹೇಳಿ, ಮಾತೃಹೃದಯಸಿದ್ಧವಾದ ವ್ಯಸನೋತ್ಕಂಠೆಗಳನ್ನು ದೂರಮಾಡುವುದು ಪ್ರಥಮ ಕರ್ತವ್ಯವೆಂದು ಮನೆಯ ಕಡೆಗೆ ತೆರಳಿದಾಗ, ಚಾವಡಿಯಿಂದ ಹೊರಗೆ ಇಣಿಕಿ ನೋಡುತ್ತಾ, ತನ್ನ ಬರವನ್ನೆ ಹಾರಯಿಸುತ್ತಾ ಇದ್ದ ತಾಯಿಯನ್ನು ಕಂಡು, ಶ್ರೀಧರನು ತಾನಾಗಿ ಹೀಗೆ ಸಂತಯಿಸಿದನು – ನನಗೆಲ್ಲ ಗೊತ್ತಿದೆ ತಾಯಿ, ಆರೇಳು ತಿಂಗಳ ಹಿಂದೆ ಆತನ ಪತ್ರವನ್ನು ನೋಡಿದಾಗಿನಿಂದಲೆ, ಈ ಸ್ಥಿತಿ ಬರಬಹುದೆಂದು ಭಾವಿಸಿದ್ದೆ. ಹೆತ್ತ ಕರುಳು ಕಣ್ಣಮುಂದೆ ಇರುವಾಗ, ಭವಿಷ್ಯದಲ್ಲಿ ಹೀಗಾಗಬಹುದೆನ್ನುವ ಸಾಹಸಕ್ಕೆ ನಾನು ಹೋಗಿಲ್ಲವಷ್ಟೆ. ಅಣ್ಣನಿಗೆ ಮನೋರೋಗ! ಯಾರೇನು ಮಾಡಲಾಗುತ್ತದಮ್ಮ? ಬಾಯಿಯಲ್ಲಿ ನಿಷ್ಠುರವಾಡಿದರೂ ನನ್ನ ಕೈ ನಿಷ್ಠುರವನ್ನಾಚರಿಸಲಿಲ್ಲ. ಇನ್ನೂ ಆಚರಿಸುವಂತಿಲ್ಲ.

ಆತನಿಗೆ ಹುಚ್ಚು ಹಿಡಿದುದರಲ್ಲಿ ಆಶ್ಚರ್ಯವಿಲ್ಲ. ಸಕಾಲದಲ್ಲಿ ನಮ್ಮ ಕೈಗೆ ದೊರೆತನಲ್ಲ, ಇದೇ ಆಶ್ಚರ್ಯ, ಆದರೂ ಸಂತೋಷ. ಲಾಯವನ್ನು ಬಿಟ್ಟೋಡುವ ಹುಚ್ಚು ಕುದುರೆಯಂತೆ ಎಲ್ಲೆಲ್ಲಿಯೋ ಓಡುತ್ತಿದ್ದರೆ ಏನವಸ್ಥೆಯಾಗುತ್ತಿತ್ತು? ಬಂಧುಬಳಗವಿದೆ, ಹುಚ್ಚು ಹಿಡಿದರೆ ಅದನ್ನು ಬಿಡಿಸಲು ಪ್ರಯತ್ನ ಮಾಡುವ ಜನರಿದ್ದಾರೆ, ದೇವರಿಗೆ ಕೃತಜ್ಞತೆಯನ್ನು ಸಮರ್ಪಿಸಬೇಕಮ್ಮ!

ರಾಧಮ್ಮ:– ಅವನು ವೆಂಕೋಬರಾಯರಲ್ಲಿಯೆ ಇರುವನೋ?

ಶ್ರೀಧರ – ಯಾಕಮ್ಮ ಅವರಿಗೆ ಉಪದ್ರ? ನಮ್ಮ ಮರುಳನ್ನು ಅವರ ಮನೆಯಲ್ಲಿ ಕುಣಿದಾಡಿಸಿ ಚಂದ ನೋಡುವುದೇಕೆ? ಎಂದು ಬೇರೆ ವ್ಯವಸ್ಥೆ ಮಾಡಿದ್ದೇನೆ.

ರಾಧಮ್ಮ – ಏನದು?

ಶ್ರೀಧರ – ಇಂತಹ ಮನೋವ್ಯಾಧಿಯನ್ನು ಕ್ಷಿಪ್ರವಾಗಿ ಗುಣಮಾಡುವ ಮಲೆಯಾಳಿಯೊಬ್ಬನಿದ್ದಾನ, ಅವನಿಗೆ ತೋರಿಸಿದೆ. ಗುಣಮಾಡಬಹುದು. ದಿನಹರಣ ಮಾಡಿ ರೋಗವು ಪ್ರಕೋಪಿಸಿದರೆ ನನ್ನಿಂದ ಸಾಧ್ಯವಾಗದು ಎಂದನು.

ರಾಧಮ್ಮ – ಇಷ್ಟು ಅವಸರ ಮಾಡಿದೆಯೋ ಶ್ರೀಧರ?

ಶ್ರೀಧರ:– ಮತ್ತೇನು ಮಾಡುವುದು ತಾಯಿ? ನದಿಯಲ್ಲಿ ನೆರೆ ಏರಿದಂತೆ, ನಿಮಿಷ ನಿಮಿಷಕ್ಕೂ ಅವನ ಭ್ರಾಂತಿ ಏರುತ್ತಾ ಬಂದಿದೆ. ಬಂಧು ಬಳಗವನ್ನು ಕಂಡರೆ ಬಿರುಗಾಳಿಯಂತೆ ಗರ್ಜಿಸುತ್ತಾನೆ; ಹಲುಬುತ್ತಾನೆ. ಹೊಡೆಯ ಬರುತ್ತಾನೆ; ಕೊಲ್ಲಲು ಬರುತ್ತಾನ ಕೂಡಲೆ ಚಿಕಿತ್ಸೆ ಮಾಡಿಸುವುದು ಲೇಸೆಂದು ಕಂಡಿತು.

ರಾಧಮ್ಮ :– ಎಲ್ಲಿಗೆ ಕಳುಹಿಸಿದ ಮಗು?

ಶ್ರೀಧರ:– ಎಲ್ಲಿಗೂ ಕಳುಹಿಸಲಿಲ್ಲ; ಮಂಗಳೂರಲ್ಲಿಯೆ ಇದ್ದಾನೆ. ಒಂದೆರಡು ದಿನ ಇಲ್ಲಿದ್ದು ಮತ್ತೆ ಮಲೆಯಾಳಕ್ಕೆ ಹೋಗಲೂ ಬಹುದು. ಆ ವೈದ್ಯನನ್ನು ಮನೆಯೊಳಗೆ ಇರಿಸಿಕೊಳ್ಳಬೇಕೆಂದಿದ್ದೆ. ಅವನು ಅದಕ್ಕೆ ಒಪ್ಪುವುದಿಲ್ಲ. ಊರಿಗೆ ಹೋಗಬೇಕಂತೆ. ಅಲ್ಲಿ ಅನೇಕ ರೋಗಿಗಳು ಇವನಾಗಮನವನ್ನು ಅಪೇಕ್ಷಿಸುತ್ತಿದ್ದಾರಂತೆ. ಅಣ್ಣನ ರೋಗವು ನಮ್ಮಂಕೆ

ಯಲ್ಲಿ ನಿಲ್ಲಬಹುದೇ? ಎಂಬುದು ಎರಡು ಮೂರು ದಿವಸಗಳಲ್ಲಿ ತಿಳಿದು ಬಂದೀತು. ನಿಲ್ಲುವುದಾದರೆ ಅವನನ್ನು ಆತ್ತಿಗೆಯ ವಶದಲ್ಲಿಟ್ಟು, ಎರಡು ಮೂರು ಮಂದಿ ದಡಿಗರಾದ ಆಳುಗಳನ್ನು ಕಾವಲಿಟ್ಟು, ಇಲ್ಲಿಯೆ ಶಾಸ್ತ್ರೋಕ್ತ ವಾಗಿ ಅವನ ರೋಗೋಪಚಾರವನ್ನು ಮಾಡಿಸಬಹುದು ಅದರಲ್ಲೇನು? ಇಲ್ಲವಾದರೆ ಕಳುಹಿಸಬೇಕಾದೀತು . . ರಾಮಣ್ಣನನ್ನು ಬರಿಸಿ ಅವನ ವಶಕ್ಕೆ ಕೊಟ್ಟು ಮಲಯಾಳಕ್ಕೆ ಕಳುಹಿಸಬೇಕಾದೀತು

ರಾಧಮ್ಮ – ಮುಖ ನೋಡಿದಾಗ ಶನಿ ಹಿಡಿದ ನಳರಾಯನಂತೆ ತೋರಿತು. ನನ್ನ ಮಗ ಹೌದೊ? ಅಲ್ಲವೊ? ಎಂಬ ಸಂದೇಹವುಂಟಾಯಿತು. ಚೊಚ್ಚಲ ಮಗನೆಂಬ ಪ್ರೀತಿಯಿಂದ ಒಂದೆರಡು ಮಾತುಗಳನ್ನೂ ಆಡಿಸಲಿಲ್ಲ. ಸರಿಯಾಗಿ ಒಮ್ಮೆ ಮುಖವನ್ನು ನೋಡಲೂ ಇಲ್ಲ.

ಶ್ರೀಧರ – ನಿನ್ನ ಚೊಚ್ಚಲ ಮಗ ಆತನೆ ಎಂಬುದನ್ನೂ ನಾನಲ್ಲವೆಂಬು ದನ್ನೂ ಚೆನ್ನಾಗಿ ಬಲ್ಲೆನು ಆದರೆ ಚೊಚ್ಚಲ ಮಗನು ಈಗ ಮಾತಾಡು ತ್ತಿರುವುದು ಮುಷ್ಟಿಯಿಂದ, ತಿಳಿಯಿತೇ? ಮುಹೂರ್ತ ನೋಡಿ, ದಿವಾ, ಘಟಿ, ವಾರ, ನಕ್ಷತ್ರಗಳನ್ನು ನೋಡಿ, ಶುಭಮುಹೂರ್ತ ಬರಲೆಂದು ಕುಳಿ ತರೆ ಆ ಹುಚ್ಚು ಸುಮ್ಮನಿರುವುದಿಲ್ಲ. ಪಂಚಾಂಗಕ್ಕೂ ಜೋಯಿಸರಿಗೂ ಹೆದರುವ ರೋಗವಲ್ಲ ಅದು ನಮ್ಮ ಸುದೈವದಿಂದ ಯಾರೋ ಒಬ್ಬ ಪಂಡಿತ ದೊರಕಿದ. ದೊರಕಿದ ಮುಹೂರ್ತವೇ ಸುಮುಹೂರ್ತವೆಂದು ಕಳುಹಿಸಿಬಿಟ್ಟೆ. ವೆಂಕು ನಿನ್ನ ಚೊಚ್ಚಲ ಮಗನೂ ನಿಜ, ನಾನವನ ತಮ್ಮನೂ ನಿಜ. ಅವನ ಉನ್ಮಾದವನ್ನು ಗುಣಮಾಡಬೇಕೆಂಬ ಲವಲವಿಕೆ ನಿನ್ನಲ್ಲಿ ಎಷ್ಟಿದೆಯೋ ಅಷ್ಟೆ ನನ್ನಲ್ಲಿಯೂ ಇದೆ. ಹೀಗಾಯಿತಲ್ಲ ಎಂದು ನೀನು ಕೊಡ ಕೊಡ ಕಣ್ಣೀರು ಸುರಿಸಿದರೆ, ನಾನು ಕಣ್ಣೀರು ಸುರಿಸದೆ, ನೀರು ಸುರಿಸುವಂತೆ ಹಣ ಚೆಲ್ಲಿ ಅವನ ರೋಗೋಪಶಮನ ಮಾಡುವ ದೀಕ್ಷೆ ವಹಿಸಿದ್ದೇನೆ ನಿನ್ನ ಕಣ್ಣೀರನ್ನು ನೋಡಿ ಪಲಾಯನ ಮಾಡುವ ರೋಗ ವದು, ಎಂಬ ಅಭಿಪ್ರಾಯವಿದ್ದರೆ, ಆತನನ್ನು ಬರಿಸುತ್ತೇನೆ. ನೀವಿಬ್ಬರೂ ಈ ಮನೆಯಲ್ಲಿಯೆ ಕುಳಿತುಕೊಳ್ಳಿ. ನಾನಂತೂ ಒಳಗೆ ಕಾಲಿಡುವಂತಿಲ್ಲ. ನಿಮ್ಮ ಖರ್ಚಿಗೇನು ಬೇಕೋ ಅದನ್ನು ಮನೆಯ ಪಾಗಾರದ ಹೊರಗೆ ನಿಂತು ಒಳಗೆ ಎಸೆದುಬಿಡುತ್ತೇನೆ. ನನಗೆ ಪ್ರಾಣದಾಶೆಯುಂಟು. ಇನ್ನು

ಹತ್ತು ವರ್ಷವಾದರೂ ಬದುಕಬೇಕೆಂದುಂಟು. ನೀನೂ ಚೊಚ್ಚಲ ಮಗನೂ ಸುಖವಾಗಿ ಇದ್ದುಕೊಳ್ಳಿ. ಅವನ ಬುದ್ಧಿ ಸ್ವಲ್ಪವಾದರೂ ತಿಳಿದ ಮೇಲೆ, ಪ್ರಾಣಭೀತಿ ಇಲ್ಲವೆಂದಾದ ಮೇಲೆ, ನಾನೂ ಬರುತ್ತೇನೆ.

ರಾಧಮ್ಮ ದಂಗುಬಡಿದಂತಾದಳು. ಸ್ವಲ್ಪ ಸಿಟ್ಟು ಬಂಪರೆ, ಶ್ರೀಧರನು ಗುರಿನೋಡಿ ಹೊಡವ ವಾಗ್ಬಾಣಗಳಿಂದ ಆಗುವ ನೋವು ಅಷ್ಟಿಷ್ಟಲ್ಲ ತಾನಾಡಿದುದು ತಪ್ಪೆಂದು ರಾಧಮ್ಮ ಕ್ಷಮೆ ಬೇಡಿದಳು

ರಾಧಮ್ಮ – ಹಾಗಲ್ಲ ಮಗು ನಾನು ಹೇಳಿದುದು . .

ಶ್ರೀಧರ – ನೀನು ಹೇಗೂ ಆಡಿರಬಹುದು ತಾಯಿ. ಅದು ನನಗ ಬೇಡ. ನಾನು ಸೂಚಿಸಿದ ಎರಡು ದಾರಿಗಳಲ್ಲಿ ಯಾವುದು ಸಮಂಜಸವೆಂದು ನಿನಗೆ ತೋರುವುದೋ ಅದನ್ನು ಹಿಡಿಯೋಣ

ರಾಧಮ್ಮ – ನನಗೇನು ಗೂತ್ತು-ಹೆಣ್ಣುಹೆಂಗುಸಿಗ?

ಶ್ರೀಧರ – ಹಾಗಾದರೆ ನನ್ನ ಮಾತಿನಲ್ಲಿ ಅವಿಶ್ವಾಸವೇಕೆ?

ರಾಧಮ್ಮ.– ಅವಿಶ್ವಾಸವಿಲ್ಲ. ನನ್ನೆದೆಯ ಬೇನೆಯನ್ನು ಹೇಳಿಕೊಂಡೆ ನಷ್ಟೆ.

ಶ್ರೀಧರ:– ವೆಂಕುವಿನ ಹುಚ್ಚಿನ ಸಂಗಡ ಅದಕ್ಕೂ ಮದ್ದು ಮಾಡಿ ಸೋಣ ಎಂದೆನಲ್ಲ.

ರಾಧಮ್ಮ :– ನಿನಗ ಮೆಚ್ಚಿದಂತೆ ಮಾಡು ಮಗು.

ಶ್ರೀಧರ:– ನನ್ನ ಮೆಚ್ಚಿಗೆ ಹೇಗೂ ಇರಬಹುದು. ನಿನ್ನದು ಹೇಗೆ? ಎಂದು ಕೇಳುತ್ತೇನೆ.

ರಾಧಮ್ಮ.– ನೀನು ಹೇಳಿದಂತೆಯೆ. ಮತ್ತೇನು?

ಶ್ರೀಧರ:– ಅಣ್ಣನ ಪಾಡು ಹಾಗಾಯಿತು. ಪಾರ್ವತಿಯ ಸುದ್ದಿ ಗೊತ್ತಿದೆಯೊ?

ರಾಧಮ್ಮ :– ಏನದು?

ಶ್ರೀಧರ:– ಹಳ್ಳಿಯ ವಾಸದಿಂದ ಅವಳಿಗೆ ಒಂದಿಷ್ಟೂ ಪ್ರಯೋಜನ ವಾಗಲಿಲ್ಲ.

ರಾಧಮ್ಮ :– ನಾನಿನ್ನೂ ಸಾಯಲಿಲ್ಲ.

ಶ್ರೀಧರ:– ಈಗ ಆಕೆಗೆ ಹಸೆ ಬಿಟ್ಟು ಏಳುವ ಶಕ್ತಿಯೂ ಇಲ್ಲ.

ರಾಧಮ್ಮ :– ಅಯ್ಯೋ ದೇವರೇ! ಇನ್ನೀ ಜನ್ಮದಲ್ಲಿ ಯಾವ ಯಾವ ಬವಣೆ ಪಡುವುದಕ್ಕಿದೆಯೊ?

ಶ್ರೀಧರ.– ಯಾರೇನು ಮಾಡಲಾಗುತ್ತದೆ ತಾಯಿ? ಪ್ರಯತ್ನಮಾಡ ಬೇಕು ಮೃತ್ಯುವಿನೊಡನೆ ಹೋರಾಡಬೇಕು

ರಾಧಮ್ಮ – ಡಾಕ್ಟರರನ್ನು ವಿಚಾರಿಸಿದಯೊ?

ಶ್ರೀಧರ·- ಹೌದು ವೆಂಕೋಬರಾಯರು ಎಲ್ಲವನ್ನೂ ಬಿಚ್ಚಿ ಹೇಳುವು ದಿಲ್ಲ. ಹೇಳುವುದಕ್ಕೆ ಅವರಿಗೆ ಸಂಕೋಚ, ವ್ಯಸನ, ಆ ಪುಣ್ಯಾತ್ಮನಿಗೆ. ಬೇರೆ ಡಾಕ್ಟರರಲ್ಲಿ ಕೇಳಿದಾಗ ಕೂಡಲೆ ಮದನಪಳ್ಳಿಗೆ ಕಳುಹಿಸಿದರೆ ಒಂದು ವೇಳೆ ಬದುಕಲೂ ಬಹುದು. ಎಂದರು

ಮದನಪಳ್ಳಿಯ ಹೆಸರನ್ನು ಕೇಳಿದೊಡನ ರಾಧಮ್ಮ ಬೆಚ್ಚಿಬಿದ್ದಳು

ಶ್ರೀಧರ – ಹೆದರಬೇಡ ತಾಯಿ! ಹದರಿ ಮಾಡುವುದೇನು? ನಾಳೆಯೇ ಹೊರಡುತ್ತಿದ್ದೆ. ಆದರ ಕೆಲಸ ಬಹಳವಾಗಿವೆ ಬಿಟ್ಟು ಹೋಗುವುದಕ್ಕೆ ಆಗುವುದಿಲ್ಲ ಪಾರ್ವತಿಯದೂ ಒಂದು ಜೀವವಲ್ಲವೆ? ಕೊನೆಯ ವರೆಗೆ ಬದುಕಿಸಲು ಭಗೀರಥ ಪ್ರಯತ್ನ ಮಾಡುತ್ತೇನ

ವೆಂಕಟರಾಯನ ಉನ್ಮಾದದೊಡನೆ ಖಾಡಾಖಾಡಿ ಹೋರಾಡಲು ಮಲೆ ಯಾಳದ ಯುದ್ಧರಂಗ. ಪಾರ್ವತಿಯ ಕ್ಷಯರೋಗವನ್ನು ಮುರಿದು ಮುಕ್ಕುವುದಕ್ಕೆ ಮದನಪಳ್ಳಿಯ ಸಮರಭೂಮಿ. -ರಾಧಮ್ಮನಿಗೆ ಏನು ಮಾಡುವುದೆಂದು ತಿಳಿಯಲಿಲ್ಲ.

ಶ್ರೀಧರನು ಸಹಾಯಕ್ಕೆ ಬಂದನು.– ಕಳವಳಪಡಬೇಡ ತಾಯಿ, ಕಳವಳ ಪಡಬೇಡ. ಪ್ರತಿಯೊಂದಕ್ಕೂ ವ್ಯವಸ್ಥೆಮಾಡಿದ್ದೇನೆ. ಇನ್ನು ಎರಡು ಮೂರು ದಿವಸಗಳಲ್ಲಿ ಪಾರ್ವತಿ, ಅವಳ ತಮ್ಮ, ಒಬ್ಬ ಅಡಿಗೆಯವನು, ಸಾಧ್ಯವಾದರೆ ನೀನೂ ಹೊರಡಬೇಕು ಇಲ್ಲಿ ಒಂದು ಏರ್ಪಾಡು ಮಾಡಿ, ನಾನೂ ನಿಮ್ಮ ಹಿಂದೆ ನಾಲ್ಕಾರು ದಿವಸಗಳಲ್ಲಿಯೇ ಹೊರಡುತ್ತೇನೆ. ಅತ್ತಿಗೆಯ ವಿಷಯ ದಲ್ಲಿಯೂ ನಿನಗೆ ಚಿಂತೆ ಬೇಡ. ಆ ಮಲೆಯಾಳಿ ಒಪ್ಪಿದರೆ ಅಣ್ಣನನ್ನೂ ಅವ ಳನ್ನೂ ಹಳ್ಳಿಯಲ್ಲಿಯೇ ಇರಿಸಿ ಮದ್ದು ಮಾಡಿಸುತ್ತೇನೆ. ಮಕ್ಕಳಲ್ಲಿ ಕಿರಿಯ ಮರಿಗಳನ್ನು ಮಾತ್ರ ನೀವು ಕರೆದುಕೊಂಡು ಹೋಗಿ. ಶಾಲೆಗೆ ಹೋಗು

ವವರು ಇಲ್ಲಿಯೇ ಇರಲಿ. ವಿದ್ಯಾರ್ಥಿ ಭವನವೆಂದರೆ ಮನೆಯೇ ಸರಿ. ನಾನೂ ಇಲ್ಲಿಯೇ ಇದ್ದೇನಲ್ಲ . .

ಶ್ರೀಧರನ ಕೈಮಾಟವದು! 'ಕೂಡದು' ಎನ್ನುವ ಧೈರ್ಯ ರಾಧಮ್ಮನಿಗೆ ಎಲ್ಲಿಂದ ಬರಬೇಕು? ರಾಧಮ್ಮನ ಸಂದೇಹಸ್ಥಾನಗಳನ್ನೆಲ್ಲ ಅನುಮಾನದಿಂದ ತಿಳಿದು ಅವನ್ನೆಲ್ಲ ಸಿರಸನ ಮಾಡುವಂತೆ ಆಡಿದ ಅವನ ಮಾತಿಗೆ ಉತ್ತರ ವನ್ನಾದರೂ ಕೊಡುವುದೇನು? ರಾಧಮ್ಮನನ್ನು ಮೌನರೋಗ ಹಿಡಿಯಿತು

ಶ್ರೀಧರ:– ವೆಂಕುವಿನ ಸಮಾಚಾರ ಗುಟ್ಟಾಗಿರಲಿ ಅವನ ಅವಮಾನ ನಮ್ಮದೇ ಅಲ್ಲವೆ?

ರಾಧಮ್ಮ:– ಹೌದು.

ಶ್ರೀಧರ:– ನಾನೀಗ ಹೋಗುತ್ತೇನೆ ತಾಯಿ. ಕಲಸಗಳ ಅಡಚಣೆ ಅಪರಿಮಿತವಾಗಿದೆ. ತಲೆತುರಿಸುವುದಕ್ಕೆ ಅವಕಾಶವಿಲ್ಲ ಮದನಪಳ್ಳಿಗೆ ಹೋಗುವಂತೆ ಪಾರ್ವತಿಯನ್ನು ಪ್ರೋತ್ಸಾಹಿಸಬೇಕಾಗಿದೆ. ಮನೆಯ ವಿಷಯ ದಲ್ಲಿ ಜಾಗ್ರತೆ!

ರಾಧಮ್ಮ: ದೇವರು ಕಂಡಂತಾಗುತ್ತದೆ.

ಶ್ರೀಧರನು ಕೂಡಲೆ ಹೊರಟ. ವೆಂಕಟರಾಯನು ಹುಚ್ಚು ಹಿಡಿದು ಮಂಗಳೂರಿಗೆ ಬಂದುದರಿಂದ ಅವನೆದೆಗೆ ಸಿಡಿಗುಂಡು ಹೊಡೆದಂತಾಯಿತು. ಅದಕ್ಕೆ ಪ್ರತಿಯಾಗಿ ಎರಡು ಗುಂಡುಗಳನ್ನು ರಾಧಮ್ಮನ ಕಡೆಗೆಸೆದು ಶ್ರೀಧರನು ಬೀಳ್ಕೊಂಡನು.

# ಇಪ್ಪತ್ತನೆಯ ಪ್ರಕರಣ

ಆದಿತ್ಯವಾರ ತನ್ನ ಮನೆಗೆ ಹೋಗಿದ್ದ ಚಂಚಲೆ ಹಿಂದಿರುಗುವಾಗ ಅವಳ ಮನೋಭಾವ ಮುಖಲಕ್ಷಣಗಳಲ್ಲಿ ಏನಾದರೂ ವಿಶೇಷತೆ ಇರಬಹುದೆಂದು ಶ್ರೀಧರನು ಭಾವಿಸಿದ್ದರೂ ಅವಳ ಪ್ರಫುಲ್ಲ ಮುಖಮಂಡಲವು, ಅವನ ಸಂದೇಹಗಳನ್ನು ಮೆಟ್ಟಿ ತುಳಿದು, ಆತ್ಮಶಕ್ತಿಯಲ್ಲಿ ತನಗಿರುವ ವಿಶ್ವಾಸವನ್ನು ಮತ್ತಷ್ಟು ಬಲಪಡಿಸಿತು

ಮಾತಿನಲ್ಲಿ ನಗುವನ್ನು ನೂಸುತ್ತಿದ್ದ ಚಂಚಲೆಯನ್ನು ನೋಡಿ 'ಏನೇ ಚಂಚಲೆ! ಸಮಾಚಾರವೇನು?'' ಎಂದು ಕೇಳಿದನು

ಚಂಚಲೆ – ವಿಶೇಷವೇನೂ ಇಲ್ಲ.

ಶ್ರೀಧರ – ಲೋಕೈಕವೀರ, ಮೋಹನರಾಯ, ನಿನ್ನ ಬಂಧು ಅಥವಾ ಬಲಗೈಯ ಬಂಟ, ಏನು ಮಾಡುತ್ತಾನೆ?

ಚಂಚಲೆ·– ಮೂಢ ಪ್ರಾಣಿ ಅದೇನು ಮಾಡೀತು?

ಶ್ರೀಧರ – ಮೂಢರಿಗೆ ಸಾಹಸ ಬಂದರೆ, ಮಂಗನಿಗೆ ಮರುಳು ಹಿಡಿದಂತೆ . . . ನೀನೂ ಸ್ವಲ್ಪ ಹೇಳಿದೆಯೊ . . .

ಚಂಚಲೆ – ಹೇಳಿದೆ.

ಶ್ರೀಧರ.– ನೀನು ಬುದ್ಧಿ ಹೇಳಿದ ಕ್ರಮ ಹೇಗೆ? ಕೇಳಿಬಿಡಲೆ?

ಚಂಚಲೆ·– ಸುಮ್ಮನೆ, ನಮ್ಮ ಸಂಬಂಧವನ್ನು ತಪ್ಪಾಗಿ ತಿಳಿದು, ಹೊದೆಯುತ್ತೇನೆ ಬಡಿಯುತ್ತೇನೆ – ಎಂದು ಬೊಗಳಿಕೊಂಡು ಬರಬೇಡ ಮಹಾರಾಯ! ಎಂದೆ

ಶ್ರೀಧರ: 'ನಮ್ಮ ಸಂಬಂಧ' ಎಂದು ನೀನು ಯಾವುದನ್ನು ಹೇಳುತ್ತೀಯೋ ಆ ವಿಷಯವನ್ನು, ಅವಶ್ಯವಾದರೆ ಆತನು ತಪ್ಪಾಗಿಯೆ ತಿಳಿಯಲಿ . . . ಆದರೆ ನನ್ನ ಎಲುಬಿನ ಚೂರ್ಣ ಅವನಿಗೆ ಬೇಕಂತೆ . . ಅದರ ಸುದ್ದಿಯೇನು?

ಚಂಚಲೆ:– ಪ್ರಪಂಚವೆಂದರೆ ಏನೆಂದು ಗೊತ್ತಿಲ್ಲದ ಪ್ರಾಣಿ.

ಶ್ರೀಧರ:– ಪ್ರಪಂಚದ ಪರಿಚಯವಾಗಬೇಕಾದರೆ, ಅಲ್ಲಿ ದೊರೆವ ನಾಲ್ಕು

ಒದೆತಗಳ, ಮುಷ್ಟಿಮರ್ದನಗಳ ಸವಿ ನೋಡಬೇಕು. ಆಗ ಪ್ರಪಂಚವು ಎಂತಹದೆಂದು ತಿಳಿಯುತ್ತದೆ. ನೀನು ಬೋಧಿಸದಿದ್ದರೂ ತಿಳಿದುಬರುತ್ತದೆ.

ಚಂಚಲೆ·- ಶ್ರೀಧರರಾಯರಲ್ಲಿ ಮಾಫಿ ಬೇಡು. ಇನ್ನುಮುಂದೆ ಇಂತಹ ಅವಿವೇಕ ಮಾಡುವುದಿಲ್ಲವೆಂದು ಭರವಸೆ ಕೊಡು; ಕಾಲು ಹಿಡಿದು ಬೇಡಿಕೋ ಎಂದು ಪ್ರಾರ್ಥಿಸಿಕೊಂಡೆ. ನನ್ನ ಕಾಲು ಹಿಡಿದು ದಮ್ಮಯ್ಯ ಎಂದ.

ಶ್ರೀಧರ:- ನಿನ್ನ ಕಾಲು ಹಿಡಿದರೆ ನನ್ನ ಕಾಲು ಹಿಡಿದಂತೆಯೇ ಸರಿ. ಅವನು ಮತ್ತೇನು ಬೇಕಾದರೂ ಮಾಡಲಿ. ಬಡ ಶ್ರೀಧರನ ಮೇಲೆ ಬಲ ಪ್ರಯೋಗಿಸುವ ಸಾಹಸಕ್ಕೆ ಮುಂದುವರಿಯದಿರಲಿ. ಅಷ್ಟೆ ಬೇಕಾದುದು ನನಗೆ . . . ಇರಲಿ, ನಿನ್ನ ತಾಯಿ ಏನು ಮಾಡುತ್ತಾಳೆ?

ಚಂಚಲೆ – ಸುಖವಾಗಿದ್ದಾಳೆ

ಶ್ರೀಧರ:– ನಿನ್ನ ಅಗಲಿಕೆಯಿಂದ ಕೊರಗುತ್ತಾಳೋ?

ಚಂಚಲೆ.– ಬೇಸರಾದೀತು ಹೊರಗೆ ತೋರಿಸುವುದಿಲ್ಲ.

ಶ್ರೀಧರ – ಅದನ್ನೆ ಕೇಳಿದೆ ನಾನು, ಅವಳಿಗೆ ಬೇಸರಾದೀತು . . . . ಪಾಪ! ಮುದುಕಿ! ಇಂದೋ ನಾಳೆಯೊ ಯಮಲೋಕಕ್ಕೆ ಗಂಟುಮೂಟೆ ಕಟ್ಟಿ ಹೊರಡುವಾಕೆಗೆ ಇನ್ನೆಷ್ಟು ಕ್ಲೇಶಪಡುವುದು? ನೀನು ಅಲ್ಲಿಗೆ ಹೋಗಿ ನಾಲ್ಕು ದಿನ ಇದ್ದುಬಿಡು.

ಚಂಚಲೆ:- ಹಾಗೆಂದರೆ?

ಶ್ರೀಧರ:- ಮತ್ತೇನೂ ಇಲ್ಲ. ನಿನಗೆ ಪಾರ್ವತಿಯ ಅವಸ್ಥೆ ಗೊತ್ತಿದೆ. ಅವಳನ್ನು ಆದಷ್ಟು ಬೇಗನೆ ಮದನಪಳ್ಳಿಗೆ ಕಳುಹಿಸಬೇಕು. ನಿನ್ನ ಭಗೀರಥ ಪ್ರಯತ್ನ . . . ನನ್ನ ಅಹೋರಾತ್ರದ ಪರಿಶ್ರಮ . . . ಯಾವುದು ಪ್ರಯೋಜನಕ್ಕೆ ಬೀಳಲಿಲ್ಲ ಚಂಚಲೆ! ಪ್ರಾಣವುಳಿಯಬೇಕಾದರೆ ಆಕೆಯನ್ನು ಅಲ್ಲಿಗೆ ಕಳುಹಿಸಬೇಕೆಂದು ಡಾಕ್ಟರರ ಒತ್ತಾಯ.

ಚಂಚಲೆ. - ಹುಂ.

ಶ್ರೀಧರ:- ಅವಳಿರುವಷ್ಟು ಕಾಲ ನೀನೂ ಇಲ್ಲಿದ್ದುಬಿಡು. ಅವಳು ಹೋದೊಡನೆ ಈ ಮನೆ ಖಾಲಿಯಾಗುತ್ತದೆ. ಆದರೆ ಕೆಲಗಾಲ ನಾನಿಲ್ಲರುವುದಕ್ಕೆ ಆಗುವುದಿಲ್ಲ. ಎಷ್ಟೆಂದರೂ ಇದುವರೆಗೆ ಒಟ್ಟಿಗೆ ಇದ್ದು ನನಗೆ

ಗಂಡನೆಂಬ ಸಂಭಾವನೆ ಕೊಟ್ಟ ಹೆಣ್ಣಲ್ಲವೆ? ನಾನೂ ಹೋಗಿ ಒಂದು ತಿಂಗಳ ಮಟ್ಟಿಗೆ ಅಲ್ಲಿದ್ದು ಬರುತ್ತೇನೆ.

ಚಂಚಲೆ:– ನಾಲ್ಕು ದಿನವೆಂದೇನು? ಈ ನಿಮಿಷ ಹೊರಡುವುದಕ್ಕೂ ನಾನು ಸಿದ್ಧಳೆ.

ಹೀಗೆ ಹೇಳುವಾಗ ಚಂಚಲೆಯ ಮುಖ ರಕ್ತವರ್ಣವಾಗಿದ್ದಿತು. ಹೋಗಿಬಿಡುತ್ತೇನೆಂದುದು ಶ್ರೀಧರನ ಹೃದ್ಗತಕ್ಕಲ್ಲದೆ ಯಥಾರ್ಥಕ್ಕಲ್ಲ. ಮೋಹನನ ಮಾತು ಸರಿಯೆ ತಪ್ಪೆ? ಎಂಬುದು ಇನ್ನೂ ಆಕೆಗ ಇತ್ಯರ್ಥಕ್ಕೆ ಬಂದಿರಲಿಲ್ಲ. ಇತ್ಯರ್ಥಕ್ಕೆ ತರುವ ಪ್ರಯತ್ನ ಆಕೆಯದು.

ಶ್ರೀಧರ:– (ಉದ್ವೇಗವನ್ನು ನಟಿಸಿ) ಇದೇನು ಹುಚ್ಚು? ಸ್ವರ್ಗಾಧಿದೇವತೆಯನ್ನು ಹೊಡೆದೋಡಿಸಿ, ಆ ಸ್ವರ್ಗವನ್ನು ನರಕಕ್ಕಿಂತಲೂ ಕಡೆಯಾಗಿಸುವುದಕ್ಕೆ ಯಾರು ಒಪ್ಪಿಯಾರು? ಇನ್ನು ನಾಲ್ಕು ದಿವಸಗಳ ವರೆಗಾದರೂ, ಈ ಮನೆ, ಈ ಮಠಾರ, ನೆರೆಹೊರೆಯ ಪ್ರಾಕೃತಿಕ ಸನ್ನಿವೇಶಗಳು ಸ್ವರ್ಗೀಯ ಸುಖದಲ್ಲಿ ಮುಳುಗುತ್ತಿರಲಿ!

ಚಂಚಲೆಯ ಮನಮೆಚ್ಚಿಸುವುದಕ್ಕಾಗಿ ಶ್ರೀಧರನಾಡಿದ ಅಲಂಕೃತ ಭಾಷೆಯು ಆಕೆಯ ಸಂದೇಹವನ್ನು ಪ್ರಬಲಗೊಳಿಸಿತು

ಚಂಚಲೆ – ಒಂದು ಸಮಾಚಾರವನ್ನು ನಿಮ್ಮಲ್ಲಿ ಕೇಳಬೇಕೆಂದಿದ್ದೇನೆ.

ಶ್ರೀಧರ – ಅವಶ್ಯವಾಗಿ ಕೇಳು. ಈ ಬಾಯಿ ಎಷ್ಟು ಮಾತಾಡೀತು.

ಚಂಚಲೆ:– ನೀವು ಅಂದು ಹೇಳಿದ ಮಾತು?

ಶ್ರೀಧರ:– ನೀನು ನಿಜವಾಗಿಯೂ ಚಂಚಲೆಯೆಂದೇ ಭಾವಿಸುತ್ತೇನೆ. ನಾನು ಕೊಟ್ಟ ಮಾತಿಗೆ ಏನು ಕೊರತೆ ಬಂದಿದೆ? ಅದನ್ನು ಪಾಲಿಸುತ್ತೇನೆಯೋ ಇಲ್ಲವೋ ಎಂದು ನೋಡುವ ಸಮಯವು ಬೇಗನೆ ಬಂದುಬಿಡುವುದು. ನಾನು ಮೊದಲೇ ಹೇಳಿರಲಿಲ್ಲವೆ? ಆಕೆಯಿನ್ನೂ ಜೀವಂತಳಾಗಿದ್ದಾಳೆ. ಮನ ಮೆಚ್ಚಿದವಳು ನನ್ನ ಕೈ ಹಿಡಿವಳು, ಆಕೆ ಚಂಡಾಲ ಸ್ತ್ರೀಯಾಗಿದ್ದರೂ ಚಿಂತೆಯಿಲ್ಲ. ಎಂಬುದು ನಿನಗರಿಯದ ಸಂಗತಿಯಲ್ಲ. ಅವಳ – ನನ್ನ ಸಂಬಂಧ ಶೃಂಖಲೆ ಕಡಿದುಬಿಡುವುದು. ಮತ್ತೆ ಸ್ವರ್ಗ ಮರ್ತ್ಯ ಪಾತಾಳಗಳ ಒಡೆಯರು – ನಾನೂ ನೀನೂ!

ಮೋಹನನು ಪರಹೃದಯವೇದಿಯೆ? ಶ್ರೀಧರನು ಹೀಗೆಯೇ ವರ್ತಿಸ ಬಹುದು; ಇಂತಹ ಮಾತನ್ನೆ ಆಡಬಹುದು; ಎಂಬುದನ್ನು ಹೇಳಿದ್ದನಲ್ಲ! ಅದರಂತೆಯೇ ಆಡುತ್ತಾನೆ ಈತ! ಚಂಚಲೆಯ ಮನಸ್ಸು ದೋಲಾಯ ಮಾನವಾಗಿದ್ದುದನ್ನರಿತು ಶ್ರೀಧರನು ಸ್ತಿಮಿತಗೊಳಿಸಲು ಹೀಗೆಂದ –

ನನ್ನ ಹೃದಯದ ಮೂಲೆ ಮೂಲೆಗಳನ್ನು ಹೊಕ್ಕು ಪರೀಕ್ಷಿಸಿದುದಾಯಿತು ಇನ್ನೂ ಸಂದೇಹವೆ? ನನ್ನ ಮನಸ್ಸಿಗೆ ಒಳವ್ಯೆ ಹೊರವ್ಯೆ ಎಂದಿಲ್ಲ. ಚಂಚಲೆ! ನಿನಗಾಗಿ ಈ ಪ್ರಪಂಚವನ್ನೇ ಮಾರಲು ಸಿದ್ಧನಾಗಿದ್ದೇನೆ. ನನ್ನ ಸ್ವರ್ಗ ಮೋಕ್ಷಗಳಿಗೆ ಕೊನೆಯ ನಮಸ್ಕಾರ ಹೊಡಯಲು ಸಿದ್ಧನಾಗಿದ್ದೇನೆ. ಆದರೆ ಕೊಟ್ಟ ಮಾತನ್ನು ಈಗಲೆ ಪಾಲಿಸುವುದಕ್ಕ ಅನುಕೂಲತೆಯಿಲ್ಲ ಎಂಬುದು ನಿನಗೇ ಗೊತ್ತಿದೆ. ನನ್ನೆದೆಯ ಬೀಗದ ಕೈ ನಿನ್ನ ಮುಷ್ಟಿಯೊಳಗಿದೆ. ಆ ಸಂದರ್ಭ ಬಂದಾಗ ನೀನೆ ಬಾಗಿಲು ತೆರೆ, ಒಳಗೆ ಪ್ರವೇಶಿಸು, ಒಡತಿ ಯಾಗಿ ಆಳು ಈ ನಾಲ್ಕು ದಿನ ಇಲ್ಲಿ ಸುಖವಾಗಿ ಇರೋಣ ಮತ್ತೆಯೂ ಹಾಗೆಯೇ! ಮೋಹನನ ದಾಳಿಯಿಲ್ಲದಿದ್ದರೆ!

ತನ್ನ ಮತ್ತು ಶ್ರೀಧರನ ಪ್ರೇಮಪಥದಲ್ಲಿ ಕ್ರಮಿಸಬೇಕಾದುದಕ್ಕಿಂತ ಹೆಚ್ಚು ದೂರ ಸರಿದುದಾಯಿತು ಹೆಣ್ತನವೆಂಬ ಮೊನಲು ಹೂವನ್ನು ಆತನ ಪಾದವೇದಿಕೆಯಲ್ಲಿಟ್ಟು ಸಮರ್ಪಿಸಿದುದಾಯಿತು ಕುಲಟೆ ಎಂದು ಎನಿಸಿಕೊಂಡುದಾಯಿತು ಇನ್ನೇನು ಮಾಡೋಣ? ಆಗುವುದಲ್ಲ ಆದ ಮೇಲೆ ಬುದ್ಧಿವಂತಿಕೆಯಿಂದ ವ್ಯವಹರಿಸುವುದೇ ಒಳ್ಳೆಯದು ಇನ್ನಾದರೂ ಎಚ್ಚರ ತಪ್ಪದೆ ನಡೆದರೆ 'ಶ್ರೀಧರನ ಕೈಬೊಂಬೆ ಈಕೆ' ಎಂಬ ಲೋಕ ವಾದವು ಬಹಿರಂಗವಾಗಿ ಬಾರದಂತೆ ನೋಡಿಕೊಳ್ಳಬಹುದು. ಆತನ ಹೆಂಡತಿ ಇರುವಷ್ಟು ಕಾಲ ದಾದಿಯಾಗಿದ್ದಳು; ಇದರಲ್ಲೇನು ತಪ್ಪು? ಎಂಬ ಪ್ರಶ್ನೆಗೆ ನ್ಯಾಯವೇದಿಗಳಾದ ಸಭ್ಯ ಮನುಷ್ಯರಾರೂ 'ತಪ್ಪು' ಎಂದು ಉತ್ತರ ಕೊಡಲಾರರು. ಹಾಗಲ್ಲದೆ ಈಗಲೆ ಚಂಡಿ ಹಿಡಿದರೆ? ಶ್ರೀಧರನು ಯಾವುದಕ್ಕೂ ಬೆದರದ ಗಂಡು ದೆವ್ವ! ಇಂದು ತನಗಾರು ಸಹಾಯರಾಗಿರು ವರೋ, ಅವರ ನಿಪಾತವನ್ನು ಸಾಧಿಸಿ, ಮರಿಗಿಳಿಯ ರೆಕ್ಕೆಗಳನ್ನು ಕಿತ್ತು ಬಿಸಾಡುವಂತೆ, ತನ್ನ ಸಹಾಯ ಬಲಗಳನ್ನು ಮುರಿದು ಹಾಕಿ, ಮನಬಂದಂತೆ ತನ್ನ ಮೇಲೆ ಅಧಿಕಾರ ಪ್ರದರ್ಶನ ಮಾಡಿದರೆ ಗತಿಯೇನು? ತನ್ನ ಜೀವನ

ದಲ್ಲಿ ಇದೊಂದು ಸಂಧಿಕಾಲವೆಂದು ಚಂಚಲೆಗೆ ಅವಗತವಾಯಿತು. ಅವಿವೇಕದಿಂದ ವರ್ತಿಸಿದರೆ ಕೆಡುಕಲ್ಲದೆ ಲೇಸಿಲ್ಲ; ಸಂದರ್ಭ ಬರುವಾಗ, ಅವನ ಕುತ್ತಿಗೆ ಹಿಡಿಯಬೇಕು. ಎಂಬ ವ್ಯವಹಾರದೃಷ್ಟಿಯಿಂದ ಶ್ರೀಧರನ ವ್ಯಾತಿಗೆ ಒಪ್ಪಿಗೆ ಕೊಟ್ಟಂತೆ ತೋರಿಸಿಕೊಂಡಳು.

'ಹೌದು, ನೀವೀಗ ಕಷ್ಟದಲ್ಲಿದ್ದೀರಿ ನನಗೆಲ್ಲ ತಿಳಿಯಿತು. ನಿಮ್ಮ ಅಪ್ಪಣೆಯಂತೆ ಇಲ್ಲಿರುವಷ್ಟು ಕಾಲ ಸುಖದಿಂದಿರೋಣ. ನನ್ನನ್ನು ಕೈಬಿಡಬೇಡಿರಿ' ಎಂದು ಚಂಚಲೆ ಗಂಭೀರವಾಕ್ಯಗಳಲ್ಲಿ, ಹೃದಯ ಸ್ವಚ್ಛತೆಯ ಸಾಕ್ಷಿಯಾದ ಕಂಬನಿಯನ್ನು ಸುರಿಸಿದಳು.

'ಹುಡುಗಿಯರೆಂದರೆ ಹೀಗಿರಬೇಕು ಚಂಚಲೆ! ಪುರುಷರ ಅಭಿಪ್ರಾಯಗಳನ್ನು ತಿಳಿಯಲಾರದ ಹುಡುಗಿಯರು ಹುಡುಗಿಯರೆ?' ಎಂದು 'ನಿಷ್ಕಲ್ಮಷಾನುರಾಗ'ಕ್ಕೆ ತಾನೂ ಸಾಕ್ಷ್ಯ ಕೊಟ್ಟ.

o o o o o

ಇನ್ನು ಮದನಪಳ್ಳಿಯ ಪ್ರವಾಸದ ವಿಷಯವಾಗಿ ಹೆಂಗುಸರನ್ನು ಮೆಚ್ಚಿಸುವ ಕೆಲಸವನ್ನು ಒಂದೇ ಗಳಿಗೆಯಲ್ಲಿ ಶ್ರೀಧರನು ನಿರ್ವಹಿಸಿಬಿಟ್ಟನು. ಈ ಕೆಲಸವು ಅತಿ ಸುಲಭವಾಗಿತ್ತು. ಒಂದರ ಹಿಂದೊಂದು ಕಾರಣವಿತ್ತು – ಡಾಕ್ಟರರ ಬೋಧನೆ; ತಾಯಿಗೆ ಈ ಕುರಿತು ಇರುವ ಕುತೂಹಲ; ತಾನೇ ಹೊರಡುತ್ತೇನೆ ಮದನಪಳ್ಳಿಗೆ – ಎಂದಾಕೆ ಪ್ರದರ್ಶಿಸಿದ ಉತ್ಸಾಹ; ವೆಂಕಟರಾಯನ ಆಗಮನ; ಅತ್ತಿಗೆ ಅವನ ಶುಶ್ರೂಷೆಯಲ್ಲಿರಬೇಕಾದ ಅವಶ್ಯಕತೆ; ತಾನು ಸ್ವತಃ ಮದನಪಳ್ಳಿಗೆ ಹೋಗುವ ಸಂಕಲ್ಪ; ರಾಮಣ್ಣನನ್ನು ಬರಿಸಿ, ತನ್ನ ಸಕಲ ಕಾರಭಾರಗಳನ್ನೂ ಆತನಿಗೊಪ್ಪಿಸಿ, ಅಣ್ಣ ಅತ್ತಿಗೆ – ಇಬ್ಬರನ್ನೂ ಅವನ ವಶದಲ್ಲಿಟ್ಟು, ತಾನು ಹೊರಡಬೇಕಾದುದರ ಅನಿವಾರ್ಯತ್ವ... ಇದೆಲ್ಲವನ್ನೂ ವಿವರಿಸಿ ಹೇಳುವಾಗ ಪಾರ್ವತಿ ಪ್ರತ್ಯುತ್ತರ ಕೊಡುವುದು ಏನನ್ನು?

ಕೂಡಲೆ ಹೊರಡುವ ದಿನವೂ ನಿಶ್ಚಯವಾಯಿತು. ಇಲ್ಲಿಂದ 'ಸ್ಟೇಶನಿಗೆ' (ನಿಲ್ದಾಣಕ್ಕೆ) ಹೋಗುವ ವಿಧಾನವೂ ನಿರ್ಣೀತವಾಯಿತು. ಬಂಡಿ ಹತ್ತುವ ದಿವಸ ಮಂಗಳೂರಿಗೆ ಹೋಗಿ, ಮನೆಯನ್ನು ಸಂದರ್ಶಿಸಿ, ಅತ್ತೆ

ಯನ್ನೂ ಮಕ್ಕಳನ್ನೂ ಕರೆದುಕೊಂಡೇ ಪಾರ್ವತಿ ಬಂಡಿ ಏರುವುದು. ಪಾರ್ವತಿಯ ತಮ್ಮ ಅವರ ಸಂಗಡಿಗನಾಗುವುದು, ಶ್ರೀಧರನು ನಿಲ್ದಾಣದ ವರೆಗೆ ಹೋಗಿ ಅವರನ್ನು ಬೀಳ್ಕೊಡುವುದು; ಅನಂತರ ಹೋದ 'ಕಾರಿ' ನಲ್ಲಿಯೆ, ಉನ್ಮಾದದ ಭಯಂಕರಾವಸ್ಥೆಯಲ್ಲಿರುವ ವೆಂಕಟರಾಯನನ್ನು ಹಿಡಿದುಕೊಂಡು ಬಂದು, ಸೀತಮ್ಮನ ವಶದಲ್ಲಿ, ಅದೇ ಹಳ್ಳಿಯ ಅದೇ ಮನೆ ಯಲ್ಲಿ ಇಟ್ಟು ಯಥಾಕ್ರಮವಾಗಿ ಶುಶ್ರೂಷೆ ಮಾಡಿಸುವುದು, ಮೈಕಾವಲಿ ಗಾಗಿ ಒಬ್ಬಿಬ್ಬರು ಆಳುಗಳನ್ನು ಇರಿಸುವುದು—ಇಷ್ಟೆಲ್ಲ ವ್ಯವಸ್ಥೆಗಳು ಒಂದೇ ನಿಮಿಷದಲ್ಲಾಗುವ ಮಾತುಗಳು ಹೊರಬಿದ್ದುವು.

ಪ್ರತ್ಯುತ್ಪನ್ನಮತಿಯಾದ ಕಾರ್ಯದಕ್ಷನಾದ ಶ್ರೀಧರನ ವ್ಯವಸ್ಥಾಕ್ರಮ ವದು. ಯಾರೇನೂ ಆಕ್ಷೇಪವೆತ್ತಲು ಎಡೆ ಇಲ್ಲ, ಇದ್ದರೆ ಕಿವಿಗೊಡು ವವರೂ ಇಲ್ಲ!

## ಇಪ್ಪತ್ತೊಂದನೆಯ ಪ್ರಕರಣ

ಇದುವರೆಗೆ ಸಂಯುಕ್ತ ರಾಜ್ಯಮಂಡಲಿಯಂತಿದ್ದ ಶ್ರೀಧರನ ಕುಟುಂಬವು ವಿಭಕ್ತವಾಗುವ ಆ ದಿನ ಬಂದೆ ಹೋಯಿತು. ಆ ದಿನ ಸೋಮವಾರ. ಬೆಳಗ್ಗೆ ೯॥ ಘಂಟೆಯ ಉಗಿಬಂಡಿಯಲ್ಲಿ, ಪಾರ್ವತಿ ಕ್ಷಯ ರೋಗವನ್ನು ಸುಟ್ಟು ಭಸ್ಮಮಾಡುವ ಮದನಪಳ್ಳಿಗೆ ಪಯಣ ಬೆಳೆಯಿ ಸುವಳು. ರಾಧಮ್ಮ ಅವಳ ಸಂಗಡ ನಡೆಯುವಳು. ಸೀತಮ್ಮ ಮಾತ್ರ ಹಿಂದುಳಿಯುವಳು. ರೆಕ್ಕೆ ಬಲಿತ ಮಕ್ಕಳಿಗೆ ವಿದ್ಯಾರ್ಥಿ ಭವನವಾಯಿತು. ಹಾರಲಾರದ ಮರಿಗಳಿಗೆ ಪಾರ್ವತಿಯ ಸಂಗಡಿಗತನವಾಯಿತು. ಒಂದೇ ಒಂದು ಪ್ರೇಮತಂತುವಿನಿಂದ ಬಂಧಿಸಲ್ಪಟ್ಟಿದ್ದ ಈ ವ್ಯಕ್ತಿಗಳ ಹೃದಯ ಕುಸುಮಗಳಿಗೆ ಒಂದನ್ನೊಂದು ಬಿಟ್ಟು ದೂರ ದೂರ ಉದಿರುವುದೆಂದರೆ ಅದೆಷ್ಟು ವೇದನಾಮಯವಾಗಿದ್ದಿತೆಂದು ಬರೆಯಬೇಕಾಗಿಲ್ಲ. ಆ ದಿನ ಎಲ್ಲರ ಮೊಗವೂ ಮಳೆಮೋಡದಂತಿದ್ದಿತು. ಎಲ್ಲರ ಕಣ್ಣಿನಲ್ಲಿಯೂ ಹನಿ ಹನಿ ಕಂಬನಿ ತಟಕಿಡುತ್ತಿದ್ದಿತು. ಅತ್ತೆಯ ಅಗಲಿಕೆಯು ಸನ್ನಿಹಿತವಾಗಿದ್ದುದ

ರಿಂದ, ಆ ಮೊದಲೆ ಒಮ್ಮೆ ನೋಡಿಬಿಡುತ್ತೇನೆಂದು ಸೀತಮ್ಮ ಆಕೆಯ ಸಂದರ್ಶನಸುಖವನ್ನು ಪಡೆದುಕೊಂಡು, ಕಾಲಿಗೆ ಅಡ್ಡಬಿದ್ದು, ಹರಕೆಯನ್ನು ಹೊಂದಿದ್ದಳು ಶ್ರೀಧರನ ರಾಜ್ಯವ್ಯವಹಾರ ಸೂತ್ರದಲ್ಲಿ ಬಂಧುಗಳು ಅನವಶ್ಯವಾಗಿ ಪರಸ್ಪರ ಮುಖಾವಲೋಕನವನ್ನೆನಗುವುದಕ್ಕೆ ಕಾನೂನೆ ಇರಲಿಲ್ಲವಾದುದರಿಂದಲೂ, ಹೊರಡುವ ಸಂದರ್ಭದಲ್ಲಿ ಅವಳ ದರ್ಶನ ಪುಣ್ಯವು ಪ್ರಾಪ್ತವಾಗುವುದೆಂಬ ನಿರೀಕ್ಷಣೆಯಿರಲಿಲ್ಲವಾದುದರಿಂದಲೂ, ತನ್ನ ಭವಿಷ್ಯಕ್ಕೆ ಬಂದ ದಿನವೇ ಅವಧಿ, ನಾಳೆ ಏನಾಗುವುದೆಂದು ಗೊತ್ತಿಲ್ಲ ವೆಂಬುದರ ಅರಿವು ಸೀತಮ್ಮನ ಮನಸ್ಸಿನಲ್ಲಿ ಪ್ರತಿಕ್ಷಣ ಮಿಂಚುತ್ತಿದ್ದುದರಿಂದಲೂ, ಶ್ರೀಧರನ ವಿರೋಧಕ್ಕೆ ತಲೆಬಾಗದೆ, ಅತ್ತೆಯನ್ನು ಕಂಡು ಪಾದಪ್ರಣಾಮ ಮಾಡಿ, ದೇಹವು ಇಂದಿಗೆ ಪವಿತ್ರವಾಯಿತೆಂದು ಭಾವಿಸಿಕೊಂಡಿದ್ದಳು. ಎದೆಯನ್ನೊಡೆದು, ಕಣ್ಣೀರನ್ನೆಲ್ಲ ಒಮ್ಮೆ ಚೆಲ್ಲಿದಳು. ಅತ್ತೆಯೂ ಹಾಗೆಯೆ; 'ಅಯ್ಯೋ ಮಗಳೇ! ನಮಗೂ ಅಗಲುವ ಕಾಲ ಬಂತೇ' ಎಂದು ಮುಕ್ತ ರೋಧವಾದ ನದೀಪ್ರವಾಹದಂತೆ ಆವೇಶಮಯ ವಾಗ್ಧಾರೆಗಳನ್ನು ಸುರಿಸಿ, ಸೊಸೆಗೆ ಬುದ್ಧಿವಾದಗಳನ್ನೊರೆದು, ಶ್ರೀಧರನ ತಂತುಜಾಲದಲ್ಲಿ ಸಿಲುಕಿಬಿದ್ದ ಬೊಂಬೆಯಂತೆ ಕುಣಿಯಲು ಸಿದ್ಧಳಾಗಿಯೇ ಇದ್ದಳು. ಪಾರ್ವತೀ–ಸೀತೆಯರ ಮರುಕವನ್ನು ಹೇಳಬೇಕಾಗಿಯೆ ಇಲ್ಲ. ಪರಸ್ಪರ ವಿರಹದ ಸಂದೇಹವು ಬಂದ ಮೇಲೆ ಕೆಲವು ರಾತ್ರಿಗಳಿದ್ದುವು. ದಿನಗಳಿದ್ದುವು. ಏಕಾಂತತೆಯಿತ್ತು. ವಾಚಾಲ ಹೃದಯಗಳಿದ್ದುವು ಧಾರಾಳವಾದ ಅಶ್ರು ಪ್ರವಾಹವೂ ಇದ್ದಿತು. ಇವರಿಬ್ಬರ ಆಗಮನಾನಂತರ, ಅಕಾಂಡ ವಿದ್ಯುತ್ ಪ್ರವೇಶದಂತೆ ಅವರ ಮನೆಯೊಳಗೆ ನುಗ್ಗಿದ ಚಂಚಲೆ, ಪಾರ್ವತಿ ಹೊರಡುವ ಮೊದಲೆ ಎಲ್ಲಿಗೋ ಮಾಯವಾಗಿದ್ದಳು

ಪರದೇಶಪ್ರವಾಸಕ್ಕೆ ಹೊರಡುವವರೆಲ್ಲರ ಕ್ರಮವೂ ಒಂದೇ ತೆರನಾ ದುದು. ಇವರೂ ಸೋಮವಾರ ಬೆಳಗ್ಗೆ ಬೇಕುಬೇಕಾದ ಎಲ್ಲ ಸಾಮಾನು–ಸರಬರಾಯಿಗಳನ್ನು ಅಣಿಮಾಡಿಕೊಂಡು ಹೊರಟಿದ್ದರು; ಎಂದಿಷ್ಟೆ ಹೇಳಿದರೆ ಸಾಕು. ಮಳೆಯ ಅಂಗಳದಲ್ಲಿಯೆ ಕಾರು ನಿಂತಿತ್ತು. ಪಾರ್ವತಿ ಬಹು ಪ್ರಯಾಸದಿಂದ ಅದನ್ನೇರಿದಳು. ಹಿಂದಿನ ಆಸನದಲ್ಲಿ ಪಾರ್ವತಿಗೂ ಅವಳ ಪೆಟ್ಟಿಗೆ ಸಾಮಾನುಗಳಿಗೂ ಬೇಕಾದಷ್ಟು ಸ್ಥಳ ಮಾತ್ರ ಇದ್ದಿತಷ್ಟೆ. ಶ್ರೀಧರನು

ಶ್ರೀವರನ ವಾಮಭಾಗದಲ್ಲಿ ಆಸೀನನಾಗುತ್ತಾನೆ. ಸೀತಮ್ಮನಿಗೆ ಅದರೊಳಗೆ ಎಡೆಯಿಲ್ಲವೆಂಬುದು ಸ್ಪಷ್ಟ.

ಕಾರನ್ನೇರುವ ಮೊದಲೆ ಶ್ರೀಧರನು ಅಡಿಗೆಯ ಭಟ್ಟ ಪದ್ದಣ್ಣನನ್ನು ಕರೆದು ಕಿವಿಯಲ್ಲೇನೋ ಹೇಳಿದನು. ಅವನ ಕೈಗೆ ರುಪಾಯಿಗಳನ್ನಿಡುವುದೂ ದೂರಕ್ಕೆ ಗೋಚರವಾಗುತ್ತಿದ್ದಿತು. ಇಬ್ಬರ ಮುಖವೂ ಸ್ವಲ್ಪ ವಿಕಾರವನ್ನು ಹೊಂದಿದ್ದಿತಲ್ಲದೆ, ಇತರರು ತಮ್ಮ ರಹಸ್ಯಭೇದನಕ್ಕಾಗಿ ತವಕಿಸುತ್ತಾರೋ? ಎಂದು ನೋಡುವ ದೃಷ್ಟಿವಿಕ್ಷೇಪದ ಭೀತಿಯೂ ಗೋಚರಿಸುತ್ತಿತ್ತು. ಸೀತಮ್ಮನು ಮಾತ್ರ ತನ್ನ ಜೀವದ ಗೆಳತಿಯ ಬಳಿಯಲ್ಲಿಯೆ ನಿಂತಿದ್ದಳು; ಕಣ್ಣನ್ನೂ ಹೊಸೆಯುತ್ತಿದ್ದಳು.

ಶ್ರೀಧರನು ಕಾರಿನ ಸಮೀಪಕ್ಕೆ ಬಂದು, ದೀರ್ಘಾಪಾಂಗದಿಂದೊಮ್ಮೆ ಸೀತೆಯ ದೃಷ್ಟಿಯನ್ನು ಬೇಟೆಯಾಡಿದ. ಆಕೆ ಚಕಿತ ಹರಿಣಿಯಂತೆ ಮನೆಯ ಕಡೆಗೆ ಧಾವಿಸಿದಳು. ಕಾರು ಹೊರಟಿತು.

ಸಮಯಕ್ಕೆ ಸರಿಯಾಗಿ ನಿಲ್ದಾಣಕ್ಕೆ ತಲಪಿ, ಹೆಂಡತಿ, ತಾಯಿ, ಮಕ್ಕಳು, ಭಾವ ಇಷ್ಟು ಮಂದಿಯನ್ನೂ ಬಂಡಿಯೊಳಗೆ ತುರುಕಿಸಿ ಬಂಧುವಿಯೋಗ ದುಃಖಪ್ರದರ್ಶನಕ್ಕೆ ಬೇಕಾದ ನಟನೆಗಳನ್ನು ಸಾಂಗವಾಗಿ ಕೊನೆಗೊಳಿಸಿ ಕಳುಹಿಸಿಕೊಟ್ಟು, ಕಚೇರಿಗೆ ಬಂದು ಅಲ್ಲಿ ಬಿದ್ದಿದ್ದ ಪತ್ರರಾಶಿಯೊಳಗೆ ಕೈಗುತ್ತಿ ನೋಡುವಾಗ ಬಹು ಪರಿಚಿತಾಕ್ಷರಗಳಲ್ಲಿ ವಿಳಾಸವನ್ನು ಬರೆದಿದ್ದ ಒಂದು ಪತ್ರವು ಶ್ರೀಧರನ ಕಣ್ಣಿಗೆ ಬಿತ್ತು. ಅದನ್ನು ಓದಿದನು.

'ಪ್ರಿಯ ಭಾವನವರಿಗೆ— ನಮಸ್ಕಾರಗಳು. ನಾನು ಬರೆದ ಹಿಂದಿನ ಪತ್ರಗಳು ಹಸ್ತಗತವಾಗಿರಬಹುದು. ಇಲ್ಲಿಗೆ ಬಂದು ಎಷ್ಟೋ ಸಮಯವಾದರೂ ಆಶೋತ್ತೇಜಕ ಚಿಹ್ನಗಳೇನೂ ಕಂಡುಬರುವುದಿಲ್ಲ. ಊರಿಗೆ ಹೋಗದ ಬೇಸರು ಜೀವವನ್ನೆ ನುಂಗುತ್ತಿದೆ. ಅಲ್ಲದೆ, ಭಾವನವರು ಮದ್ರಾಸಿನಲ್ಲಿಲ್ಲವೆಂದೂ ಎಲ್ಲಿಗೆ ಹೋಗಿರುವರೆಂಬುದು ಯಾರಿಗೂ ತಿಳಿದಿಲ್ಲವೆಂದೂ ಅಲ್ಲಿಂದ ಪತ್ರ ಬಂದಿದೆ. ಮನಸ್ಸಿಗೆ ಕತ್ತಲು ಕವಿದಿದೆ. ಸುತ್ತುಮುತ್ತಲೂ ಕಾರ್ಮುಗಿಲು. ಏನು ಮಾಡುವುದೋ ತಿಳಿಯದು. ಒಮ್ಮೆ ಬರುತ್ತೇನೆ, ಆಗದೆ?—

ಇತಿ — ರಾಮಣ್ಣ.

'ಇಂಥ ದರಿದ್ರಪ್ರಾಣಿಗಳ ಸುತ್ತಲೂ ಕಾರ್ಮುಗಿಲು ಮುಸುಕುವು ದಕ್ಕೆ ಕಾರಣ – ಕೈಯಲ್ಲಿ ರೊಕ್ಕವಿಲ್ಲದಿರುವುದು ಕೈಗೆ ನಾಲ್ಕು ಕಾಸಿಟ್ಟರೆ, ಕಾರ್ಮುಗಿಲು ಚೆದರಿ ಪಲಾಯನ ಮಾಡದಿರುವುದೇ?' ಎಂದು ದರಿದ್ರ ಹೃದಯದ ಪ್ರಕೃತಿ ಶಾಸ್ತ್ರದಲ್ಲಿ ತನಗಿರುವ ಅನುಭವವನ್ನು ಪ್ರಕಟಪಡಿಸಿ ಶ್ರೀಧರನು ರಾಮಣ್ಣನಿಗೊಂದು ತಂತಿ ಕೊಡುವುದೆಂದು ಭಾವಿಸಿ. ಅದರ ಒಕ್ಕಣೆ ಹೀಗಿತ್ತು –

ಎಲ್ಲರೂ ಕ್ಷೇಮ ಸದ್ಯಃ ಬರುವುದು ಬೇಡ. ಅವಶ್ಯ ಕಾರ್ಯವಿದೆ. ನೀನು ಅಲ್ಲಿಯೆ ಇರಬೇಕು. ನೂರು ರುಪಾಯಿಗಳನ್ನು ಕಳುಹಿಸಿದ್ದೇನೆ. ದೀರ್ಘವಾದ ಪತ್ರವನ್ನು ನಿರೀಕ್ಷಿಸು.

ಹಳ್ಳಿಯ ಮನೆ ಬಿಟ್ಟು ಈಗಲೆ ಮೂರು ಘಂಟೆಯಾಗಿತ್ತು. ಅಲ್ಲಿ ಏನೆಲ್ಲ ಪ್ರಕರಣ ನಡೆಯಿತೆಂಬ ಕುತೂಹಲ ಅವನಿಗೆ ಇರದೆ? ಅಲ್ಲಿಗೆ ಸವಾರಿ ಸಾಗಿತು.

ಅಯ್ಯೋ! ಎಂಥ ಅಘಟಿತಘಟನಗಳು! ರಾಮಣ್ಣ ಬರಬೇಕೆಂದಿರುವ ನಂತೆ! ಇದರ ರಹಸ್ಯವೇನು? ಎಂದು ತಿಳಿವ ಉದ್ದೇಶದಿಂದ ಶ್ರೀಧರನ ಕುಡಿಮೀಸೆ ಬಾಯೊಳಗೆ ನುಸುಳಿತು.

## ಇಪ್ಪತ್ತೆರಡನೆಯ ಪ್ರಕರಣ

ಶ್ರೀಧರನ ಜೀವನಪಥವಿಂದು ನಿಷ್ಕಂಟಕವಾಗಿದೆ. ಅವನ ಕರ್ತವ್ಯ ಬುದ್ಧಿ ಗಂಟೆಗೆ ನೂರು ಮೈಲಿನ ವೇಗದಿಂದ ಮುಂದೆ ಸಾಗಿದೆ. ವಿರೋಧಿ ಗಳು ಬಗ್ಗಿದ್ದಾರೆ. ವಿರೋಧಿಗಳಲ್ಲದಿದ್ದರೂ ಸ್ವಸುಖಸಾಧನಕ್ಕೆ ಪ್ರತಿಬಂಧಕ ರಾಗಿರುತ್ತಿದ್ದ ತಾಯಿಯೋ ಅಣ್ಣನೋ ಹೆಂಡತಿಯೋ ಸರ್ವರೂ ದೂರ ತೊಲಗಿ ಕಾರ್ಯರಂಗವನ್ನು ತನಗೊಬ್ಬನಿಗೇ ಬಿಟ್ಟುಕೊಟ್ಟಿದ್ದಾರೆ. ದನ ವನ್ನು ಕೊಳ್ಳೆ ಹೊಡೆದು ತಿನ್ನುವ ಹುಲಿ ಅದನ್ನು ಒಂದೇ ತುತ್ತಿಗೆ ತಿನ್ನುವುದಿಲ್ಲ. ಮೊದಲು ಒಂದೇಟಿನಿಂದ ಅಪ್ಪಳಿಸಿ ಬಿಡುತ್ತದೆ. ಪ್ರಾಣ ಹೋಯಿತೆಂದು

ತಿಳಿದ ಮೇಲೆ ನಿರ್ಜನಾರಣ್ಯಕ್ಕೆ ಎಳೆದುಕೊಂಡು ಹೋಗಿ, ಅದರ ಶವವನ್ನು ಕಚ್ಚಿ ನಲಿದು ಸಂತೋಷದಿಂದ ಚೂರು ಚೂರು ಮಾಂಸವನ್ನು ಹರಿದು ಹರಿದು ತಿನ್ನುವುದಂತೆ. ಸೀತಮ್ಮನ ವಿಷಯದಲ್ಲಿಯೂ ಇಂತಹ ವಿನೋದ ಚೇಷ್ಟಿತ ದಿಂದ ಆನಂದಿಸಬೇಕೆಂದು ಶ್ರೀಧರನಲ್ಲಿದ್ದಿತು. ನಿರ್ಜನವಾದ ಹಳ್ಳಿ . . . 'ಏಕಾಕಿನಿಯಾದ ಸ್ತ್ರೀಪಶು . . ಅವನೊಬ್ಬ ಕಾಮುಕ ವ್ಯಾಘ್ರ.

ಅಸಿಲಾಹತ ತಂತ್ರೀನಾದದಂತೆ, ಶ್ರೀಧರನ ಮನಸ್ಸನ್ನು ಯಾವುದೋ ಒಂದು ಅದೃಶ್ಯ ಹಸ್ತವು ಮಿಡಿಯುತ್ತಿದ್ದು ಸಂತೋಷರಸವು ಪೂರ್ಣವಾಗಿ ಹರಿ ಯುತ್ತಿದ್ದಿತು.

ಹತ್ತೆ ನಿಮಿಷದಲ್ಲಿ ಹಳ್ಳಿಯ ನಿವಾಸಭವನಕ್ಕೆ ತಲಪಿದುದೂ ಆಯಿತು. ಯಾವುದೋ ಒಂದು ಕೆಲಸದ ನವನದಿಂದ ಮೋಟರ್ ಡ್ರೈವರನನ್ನು ಹಿಂದೆ ಕಳುಹಿಸಿದುದೂ ಆಯಿತು.

ಆಗ ಪ್ರಪಂಚದಲ್ಲಿದ್ದುದು ಸರೀಕ್ಷಿತ ಸುಖಾನುಭವದಿಂದ ಉಕ್ಕಿ ದಡ ಮೀರಿ ಹರಿಯುತ್ತಿದ್ದ ಶ್ರೀಧರನ ಪ್ರಣಯಿ ಹೃದಯವೊಂದು. ಅನಿರ್ವಚ ನೀಯ ಸೌಂದರ್ಯಸುಧೆಯನ್ನು ಸುರಿಸುತ್ತಿದ್ದ ಸೀತಮ್ಮನ ಸಂಪೂರ್ಣ ಕಳಾ ಮಂಡಿತ ಮುಖಚಂದ್ರನೊಂದು

ಎಲ್ಲವೂ ಹಂಚಿಕೆಯಂತೆ ನಡೆದಿದ್ದಿತು. ಹೊಸಮನೆಯ ಬಾಗಿಲಿಗೆ ಬೀಗ ಬಿದ್ದಿತ್ತು. ಅದರೊಳಗೆ ಕಾಮಯಜ್ಞಕ್ಕೆ ಆಹುತಿಯಾಗಿದ್ದ ಪಶು ಪ್ರಾಣಿಯೂ ಸಿಕ್ಕಿಬಿದ್ದಿತ್ತು; ಅಲ್ಲ, ತನಗಾಗಿಯೇ ಕಾದಿದ್ದಿತು. ಎಂದು ಶ್ರೀಧರನ ಎಣಿಕೆ. ತಾನು ಕೊಟ್ಟ ಸೂಚನೆಯಲ್ಲಿ ಒಂದಿಷ್ಟು ಲೋಪಬಾರ ದಂತೆ, ನಡೆಯುವ ಬುದ್ಧಿಯನ್ನು ತನ್ನ ಪಾಕಶಾಸ್ತ್ರಿ ಪದ್ದಣ್ಣನಿಗೆ ಕರುಣಿಸಿದ ದೇವರಿಗೊಂದು ಧನ್ಯವಾದವು ಸಂದಿತು.

ಶ್ರೀಧರ ಬೀಗವನ್ನು ತೆಗೆದ. ಮನೆಯೊಳಗೆ ನಿಶ್ಶಬ್ದ ಆ ಮೂಕ ಪ್ರಾಣಿ ಎಲ್ಲಿ ಬಿದ್ದಿರಬಹುದು? ಶ್ರೀಧರ ಹುಡುಕಿದ. ಕೆಳಗಿನ ನೆಲೆಯ ನಾಲ್ಕಾರು ಕೋಣೆಗಳನ್ನು ನಿಮಿಷಮಾತ್ರದಲ್ಲಿ ಹುಡುಕಿದ. ಸೀತಮ್ಮನ ಛಾಯೆಯೂ ಅಲ್ಲಿರಲಿಲ್ಲ.

ಉಪ್ಪರಿಗೆಯನ್ನೇರಿ ಹುಡುಕಿದನು. ಕಂಕಣಝುಂಕಾರವಾದರೂ ಕೇಳು ವುದೋ! ಎಂದು ಕಿವಿಗೊಟ್ಟನು. ಶ್ರವಣಕುತೂಹಲವು ವ್ಯರ್ಥವಾಯಿತು.

ಕಣ್ಣು ಹುಡುಹುಡುಕಿ ಕೊಕ್ಕರಿಸಿತು. ಎಂತಹ ಮೋಸವಿದು? ಪದ್ದಣ್ಣ ವಂಚಿಸಿದನೇ? ಅಥವಾ ಆ ಹುಡುಗಿ ಪದ್ದಣ್ಣನನ್ನು ವಂಚಿಸಿ ಪಲಾಯನ ಮಾಡಿದಳೇ? ಶ್ರೀಧರನ ದೇಹವು ಬಿರುಗಾಳಿಗೆ ಅಲುಗುವ ಒಣಮರ್ರದಂತೆ ಕಂಪಿಸಿತು.

ಆಸೆಯಿನ್ನೂ ನಂದಿರಲಿಲ್ಲ. ಹಳೆಮನೆಯೊಂದಿದೆ. ಅದರೊಳಗೆ ಹುಡುಕುವ ವರೆಗೆ ಆಸೆಯು ಆಯುಃಷ್ಯವೂ ಇಲ್ಲವೇ? ಅದರೊಳಗೂ ಹುಡುಕಿದನು. ಚಿರ್ರೆಂದು ಹಾರುವ ಇಲಿಗಳಲ್ಲದೆ ಮತ್ತೇನೂ ಗೋಚರಿಸಲಿಲ್ಲ.

ಶ್ರೀಧರನ ದೇಹಕ್ಕೆ ಸಿಡಿಲೆ ಬಡಿದಂತಾಯಿತು. ಮತ್ತೊಮ್ಮೆ ಸಾವಧಾನವಾಗಿ ಹುಡುಕಿದರೂ ಆ ಮನೆಗಳೆರಡೂ ತಂತಮ್ಮ ಶೂನ್ಯಾಂತರಂಗಗಳನ್ನು ಬಿಚ್ಚಿ ತೋರಿದುವಲ್ಲದೆ, ಅಲ್ಲಿಯೇ ಇದುವರೆಗೆ ಹಂಸಗಮನದಿಂದ ಅತ್ತಿತ್ತ ಓಡುತ್ತಿದ್ದ ಆ ಸುಂದರಿಯ ಸುಳಿವೆ ಇಲ್ಲವೆಂದು ಸಾರಿ ಹೇಳಿದುವು.

ಆತ್ಮಹತ್ಯೆ ಮಾಡಿದಳೆ? ಪಲಾಯನ ಶಾಸ್ತ್ರವನ್ನು ಪಠಿಸಿದಳೆ? ಸುತ್ತುಮುತ್ತಲಿನ ಕೆರೆಬಾವಿಗಳನ್ನು ಶೋಧಿಸಿದುದಾಯಿತು. ಗುಡ್ಡ ಬೆಟ್ಟಗಳನ್ನು ಹತ್ತಿಳಿದುದಾಯಿತು ಬೀಗರಹಳ್ಳಿಯ ಸುತ್ತುಮುತ್ತಲಿನ ಪ್ರದೇಶಗಳು ನಿರ್ಜನ ಸ್ಮಶಾನದಂತಹ ಭಯಂಕರತೆಯನ್ನು ಬಿಚ್ಚಿ ತೋರಿಸಿತು.

ಒಂದು ಮೈಲಿನ ಅಂತರದಲ್ಲಿದ್ದ ಪದ್ದಣ್ಣನ ಮನೆಗೆ ಹೋಗಲಾಗಿ ಅಂಗೈಯಗಲದ ಬೀಗವು ಅದರ ಬಾಗಿಲಿಗೆ ಬಿದ್ದುದಷ್ಟೆ ಗೋಚರಕ್ಕೆ ಬಂತು.

ಶ್ರೀಧರನು ಒಂದು ಗಳಿಗೆ ಕರ್ತವ್ಯಮೂಢನಾದನು. ಇಂತಹ ಮೌಢ್ಯವೊದಗಿದುದು ಜೀವನದಲ್ಲಿ ಇದೇ ಮೊದಲು. ಹುಡುಗಿ ಪರಾರಿಯಾದಳು. ತನ್ನ ಬಲೆಗೆ ಬಿದ್ದಿದ್ದ ಮೀನು ತಪ್ಪಿಸಿಕೊಂಡಿತು. ಇದರ ಪರಿಣಾಮವೇನು?

ಪುನಃ ಮನೆಗೆ ಬಂದು, ಯಾವಾಗಲೂ ತನ್ನ ಬಳಿಯಲ್ಲಿಯೇ ಇರುತ್ತಿದ್ದ ತನ್ನ ಗುಪ್ತಪತ್ರ ಲೇಖನಗಳೂ, ಅವಶ್ಯವಾದ ದಾಖಲೆಯ ಪತ್ರಗಳೂ ಇದ್ದ ಪೆಟ್ಟಿಗೆಯನ್ನು ಹುಡುಕಲಾಗಿ ಅದೂ ಕಾಣೆ!

'ದೇವ! ನೀನೆಂಥ ಅನ್ಯಾಯ ಮಾಡಿದೆ! ನನ್ನ ಜುಟ್ಟು ಬೇರೆಯವರ ಕೈಗೆ ಸಿಲುಕಿತಲ್ಲ!' ಎಂದು ದೇವರನ್ನು ಹಳಿದನು. ತನ್ನ ಅಭಿಲಾಷೆಗಳು

ನೆರವೇರಿಕೊಂಡು ಬಂದುದರ ಕಾರಣಿಕತ್ವವನ್ನು ದೇವರಲ್ಲಿ ಆರೋಪಿಸಲು ಸಮ್ಮತಿಸದಾತನು, ಅವುಗಳ ವಿಫಲತೆಯಿಂದಾದ ಅಪಯಶಸ್ಸನ್ನು ಅವನಲ್ಲಿ ಆರೋಪಿಸಲು ಹಿಂಜರಿಯಲಿಲ್ಲ

ಸೀತಮ್ಮನನ್ನು ಪತ್ತೆ ಮಾಡುವುದಕ್ಕೆ ಇನ್ನೊಂದು ಸ್ಥಾನವಿದ್ದಿತು. ಅಲ್ಲಿಯೂ ಅನ್ವೇಷಿಸಿ ಬಿಡೋಣವೆಂದು ಆಗ ತಾನ ಬಂದಿದ್ದ ಡ್ರೈವರನಲ್ಲಿ, 'ರಾಮಣ್ಣನಲ್ಲಿಗೆ ಮೋಟರ್ ಬಿಡು' ಎಂದಾಜ್ಞೆಯಿತ್ತು, ಮನೆಯನ್ನು ಹಾಗೆಯೆ ಬೀಗದ ವಶಕ್ಕಿತ್ತು ಬೀಗರಹಳ್ಳಿಗೆ ನಮಸ್ಕಾರ ಹೊಡೆದನು.

ರಾಮಣ್ಣನ ಮನೆಯ ಮುಂದೆ ಮೋಟರಿನ ಸದ್ದಾಯಿತು. ಅವನ ಹೆಂಡತಿಯೂ ಅತ್ತೆಯೂ ಬಂದು ಇದಿರುಗೊಂಡರು, ಒಳಗ ಕರೆದೊಯಿದರು, ಕ್ಷೇಮಸಮಾಚಾರವನ್ನು ಕೇಳಿದರು.

ಶ್ರೀಧರ:– ರಾಮಣ್ಣ ಕ್ಷೇಮದಲ್ಲಿದ್ದಾನೆ, ಇಂದೇ ಪತ್ರ ಬಂದಿದೆ . . . ಇಲ್ಲಿಗೆ ಸೀತಮ್ಮ ಬಂದಿದ್ದಾರೆಯೆ?

ಸುಶೀಲೆ – (ರಾಮಣ್ಣನ ಪತ್ನಿ) ಯಾರು ಅತ್ತಿಗೆಯುವರೇ?

ಶ್ರೀಧರ.– ಹೌದು, ನನ್ನತ್ತಿಗೆ ನಿನ್ನತ್ತಿಗೆ!

ಸುಶೀಲೆ.– ಇಲ್ಲ ಬರಲಿಲ್ಲವಲ್ಲ.

ಶ್ರೀಧರ:– ಎಂಥ ಪ್ರಮಾದವಾಯಿತು . . .

ಮುಂದಿನ ಮಾತನ್ನು ಹೇಳಲು ಶ್ರೀಧರನಿಗೆ ಬಾಯಿ ಬರಲಿಲ್ಲ. ಸುಶೀಲೆ 'ಏನಾಯಿತು?' ಎಂದು ಕೇಳಿದಳು.

ಶ್ರೀಧರ:– ಆದುದೇನು? ನಮಗೂ ನಿಮಗೂ ಕುಲೀನ ಕುಟುಂಬದವರ ಮುಂದೆ ಮುಖ ತೋರಿಸದಂತಾಯಿತು. ಆಕೆ ಪರಾರಿಯಾದಳು . . .

ಸುಶೀಲೆ.– ಪರಾರಿ!

ಶ್ರೀಧರ.– ಹೌದು ಪರಾರಿ. ಪಾರ್ವತಿಯನ್ನು ಮದನಪಳ್ಳಿಗೆ ಕಳುಹಿಸುವ ಉದ್ದೇಶದಿಂದ ಸಿಲ್ದಾಣಕ್ಕೆ ಹೋಗಿದ್ದೆ. ನಮ್ಮ ಮನೆಯಲ್ಲಿ ಅವಳೊಬ್ಬಳು; ಅಡಿಗೆ ಭಟ್ಟ ಪದ್ದಣ್ಣನೊಬ್ಬ – ಇಬ್ಬರೇ ಇದ್ದವರು. ಹಿಂತಿರುಗಿ ಬರುವಾಗ ಅವಳೂ ಇಲ್ಲ; ಅವನೂ ಇಲ್ಲ!

'ಒಳ್ಳೆಯ ತಾಯಿತಂದೆಗಳಿಗೆ ಹುಟ್ಟಿದವಳು. ಒಳ್ಳೆಯ ಗಂಡನ ಕೈ ಹಿಡಿದವಳು' ಎಂದು ಇಬ್ಬರೂ ಕಣ್ಣೀರು ಸುರಿಸಿದರು. ಸುಶೀಲೆ ಕೇಳಿದಳು:–

'ಸೀತಮ್ಮ ಚಿನ್ನದಂತಹ ಗುಣವುಳ್ಳವಳು. ಹೀಗೆ ಮಾಡಿಯಾಳೆಂದು ನಾನು ಭಾವಿಸುವುದಿಲ್ಲ. ನೆರೆಕೆರೆಯಲ್ಲಿ ಹುಡುಕುಸಿದರ''

ಶ್ರೀಧರ:- ನಾನೂ ಇದುವರೆಗೆ ಹಾಗೆಯೇ ಭಾವಿಸಿದ್ದೆ ಆದರೆ ಈಗ ನಡದ ಸಂಗತಿಯಿದು. ಸುತ್ತಲೂ ಹತ್ತು ನಲ ಹುಡುಕಿಸಿದುದಾಯಿತು. ದೇವರು ಮನುಷ್ಯ ಪ್ರಾಣಿಗೆ ಯಾವಾಗ ಎಂತಹ ಬುದ್ಧಿ ಕೊಡುತ್ತಾನೆಂದು ಕಂಡವರುಂಟೆ? ಇರಲಿ, ನಾನೀಗ ಹೊರಡುತ್ತೇನೆ. ಆಕೆಯ ಮಾನವೊಂದು ಇನ್ನಾದರೂ ಹಾಳಾಗದೆ ಉಳಿದಿದ್ದರೆ, ಅದನ್ನು ಕಾಪಾಡುವುದಕ್ಕಾಗಿ ಆಕಾಶ ಪಾತಾಳಗಳನ್ನು ಹುಡುಕಿಸುತ್ತೇನ ನೀವಂತೂ ಏನೂ ತಿಳಿಯದವರಂತೆ ಇದ್ದುಬಿಡಿರಿ. ಮೇಲೆ ನೋಡಿ ಉಗುಳಿದರೆ ಮುಖಕ್ಕಲ್ಲವೆ ಬೀಳುವುದು? ನಮ್ಮವರ ಕೆಡು ನಡತೆಗಳನ್ನು ಪ್ರಕಟಗೊಳಿಸಿದರೆ ನಮಗಲ್ಲವೇ ಅಪಮಾನ?

ಹೀಗೆಂದು ಶ್ರೀಧರನು ಮೋಟರು ಹತ್ತಿದನು. ಆ ಹೆಂಗುಸರಿಬ್ಬರಿಗೆ ಅದು ಕನಸೋ ನನಸೋ ಎಂದು ತಿಳಿಯದಷ್ಟು ವಿಸ್ಮಯ.

## ಇಪ್ಪತ್ತಮೂರನೆಯ ಪ್ರಕರಣ

ಇಂತಹ ಸಂಕಟದಲ್ಲಿ ತಮಗ ಯಾರ ಸಹಾಯವೂ ಇಲ್ಲ. ಯಾರ ಸಹ ಸಂತಾಪವೂ ಇಲ್ಲ, ಎಂದು ಸೊರಗುವ ಜನರು ಮೂಢರ ಸರಿ. ಲೋಕವಿದೆ. ಲೋಕದ ಸಾವಿರಾರು ಮಂದಿ ಜನರಿದ್ದಾರೆ ಪರವಿಪತ್ತಿನಲ್ಲಿ ಬಲಾತ್ಕಾರದಿಂದಲಾದರೂ ಪ್ರವೇಶಿಸಿ ಮನೋವಾಕ್ಕುಗಳಿಂದಾದರೂ ನೆರವಾಗುವುದು ಸ್ವಧರ್ಮವೆಂದು ಭಾವಿಸುವ ಪರಹಿತಚಿಂತಕರು ಅಸಂಖ್ಯರಾಗಿದ್ದಾರೆ. ಅವರಿರುವಾಗ ಅಸಹಾಯಸ್ಥಿತಿಯೇನು?

ಮರುದಿನವೆ ಮಂಗಳೂರಲ್ಲಿ ಎಲ್ಲ ಸುದ್ದಿ ಹರಡಿತು ಬಂಕಿಯಂತೆ. ಅದರಲ್ಲಿ ತಮಗಿರುವ ಪಾಲನ್ನು ಕಿತ್ತುಕೊಳ್ಳಲು ಮನುಷ್ಯಜೀವಿಗಳೇಕೆ?

ಬೀದಿಬೀದಿಯ ಕಂಬಗಳೂ ಅಹಮಹಮಿಕೆಯಿಂದ ಪ್ರಯತ್ನಿಸುತ್ತಿದ್ದುವು.

ಸೀತಮ್ಮನನ್ನು ಪೂರ್ವಸ್ಥಿತಿಯಲ್ಲಿ ಕಂಡವರು ವಿರಳವಾಗಿದ್ದರೂ, ಈ ಸ್ಥಿತಿಯಲ್ಲಿ ಅವಲೋಕಿಸಿದವರು ಅಗಣಿತ ಜನ. ಶ್ರೀಧರನೆ ಅವಳನ್ನು ಕೊಲ್ಲಿಸಿದನು; ಇದನ್ನು ನೋಡಿದವರಿದ್ದಾರೆ ಸೀತಮ್ಮನೆ ಪಲಾಯನಮಾಡಿದಳು, ಇದನ್ನೂ ಕಂಡವರಿದ್ದಾರೆ ಯಾರೋ ಆಕೆಯನ್ನು ಹಾರಿಸಿಕೊಂಡು ಪ್ರಣಯಯಾತ್ರೆಯಲ್ಲಿ ಓಡಿಹೋದರು, ಇದನ್ನೂ ಪ್ರತ್ಯಕ್ಷವಾಗಿ ಚರ್ಮಚಕ್ಷುಗಳಿಂದಲೆ ಅವಲೋಕಿಸಿದವರೂ ಇದ್ದಾರೆ. ಇನ್ನು ಮೇಲಿನ ಮೂರು ಸಂಗತಿಗಳೂ ಏಕಕಾಲದಲ್ಲಿ ಸಂಭವಿಸಿದುದನ್ನು ನೋಡಿದವರು ಇದ್ದಿರಬಹುದು. ಅಂತೂ ಸೀತಮ್ಮನ ಸಮೀಪಬಂಧುಗಳು ಹೊರತು ಉಳಿದವರಲ್ಲಿ ಆಕೆಯ ಆಗುಹೋಗುಗಳಲ್ಲಿ ಸಂದೇಹವೇನೂ ಇಲ್ಲ.

ಈ ಉದ್ವೇಗವು ಜನರ ಧಮನಿಯ ರಕ್ತಪ್ರವಾಹವನ್ನು ದ್ವಿಗುಣವೇಗದಿಂದ ಹರಿಯಿಸುತ್ತಿದ್ದು ದಿನಗಳೆರಡು ಕಳೆದುವು. ಒಂದು ದಿನ ಸಾಯಂಕಾಲ ಉಗಿಬಂಡಿಯ ನಿಲ್ದಾಣದಲ್ಲಿ ರಾಮಣ್ಣನು ಇಳಿದನು.

ಅಷ್ಟರಲ್ಲಿ ರಾಮಣ್ಣನಿಗೆ ಪರಿಚಿತನಲ್ಲದ ತರುಣನೊಬ್ಬನು ಪ್ರತಿ ಗಾಡಿಯನ್ನೂ ಹುಡುಕುತ್ತಾ ಬಂದು, ರಾಮಣ್ಣನನ್ನು ಕಂಡು ಅಲ್ಲಿಯೇ ನಿಂತು, 'ರಾಮಣ್ಣನವರೇ! ನನ್ನ ಪರಿಚಯ ನಿಮಗಿಲ್ಲದಿರಬಹುದು. ನಿಮ್ಮ ಪರಿಚಯ ನನಗಿದೆ' ಎಂದನು.

ರಾಮಣ್ಣ :– ಎಲ್ಲಿಯೋ ಕಂಡ ಮುಖ.

ಅಪರಿಚಿತ:– ನಿಮಗೆ ತಂತಿ ಸಿಕ್ಕಿತೇ?

ರಾಮಣ್ಣ :– ಸಿಕ್ಕಿತು.

ಅಪರಿಚಿತ:– ಇದಕ್ಕೆ ಕಾರಣಭೂತನಾದವನು ನಾನೇ!

ರಾಮಣ್ಣನ ದಿಗ್ಭ್ರಾಂತನಾದನು.

ಅಪರಿಚಿತ:– ಆಶ್ಚರ್ಯಕ್ಕೆ ಕಾರಣವಿಲ್ಲ. ಸೀತಮ್ಮನ ಹೆಸರಲ್ಲಿ ತಂತಿ ಬಿಟ್ಟವ ನಾನೆ. ತಪ್ಪು ತಿಳಿಯಬೇಡಿರಿ. ಇಲ್ಲಿ ವಿಷಮ ಪ್ರಸಂಗಗಳು ನಡೆದಿವೆ. ಈಗ ಇಷ್ಟೇ ಹೇಳುತ್ತೇನೆ. ಇದುವರೆಗೆ ಏನೂ ಅಪಾಯ ಸಂಭವಿಸಲಿಲ್ಲ.

ಹೆಚ್ಚು ಹೇಳುವುದಕ್ಕೆ ಇದು ಸ್ಥಳವಲ್ಲ. ನನ್ನೊಡನೆ ಬನ್ನಿ, ಮೋಟರು ಹತ್ತಿರಿ. ಆಗ ಎಲ್ಲ ತಿಳಿದೀತು

ರಾಮಣ್ಣ ನಡೆಯುವ ಸ್ತಂಭದಂತ ಅವನ ಬನ್ನ ಹಿಂದೆಯೇ ಹೋಗಿ ಮೋಟರು ಹತ್ತಿದನು. ಇಬ್ಬರೂ ಒಡನೆಯೆ ಹೋದರು ಅಪರಿಚಿತ ವ್ಯಕ್ತಿ ಬೇರಾರೂ ಅಲ್ಲ ಮೋಟರ್ ವಿದ್ಯಾಗುರು ಮೋಹನರಾಯನೆಂದು ಬೇರೆ ಹೇಳಬೇಕಾಗಿಲ್ಲ.

ರಹಸ್ಯಸಂಭಾಷಣೆಯಲ್ಲಿಯೇ ಮಗ್ನರಾಗಿ ಇಬ್ಬರೂ ರಾಮಣ್ಣನ ಮನೆಯ ವರಗೆ ಬಂದರು. ರಾಮಣ್ಣನು ಇಳಿದ. ಇಳಿಯುವಾಗ 'ಮೋಹನರಾಯರೇ! ನಮ್ಮ ವಂಶವನ್ನಿಂದು ಕಾಪಾಡಿದಿರಿ. ನಿಮಗೆ ಯಾವ ರೀತಿಯಲ್ಲಿ ಉಪಕಾರ ಮಾಡಲಿ?' ಎಂದು ಕೇಳಿದ

ಮೋಹನರಾಯ 'ಯಾರಾದರೇನು? ಹೆಂಗುಸರೆಂದರೆ ಬಡಪ್ರಾಣಿಗಳು. ಅವರನ್ನು ಕಾಪಾಡುವುದು ದೇವರ ಸೇವೆ. ಇರಲಿ, ನಾಳೆ ನಿಮ್ಮನ್ನು ಕಾಣು ವುದುಂಟು' ಎಂದು ಹೊರಟುಹೋದನು.

ಅತ್ತೆ, ಹೆಂಡತಿ–ಇಬ್ಬರೂ, ರಾಮಣ್ಣನ ಕಿವಿಯಲ್ಲಿ ಹಿಡಿಯಲಾರದಷ್ಟು ಸುದ್ದಿಗಳನ್ನು ತುಂಬಿಸಿದರು. ರಾಮಣ್ಣನದು ಒಂದೇ ಉತ್ತರ ಗಾಬರಿಯಾಗ ಬೇಡಿ! ಗಾಬರಿಯಾಗಬೇಡಿ! ಎಂದು.

ಕೇಳಬೇಕಾದುದನ್ನೆಲ್ಲ ಕೇಳಿದ ಮೇಲೆ 'ನಿನ್ನ ಧೂರ್ತತೆಗೆ ಮೇರೆ ಯುಂಟೆ? ಎಂಥ ಚಕ್ರವ್ಯೂಹವನ್ನು ಹೂಡಿರುವೆ?' ಎಂದವನ ಬಾಯಿಯಿಂದ ಉದ್ಗಾರವು ಹೊರಟಿತು.

## ಇಪ್ಪತ್ತನಾಲ್ಕನೆಯ ಪ್ರಕರಣ

ಪಾರ್ವತಿಯು ಮದನಪಳ್ಳಿಗೆ ಹೊರಟ ಅನಂತರ, ಸೀತಮ್ಮನಿಗೆ ಹಳ್ಳಿಯ ಮನೆ ಭಯಂಕರಾರಣ್ಯವಾಯಿತು. ಈ ಅಡವಿಯೆ ಇನ್ನೆಂತಹ ಸಮರಭೂಮಿ ಯಾಗುವುದೆಂದು ತಿಳಿದಿರಲಿಲ್ಲ. ಪಾರ್ವತಿಯಿದ್ದಾಗ ಅವಳು ಒಂದು ಕಂದಕ

ದಂತಿದ್ದಳು. ಶ್ರೀಧರನ ಅಭಿಯೋಗದಿಂದ ತಲೆತಪ್ಪಿಸಿಕೊಳ್ಳುವುದಕ್ಕೆ ಆಕೆ ಸೀತಮ್ಮನ ಆಶ್ರಯಸ್ಥಾನವಾಗಿದ್ದಳು ಗುರಿ ನೋಡಿ ಎಸೆವ ಅವನ ಸಿಡಿ ಗುಂಡುಗಳಿಂದ ಹೇಗೂ ಪ್ರಾಣರಕ್ಷಣ ಮಾಡಿಕೊಳ್ಳಬಹುದಾಗಿದ್ದಿತು ಈಗಲೋ . . . ಯಾವುದೂ ಇಲ್ಲ. ಶ್ರೀಧರನೊಬ್ಬ ಪಾಷಾಣಹೃದಯ ಸೇನಾಧಿಪತಿ. ತನ್ನ ದುರ್ಬುದ್ಧಿ, ವಿಷಮತಂತ್ರ, ದುರುದ್ಯಮ ಪಾಂಡಿತ್ಯದ ದೊಡ್ಡ ಬಲವನ್ನೆ ಹಿಡಿದುಕೊಂಡು, ನಿಶ್ಶಸ್ತ್ರಳಾದ, ನಿರ್ಗತಿಗಳಾದ, ನಿರಾಶ್ರಯಳಾದ ಸೀತಮ್ಮನ ಮುಂದೆ ಗುಂಡುಹೊಡೆಯುವುದಕ್ಕೆ ಸಿದ್ಧನಾಗಿದ್ದಾನೆ

ಶ್ರೀಧರನ ತಲೆ ಕಾಣಿಸದಾದ ಮೇಲೆ, ಎಡೆಬಿಡದೆ ಕಣ್ಣೀರನ್ನು ಸುರಿಸುತ್ತಿದ್ದ ಸೀತಮ್ಮನ ಬಳಿಗೆ ಪದ್ದಣ್ಣ ಬಂದು ಹೀಗೆ ಹೇಳಿದನು

ಪದ್ದಣ್ಣ.– ಅಮ್ಮಾ! ನಿಮ್ಮಲ್ಲಿ ಹೇಳತಕ್ಕ ಅವಶ್ಯ ಕಾರ್ಯವಿದೆ, ಕೇಳುವಿರೊ?

ಸೀತಮ್ಮ:– ಹೇಳು ಪದ್ದಣ್ಣ!

ಪದ್ದಣ್ಣ:– ನನ್ನಲ್ಲಿ ತಪ್ಪುತಿಳಿವಳಿಕೆ ಮಾಡಿಕೊಳ್ಳುವಿರಾ?

ಸೀತಮ್ಮ:– ತಪ್ಪೇನು ಒಪ್ಪೇನು? ಗುಣದೋಷಗಳನ್ನು ತಿಳಿಯುವ ಶಕ್ತಿಯೇ ಈಗ ನನಗಿಲ್ಲ.

- ಪದ್ದಣ್ಣ:– ನಿಮ್ಮ ಪ್ರಾಣವು ಅಪಾಯದಲ್ಲಿದೆಯಮ್ಮ!

ಸೀತಮ್ಮ:– ನನ್ನ ಪ್ರಾಣವೆ? ಅದಕ್ಕೆ ಯಾವ ಅಪಾಯವೂ ಬರುವುದಿಲ್ಲವಲ್ಲ ಎಂದು ವ್ಯಸನದಲ್ಲಿದ್ದೇನೆ.

ಪದ್ದಣ್ಣ:– ನಿಮ್ಮ ಮಾನಹೋಗುವ ಸಂದರ್ಭ ಬಂದಿದೆಯಮ್ಮಾ!

ಸೀತಮ್ಮನ ಇಂದ್ರಿಯಗಳನ್ನೆಲ್ಲ ಒಮ್ಮೆ ಕುಲುಕಿಬಿಟ್ಟಂತಾಯಿತು. 'ನನ್ನ ಉತ್ತರ ನಿರೀಕ್ಷಣೆಯಿಲ್ಲದೆ ಎಲ್ಲವನ್ನೂ ಹೇಳಿಬಿಡು ಪದ್ದಣ್ಣ' ಎಂದು ಬೇಡಿಕೊಂಡಳು.

ಪದ್ದಣ್ಣ:– ಶ್ರೀಧರರಾಯರು ನನ್ನಲ್ಲಿ ಹೇಳಿದ ಮಾತು ಕೇಳಿದರೆ ನಿಮ್ಮ ದೇಹದ ಕೆನ್ನೆತ್ತರು ಹೆಪ್ಪುಕಟ್ಟೀತಮ್ಮ! ನನ್ನನ್ನವರು ವಿಶ್ವಾಸಪಾತ್ರನೆಂದು ಭಾವಿಸಿದ್ದಾರೆ. ಮಾತಿಗೆ ಮರುಮಾತು ಕೊಡುವ ಸಂಪ್ರದಾಯ ನನ್ನದಲ್ಲ. ಆದುರಿಂದ ಅವರು ಮಾಡಿದುದೆಲ್ಲ ಚೆಂದವೆಂದು ನನಗೆ ತೋರಬೇಕಲ್ಲವೆ? ಹಾಗೆಯೆ

ಭಾವಿಸಿಕೊಂಡರು ·ಈ ತೊತ್ತನ್ನು ಮನೆಯೊಳಗಿಟ್ಟು ಬೀಗಹಾಕಿ ಹೋಗಿಬಿಡೋ' ಎಂದು ಹತ್ತು ರುಪಾಯಿಗಳನ್ನು ನನ್ನ ಕೈಯಲ್ಲಿಟ್ಟರು. 'ಜೋಕೆ' ಎಂದು ಜಾಗ್ರತೆ ಹೇಳಿದರು. 'ಆಗಬಹುದು' ಎಂದೆ. ರುಪಾಯಿಗಳನ್ನು ಜೇಬಿಗೆ ಸೇರಿಸಿಕೊಂಡೆ ನಿಮ್ಮ ಮಾನಮರ್ಯಾದೆ ಉಳಿಯಬೇಕಾದರೆ, ಈ ನರಕದ ಹೊಂಡವನ್ನು ಬಿಟ್ಟುಬಿಡಿರಮ್ಮ ಕೂಡಲೆ ಹೊರಡಿರಮ್ಮ!

ಒಂದು ನಿಮಿಷ ಸೀತಮ್ಮನ ಬುದ್ಧಿಗೆ ಮಂಕುಹಿಡಿಯಿತು ಇದು ಶ್ರೀಧರನ ತಂತ್ರವೆ? ಅಡಿಗೆಯಾಳು ಪದ್ದಣ್ಣನ ಕುಯುಕ್ತಿಯೆ? ಆಕೆ, ಎಷ್ಟರ ಮಟ್ಟಿಗೆ ವಿವೇಕಶೂನ್ಯಳಾಗಿದ್ದಳೆಂದರೆ, ವರ್ಣಸಾದೃಶ್ಯದ ದೆಸೆಯಿಂದ ಹುಲಿ ಯಾವುದು? ಬೆಕ್ಕಾವುದು? ಎಂದು ತಿಳಿಯಲಾರದಾಗಿದ್ದಳು.

ಪದ್ದಣ್ಣ – ನನಗೆಲ್ಲ ಗೊತ್ತಿದೆಯಮ್ಮ! ಅಡಿಗೆಯ ಒಗ್ಗರಣೆಯ ಪರಿಮಳ ಜೊತೆಯಲ್ಲೂ ಶ್ರೀಧರನ ಕುಹಕಾಲೋಚನೆಯ ದುರ್ವಾಸನೆ ನನ್ನ ಮೂಗಿಗೆ ಅಡಸಿದೆ ಅವರ ಮಾತು, ಕತೆ, ನಡ, ನೋಟ ಎಲ್ಲವನ್ನೂ ಚೆನ್ನಾಗಿ ತಿಳಿದಿದ್ದೇನೆ ನಿನ್ನ ಮಾನಮರ್ಯಾದೆಗಳನ್ನು ಮಣ್ಣುಮುಕ್ಕಿಸುವುದಕ್ಕೆ ದೊಡ್ಡ ಬಲೆ ಬೀಸಿದ್ದಾರೆ–ಎಂದು ನನಗೆ ಗೊತ್ತು. ನಿಮ್ಮಲ್ಲಿ ಎರಡೆಣಿಕೆ ಮಾಡಿದರೆ ನನ್ನ ನಾಲಗೆಯನ್ನು ನರಿ ನಾಯಿ ಹದ್ದುಗಳು ಎಳೆದಾವು ಹೆತ್ತ ತಾಯಿಗಿಂತ ಹೆಚ್ಚಿನವರಮ್ಮ ನೀವು. ಅವನ ಪಾತ್ರೆಗಳನ್ನುಜ್ಜಿ ಮಸಿಹಿಡಿದ ಕೈಯಲ್ಲಿ–ಆಗಲೆ ಅವನ ಕೆನ್ನೆಗೆ ಎರಡು ಧಪರಾಕು ಕೊಡುತ್ತಿದ್ದೆ. ಆದರೆ ಮಾಡುವುದೇನು? ಅಂತಹ ಅವಿಚಾರ ಕೃತ್ಯದಿಂದ ನನಗಂತೂ ಕೆಡುಕು ನಿಮಗೆ ಅದಕ್ಕಿಂತ ಹೆಚ್ಚಿನ ಕೆಡುಕು ನಾನು ಎಲ್ಲಿಗಾದರೂ ಪಲಾಯನಮಾಡಬಹುದು. ನಿಮಗೆ ಗತಿಯೇನಮ್ಮ! ಆದುದರಿಂದ ಆ ದುಷ್ಟನ ಮಾತಿಗೆ ಸಮ್ಮತಿಸಿದವನಂತೆ ನಟಿಸಿ ನಿಮ್ಮಲ್ಲಿ ಎಲ್ಲವನ್ನೂ ಹೇಳಿದ್ದೇನೆ

ಸೀತಮ್ಮನಿಗೆ ಪದ್ದಣ್ಣನಲ್ಲಿದ್ದ ಸಂದೇಹವು ದೂರವಾಯಿತು.

ಸೀತಮ್ಮ.– ಹೌದು ಪದ್ದಣ್ಣ! ಶ್ರೀಧರನು ಇಂತಹ ಪಾಪಕೃತ್ಯಕ್ಕೆ ಹೇಸದ ಜನವೆಂದು ಗೊತ್ತಿದೆ. ಆದರೆ ಇಲ್ಲಿಂದ ತಪ್ಪಿಸಿಕೊಂಡು ಹೋದರೆ ನನಗೆ ಎಡೆ ಕೊಡುವ ಮನೆಯಾವುದಿದೆ ಪದ್ದಣ್ಣ? ಪ್ರಪಂಚದಲ್ಲಿ ಅಂಗೈ ಅಗಲದ ಸ್ಥಳವಿಲ್ಲ ನನ್ನನ್ನು ಇರಿಸಿಕೊಳ್ಳುವುದಕ್ಕೆ.

ಪದ್ದಣ್ಣ: ರಾಮಣ್ಣನವರ ಮನೆಯಿಲ್ಲವೇನಮ್ಮ?

ಸೀತಮ್ಮ:– ರಾಮಣ್ಣನೇ? ಅವನು ಶ್ರೀಧರನ ಕೂಲಿಯಾಳಿನಂತೆ. ನನ್ನನ್ನು ಇರಿಸಿಕೊಂಡರೆ, ನಾಳೆ ಅವನ ತಲೆ ಹಾರಬಹುದು. ಅವನಾವರೂ ಸುಖವಾಗಿರಲಿ. ನನ್ನ ಈ ಸುಡುವೋರೆಯನ್ನು ಅಲ್ಲಿಗೇಕೆ ಕೊಂಡುಹೋಗಲಿ? ಇಲ್ಲಿಯೇ ಒಂದು ಕೆರೆಯನ್ನೋ ಬಾವಿಯನ್ನೋ ಆಶ್ರಯಿಸುವುದು ಲೇಸಲ್ಲವೆ ಪದ್ದಣ್ಣ? ಮೂರು ಕಾಸು ಬೆಲೆಯಿಲ್ಲದ ಒಡಲಿದು. ಇದರ ಸಂರಕ್ಷಣೆಗಾಗಿ ಊರೂರು ಅಲೆದಾಡಿ 'ಎಡೆ ಕೊಡಿರಿ' ಎಂದು ಬೇಡುವುದೇಕೆ? ನೀನೇ ಹೇಳು ಕೊಟ್ಟ ಮುಂಜಾಗ್ರತೆಯೇನೋ ಒಳ್ಳೆಯದಕ್ಕೆ ಆಯಿತು.

ಪದ್ದಣ್ಣ:- ಅವಿವೇಕ ಮಾಡಬಾರದು ತಾಯಿ. ಇಂಥ ವಯಸ್ಸಿನಲ್ಲಿ ಹೀಗೆ ಮಾಡಬಾರದು ತಾಯಿ! ಕೈಮುಗಿದು ಬೇಡಿಕೊಳ್ಳುತ್ತೇನೆ. ತಪ್ಪಾಗಿ ತಿಳಿಯಬಾರದು.

ಸೀತಮ್ಮ:– ನನ್ನ ಮಾನರಕ್ಷಣೆಯ ದೀಕ್ಷೆಯನ್ನು ವಹಿಸಿದಾತನ ಮಾತಿನಲ್ಲಿ ಸಂದೇಹದ ಎಣಿಕೆಯೆ? ನಿನ್ನ ಬುದ್ಧಿಗೆ ಏನು ತೋರುತ್ತದೋ ಹೇಳು.

ಪದ್ದಣ್ಣ:– ನನಗೊಬ್ಬಳು ತಾಯಿಯಿದ್ದಾಳೆ ಮನೆ ಇಲ್ಲಿಯೇ ಸಮೀಪ. ನನ್ನ ಮನೆಯಲ್ಲಿ ನೀವಿರುವುದು ಚೆನ್ನಾಗಿಲ್ಲವಮ್ಮ. ತಾಯಿಯನ್ನು ನಿಮ್ಮ ಸಂಗಡದಲ್ಲಿರಿಸಿಬಿಡುತ್ತೇನೆ. ನೀವು ಯಾವ ಕಡೆಗೆ ಬೇಕಾದರೂ ಹೋಗಿರಿ, ಈ ಹುಲಿಯ ಗವಿಯಿಂದ ಒಮ್ಮೆ ತಪ್ಪಿಸಿಕೊಳ್ಳಿ. ಮನೆ ಮನೆಯಲ್ಲಿ ಬಿಕ್ಕೆ ಬೇಡಿದರೂ ಚಿಂತೆಯಿಲ್ಲ. ಹೇಗಾದರೂ ಬದುಕಿಕೊಳ್ಳಿರಿ

ಸೀತಮ್ಮ:— ಹೌದು ಪದ್ದಣ್ಣ, ನಿನ್ನ ಮಾತೇನೋ ನಿಜ. ಆದರೆ ಶ್ರೀಧರನ ಕೋಪಕ್ಕೆ ಪಕ್ಕಾಗುವ ನಿನ್ನವಸ್ಥೆಯೇನಾದೀತು?

ಪದ್ದಣ್ಣ:– ನನ್ನ ವಿಷಯವಾಗಿ ನಿಮಗೆ ಚಿಂತೆ ಬೇಡಮ್ಮ. ಅಡಿಗೆಯ ಭಟ್ಟರಿಗೆ ನಿರುದ್ಯೋಗವಿದೆಯೆ? ಬಿ.ಎ. ಯಂ.ಎ. ಪರೀಕ್ಷೆಗಳನ್ನು ಕೊಟ್ಟವರಿಗೆ ಇನ್ನೊಬ್ಬರ ಕಾಲಿಗೆ ಬಿದ್ದು ಕಸಬು ಹುಡುಕುವ ಪ್ರಸಂಗ ಬರುತ್ತದೆ. ನಮಗಾದರೆ ಹಾಗಲ್ಲ. ಲೋಕದಲ್ಲಿ ಬಡವರ ದಾರಿದ್ರ್ಯವು ಹೆಚ್ಚಿದಂತೆ, ಧನವಂತರ ಸಿರಿ ಹೆಚ್ಚುತ್ತದೆ. ಐಶ್ವರ್ಯವು ಏರಿದಂತೆ ಧನಿಕರ ಹೆಂಗುಸರ ದೇಹದಲ್ಲಿ ಬೊಜ್ಜಿನ ತೂಕ ಹೆಚ್ಚಿ, ಅವರು ಬಗ್ಗುವುದು ನಿಗುಚುವುದು

ಕಷ್ಟವಾಗುತ್ತದೆ. ಆಗ ಅಡಿಗೆ ಭಟ್ಟರ ಕಾಲಿಗೆ ಅಡ್ಡ ಬೀಳಬೇಕಾಗುತ್ತದೆ. ಅಮ್ಮ! ನನ್ನ ವಿದ್ಯೆ ಅಂತಹ ವಿದ್ಯೆ. ನಿರುದ್ಯೋಗದ ಭೀತಿ ಇಲ್ಲ. ಕೈಯಲ್ಲಿ ಸೌಟೊಂದು ಇರುವಷ್ಟು ಕಾಲ ಲೋಕವನ್ನು ಗೆದ್ದೇನಮ್ಮ ನಾನು.

ಸೀತಮ್ಮ:– ಪದ್ದಣ್ಣ! ನಿನ್ನ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವುದು ಹೇಗೆ?

ಪದ್ದಣ್ಣ: ಅದನ್ನು ಕೇಳುತ್ತೀರೊ? ನೀವು ಗಂಡ ಹೆಂಡಿರು ಸುಖವಾಗಿ ಸಂಸಾರ ಮಾಡಿಕೊಂಡಿದ್ದರೆ, ದೇವರು ದಯಮಾಡಿ ನಿಮಗೆ ಸಂಪತ್ತನ್ನು ಒದಗಿಸಿಕೊಟ್ಟರೆ, ಪದ್ದಣ್ಣನ ಸೌಟಿಗೆ ಕೆಲಸ ಕೊಡಿರಿ. ಇದೇ ಅವನಿಗೆ ಸುಖ.

'ಗಂಡ' ಎಂಬ ಮಾತು ಸೀತಮ್ಮನ ಮನಸ್ಸಿಗೆ ವೇದನೆಯನ್ನುಂಟು ಮಾಡಿತು. 'ಗಂಡ' ಎಂಬವನು ಸ್ವತಂತ್ರೋಪಜೀವಿಯಾಗಿದ್ದರೆ ಇಷ್ಟೆಲ್ಲ ನರಕ ಯಾತನೆಯಿರುತ್ತಿತ್ತೆ?

ಸೀತಮ್ಮ– ಹಾಗಾದರೆ ಮಾಡುವುದೇನು ಹೇಳು.

ಪದ್ದಣ್ಣ:– ಕೂಡಲೆ ನನ್ನ ತಾಯಿಯೊಂದಿಗೆ ಪಲಾಯನ ಮಾಡಿರಿ. ದಾರಿಯಲ್ಲಿ ಯಾವುದಾದರೊಂದು ಮೋಟರು ಸಿಕ್ಕಿದರೆ, ಅದನ್ನೇರಿಕೊಂಡು, ಶ್ರೀಧರನು ಇರುವ ಊರಿನಿಂದ ಎಷ್ಟು ದೂರದ ವರೆಗೆ ಹೋಗಬಹುದೊ ಅಷ್ಟು ದೂರ ಹೋಗಿಬಿಡುವುದು. ಮೋಟರು ಸಿಕ್ಕದಿದ್ದರೆ ಕಾಲಿಗೆ ಶಕ್ತಿ ಇರುವಷ್ಟು ಓಡಿಬಿಡುವುದು. ತಡಮಾಡಬೇಡಿರಿ

ಸದ್ಯಕ್ಕೆ ಸಾಧ್ಯವಿರುವ ಕೆಲಸ ಇದೇ ಎಂದು ಸೀತಮ್ಮನ ಮನಸ್ಸಾಕ್ಷಿ ಹೇಳಿತು. ಇಬ್ಬರೂ ಹೊರಟು ರಸ್ತೆಗೆ ಬಂದಾಗ ಇದಿರಾಗಿ ಮೋಟರ್ ಗಾಡಿ ಯೊಂದು ಬರುತ್ತಿತ್ತು.

ಪದ್ದಣ್ಣ ಅದನ್ನು ನಿಲ್ಲಿಸಿ ಡ್ರೈವರನೊಡನೆ 'ಅಣ್ಣಾ! ಇಬ್ಬರು ನಿರ್ಗತಿಕ ರಾದ ಹೆಂಗುಸರಿದ್ದಾರೆ. ಎಲ್ಲಿಗೆ ಬೇಕೋ ಅಲ್ಲಿಗೆ ಇವರನ್ನು ಕರೆದುಕೊಂಡು ಹೋಗುವೆಯಾ? ನೀನು ಕೇಳಿದಷ್ಟು ಕೊಡುತ್ತೇನೆ ಮಹಾರಾಯ!' ಎಂದನು.

ಇದರೊಳಗೇನೋ ಗುಟ್ಟಿರಬೇಕೆಂದು ಡ್ರೈವರನಿಗೆ ಭಾಸವಾಯಿತು. 'ಆಯಿತು' ಎಂದನು.

ಪದ್ದಣ್ಣನ ಮನೆ ಅಲ್ಲಿಯೆ ರಸ್ತೆಯ ಬಳಿಯಲ್ಲಿ ಅವನು ತಾಯಿಯನ್ನು ಕರೆದುಕೊಂಡು ಬಂದು ಇಬ್ಬರನ್ನೂ ಬಂಡಿಯೊಳಗೆ ಕೂರಿಸಿದನು.

ಹೋಗುವುದೆಲ್ಲಿಗೆ ಎಂಬುದು ಸೀತಮ್ಮನಿಗೆ ನೆನಪಾಯಿತು. ಅಲ್ಲಿಂದ ಇಪ್ಪತ್ತು ಮೈಲು ದೂರದ ಹಳ್ಳಿಯಲ್ಲಿ ಸೀತಮ್ಮನ ಸೋದರಮಾವನ ಮನೆಯಿದೆ. ಅಲ್ಲಿಗೆ ಹೋಗದೆ ವರ್ಷ ನೂರಾಗಿತ್ತು. ಇಂತಹ ವಿಪನ್ನಾವಸ್ಥೆಯಲ್ಲಿ ಅಲ್ಲಿಗೆ ಹೋಗುವುದೇ ಉಚಿತವೆನಿಸಿತು. ಆದರೆ ಅವರಿಗೆ ಸೀತಮ್ಮನ ನೆನಪಾದರೂ ಈಗ ಇರಬಹುದೆ? ಈ ಸ್ಥಿತಿಯಲ್ಲಿ ಅಲ್ಲಿಗೆ ಹೋದರೆ ಅವರೇನೆಂದು ಭಾವಿಸಬಹುದು? ಏನು ಬೇಕಾದರೂ ಭಾವಿಸಲಿ ಪ್ರಕೃತದ ವಿಪತ್ತೊಂದು ಪರಿಹಾರಹೊಂದಿದರೆ ಸಾಕು. ಎಂದು ಸೀತಮ್ಮನಿಗೆ ತೋರಿತು.

ಮೋಟರು ಹೊರಟಿತು. 'ಇಂದು ದೊಡ್ಡ ಪುಣ್ಯವನ್ನು ಕಟ್ಟಿಕೊಂಡೆ' ಎಂದು ಪದ್ದಣ್ಣ ಸಂತೋಷದಿಂದ ಹಾರಿದ

ಗುರಿ ಮುಟ್ಟುವುದಕ್ಕೆ ಒಂದು ಗಂಟೆಯ ಅವಕಾಶವಿತ್ತು. ಡ್ರೈವರನಿಗೆ ಈ ಹೊಸಬರ ಪರಿಚಯ ಮಾಡಿಕೊಳ್ಳುವ ಕುತೂಹಲ ಹೆಚ್ಚಿತು.

'ಅಧಿಕಪ್ರಸಂಗವೆಂದು ಭಾವಿಸಬೇಡಿರಮ್ಮ. ನನಗೆ ನಿಮ್ಮ ಮನೆಯೊಡೆಯರ ಪರಿಚಯವಿದೆ ನೀವೇಕೆ ಹೀಗೆ ಪಲಾಯನ ಮಾಡುತ್ತೀರಿ?' ಎಂದು ಕೇಳಿದನು.

ಸೀತಮ್ಮನಿಗೆ ಕಣ್ಣೀರು ಬಂತು.

ಡ್ರೈವರ:– ವ್ಯಸನಪಡಬೇಡಿರಮ್ಮ! ನನ್ನದೂ ನೊಂದ ಜೀವ. ಏನೂ ತಿಳಿಯದ ಹುಡುಗಿಯೊಂದನ್ನು ಈ ಮನೆಗೆ ಬಲಿಕೊಟ್ಟಿದ್ದೇನೆ.

ಸೀತಮ್ಮ – ಯಾರವಳು?

ಡ್ರೈವರ:— ಅವಳ ಹೆಸರು ಚಂಚಲೆ! ಹೆಸರು ಮಾತ್ರ ಹಾಗಿರುತ್ತಿದ್ದರೆ ವ್ಯಸನವಾಗುತ್ತಿರಲಿಲ್ಲ. ಗುಣವೂ ಹಾಗಾಯಿತು. ಅದಕ್ಕಾಗಿ ವ್ಯಸನಪಡುತ್ತೇನಷ್ಟೆ. ನಾನವಳ ಭಾವ–ಮೋಹನ.

ಈತನು ಸಮಾನದುಃಖದಿಂದ ಕಂಗೆಡುತ್ತಾನೆಂದು ಸೀತೆಗೆ ತಿಳಿಯಿತು. 'ನನ್ನಣ್ಣನ ಪತ್ತೆಯಿದೆಯೇ?' ಎಂದು ಸೀತೆ ಪ್ರಶ್ನಿಸಿದಳು.

'ರಾಮಣ್ಣನವರನ್ನು ನೋಡಿ ಪರಿಚಯವಿದೆ. ಆಡಿ ಪರಿಚಯವಿಲ್ಲ. ಅವರು ಊರಲಿಲ್ಲವೆಂದು ಗೊತ್ತಿದೆ. ಆದರೆ ಬೇಕಾದರೆ ಬರಿಸುತ್ತೇನೆ.

'ಹೇಗೆ?'

'ತಂತಿ ಕೊಡುತ್ತೇನೆ'

'ದಮ್ಮಯ್ಯ! ಒಮ್ಮೆ ಹಾಗೆ ಮಾಡು'

'ಹಾಗೆಲ್ಲ ಹೇಳಬೇಡಿರಮ್ಮ. . ದಮ್ಮಯ್ಯ . ಎನ್ನುವುದು ದೇವರಲ್ಲಿ ಮಾತ್ರ. ನನ್ನಿಂದ ಯಾವ ಕೆಲಸವಾಗಬೇಕೋ ಅದನ್ನು ಮಾಡಲು ಸದಾ ಸಿದ್ಧನಾಗಿದ್ದೇನೆ ಕೆಲಸವು ಜಯಿಸಿದರೆ ನಾನೂ ನೀವೂ ಎಲ್ಲರೂ ಸೇರಿ ದೇವರಲ್ಲಿ ದಮ್ಮಯ್ಯ ಎನ್ನೋಣ'

ಕಾರು ಉದ್ದಿಷ್ಟ ಸ್ಥಳಕ್ಕೆ ಬಂತು ಇಬ್ಬರು ಹೆಂಗಸರೂ ಇಳಿದರು. ಡ್ರೈವರನಿಗೆ ಅನಂತ ಕೃತಜ್ಞತೆಗಳನ್ನು ಸೂಚಿಸಿದರು ಸೀತಮ್ಮನ ಮಾವನ ಮನೆಗೆ ಅಲ್ಲಿಂದ ನೂರೇ ಗಜದ ದಾರಿ. ಅಲ್ಲಿಗೆ ಹೋಗಿ ಸೇರಿದಳು ಸೀತಮ್ಮ. ಸಿಂಹದ ಗವಿಯಿಂದ ಪಾರಾದಳು. ಅಂಧಕೂಪ ನರಕದಿಂದ ದೂರವಾದಳು. ಪಿಶಾಚದ ಹಿಡಿತದಿಂದ ತಪ್ಪಿಸಿಕೊಂಡಳು. ಮಾನವನ್ನು ಕಾಪಾಡಿಕೊಂಡಳು.

## ಇಪ್ಪತ್ತೈದನೆಯ ಪ್ರಕರಣ

ಶ್ರೀಧರನ ಮನಸ್ಸು ಜಗ್ಗುಬಿದ್ದಿತು. ಹಿಂದೆಂದೂ ಇಲ್ಲದ ಅಧೀರತೆ ಇಂದು ಅವನ ಹೃದಯವನ್ನು ಗಾಢಾಲಿಂಗನದಿಂದ ಬಿಗದುಬಿಟ್ಟಿತು. ಅಸಹಾಯ ಪ್ರಾಣಿಯ ಕಿವಿಯನ್ನೊಬ್ಬ? ಮೂಗನ್ನೊಬ್ಬ; ಕಾಲನ್ನೊಬ್ಬ ಹಿಡಿದು ನಾಲ್ಕೂ ಕಡೆಗಳಿಂದ ಬಲವಾಗಿ ಎಳೆದರೆ, ಆಗಳಿನ ಅನುಭವವೆಂತಹದೋ ಅಂತಹ ಅನುಭವ ಅವನಿಗಾಯಿತು. ಚಂಚಲೆಯ ಮನಸ್ಸು ಕಷಾಯಿತವಾಗಿರಬಹುದು; ಅಣ್ಣನ ಹುಚ್ಚು ತನ್ನ ರಕ್ತಪಾನಕ್ಕೆ ಹಾತೊರೆಯಬಹುದು; ಸೀತಮ್ಮನು ತಪ್ಪಿಸಿಕೊಂಡು ತನ್ನ ವಿರೋಧಿಗಳ ಸಂಖ್ಯೆಯನ್ನು ಹೆಚ್ಚಿಸಿರ

ಬಹುದು: ರಾಮಣ್ಣನ ವೀರಾವೇಶವು ರೌದ್ರವಾಗಬಹುದು; ಲೋಕವೆ ತನ್ನ ವಿರೋಧಿಯಾಯಿತೆಂದೂ ಬೆಂಬತ್ತಲೂ ಬಹುದು. ಇನ್ನೇನು? ಊರಿಗೆ ಬರಲೆ? ಎಂದು ರಾಮಣ್ಣ ಪತ್ರಬರೆದಿದ್ದಾನೆ. ಯಾರಾದರೂ ಚಾಡಿಗಾರರು ಇಲ್ಲಿಯ ಸ್ಥಿತಿಗತಿಗಳನ್ನು ತಿಳಿಸಿದರೆ, ಗಾಯಗೊಂಡ ಹಂದಿಯಂತೆ ಅವನು ಆರ್ಭಟಿಸಿಕೊಂಡೇ ಬರಬಹುದು. ವೆಂಕೋಬರಾಯರಿಗೂ ತನ್ನ ನಡತೆಯಲ್ಲಿ ತಾತ್ಸಾರವುಂಟಾದಂತಿದೆ. ಲೋಕದಲ್ಲಿ ಎಂತೆಂತಹ ಸುದ್ದಿಗಳೋ ಹರಡಿವೆ. ಮನೆಯ ಜನರು ದೂರದಲ್ಲಿದ್ದಾರೆ. ತಾನೊಬ್ಬ . . . ತನಗೆ ವಿರೋಧಿಯಾಗಿ ತಿರುಗುವ ಕಾಲಚಕ್ರವೊಂದು. ತನ್ನ ಭವಿಷ್ಯವು ದೊಡ್ಡ ದುರ್ದಿನವಾಗು ವುದೇ? ಎಂದು ಶ್ರೀಧರ ಹೆದರಿಬಿಟ್ಟನು.

ಸೀತಮ್ಮನು ಆತ್ಮಹತ್ಯೆ ಮಾಡಿಕೊಂಡಿರಲಿಲ್ಲವೆಂಬುದು ವಿಚಾರವಂತರು ತಿಳಿಯಬಹುದಾದ ಸಂಗತಿ. ಆಕೆ ಅಗೋಚರೆಯಾದ ಮರುನಿಮಿಷದಲ್ಲಿಯೇ ಮನೆಯ ಸುತ್ತುಮುತ್ತಲೂ ಒಂದು ಮೈಲು ಉದ್ದಗಲದ ಪ್ರತಿಯೊಂದು ಕೆರೆ, ಬಾವಿ, ಬೆಟ್ಟತಿಟ್ಟಗಳನ್ನು ಹುಡುಕಿದ್ದಾನೆ ಶ್ರೀಧರ. ಆಕೆಯ ಕುರುಹೇ ತೋರಲಿಲ್ಲ. ಅತ್ಮಹತ್ಯ ಮಾಡಲೆಳಸುವ ಹೆಂಗುಸು, ಎರಡು ಮೈಲು ದೂರ ಓಡಿ ಅಯಾಸಪಟ್ಟು ಇಷ್ಟಾರ್ಥವನ್ನು ನೆರವೇರಿಸಬೇಕೆಂದಿಲ್ಲ. ಆದುದರಿಂದ ಆ ಸಂಭವವು ನಿಜವಲ್ಲ; ಆಗಿದ್ದರೆ ಚಿಂತೆ ಇರುತ್ತಿರಲಿಲ್ಲ. ಆಗಲಿಲ್ಲ! ಆಕೆ ಸಲಾಯಿತೆಯಾಗಿದ್ದಿರಬೇಕು. ತನ್ನ ದಾಳಿಯನ್ನು ಸಹಿಸದ ಮಾನವತಿ ಪದ್ಮಣ್ಣ ನೊಡನೆ ಓಡಿಹೋಗಿರುವಳೆಂಬುದನ್ನು, ಅರಿಯದ ಲೋಕವನ್ನು ನಂಬಿಸಲು ತಾತ್ಕಾಲಿಕವಾಗಿ ಹೇಳಬಹುದಾಗಿದ್ದರೂ ಇದೂ ಅಸಂಭವವೆಂಬುದು ಅಂತ ರಾತ್ಮನಿಗೆ ತಿಳಿದಿದ್ದಿತು. ಹೆಣ್ಣು ಕಾಣೆಯೆಂದು ಪೋಲೀಸರಿಗೆ ತಿಳಿಸೋಣವೆ? ಇದು ಅಪಾಯಕರ. ಅವಳೊಂದಿಗೆ ಪತ್ತೆಯಾಗುವುದು ತನ್ನ ಉಪದ್ವ್ಯಾಪ! ಆಕೆ ಸತ್ತೇ ಹೋಗಿದ್ದರೆ, ಅನೇಕ ಲಜ್ಜಾಸ್ಪದ ವರ್ತನೆಗಳು ಲೋಕದೃಷ್ಟಿಗೆ ಬೀಳದೆ ಮಾಯವಾಗುತ್ತಿದ್ದುವು. ಬದುಕಿದ್ದು 'ಪೋಲೀಸರ ಕೈಗೆ ದೊರೆ ತರೆ, ತನಗೆ ಗಂಡಾಂತರ. ಈ ದಾರಿಗೆ ಈ ವಿಚಾರದಿಂದ ಮುಳ್ಳು ಬಿದ್ದಿತು. ಇನ್ನು ಗುಪ್ತಲೇಖನಗಳ ಗತಿಯಾದರೂ ಏನು! ಅವುಗಳನ್ನು ಅಪಹರಿಸಿ ದಾಕೆ ಚಂಚಲೆಯೆ ಆಗಿರಬೇಕು. ಸೀತಮ್ಮ ಪಾಪ, ತನ್ನನ್ನೆ ಹಿಡಿದುಕೊಂಡಿ ದ್ದವಳು. ಚಂಚಲೆಯಿದ್ದಾಗ, ತನ್ನಲ್ಲಿ ಪ್ರೇಮೋನ್ಮಾದವಾಗಿದ್ದಾಗ, ಬುದ್ಧಿ

ವಿಕಲವಾಗಿದ್ದಾಗ, ಚಂಚಲೆಯನ್ನೂ ಆಕೆಯ ಗುಪ್ತ ಕ್ರಿಯೆಗಳನ್ನೂ ಸಂಚಿಟ್ಟು ನೋಡದ ಅನವಧಾನತೆಯಿದ್ದಾಗ, ಚಂಚಲೆಯೆ ಅವುಗಳನ್ನು ಅಪಹರಿಸಿರಬೇಕು. ಹೃದಯದ ಪ್ರೇಮದಲ್ಲಿ ಮಾತ್ರ ತೃಪ್ತಿಹೊಂದದೆ ಲಿಖಿತ ಪ್ರೇಮಾಧಾರಗಳನ್ನು ಕಳುವ ಹೆಣ್ಣು ಸಾಮಾನ್ಯಳಾಗಿರಬಹುದೆ? ಕದ್ದವಳು ತಾನಾಗಿ ಒಪ್ಪಿಕೊಳ್ಳುವುದಿಲ್ಲ. ಹಾಗಾದರೆ ಬಲಾತ್ಕಾರ ಪ್ರಯೋಗವೇ? ಅದರ ಅವಸಾನವಾದರೂ ಎಲ್ಲಿ? ತನಗೂ ಚಂಚಲೆಗೂ ವೆಂಕಟರಾಯನಿಗೂ ಸೀತಮ್ಮನಿಗೂ ಸಂಬಂಧಿಸಿದ ಆ ಮುಖ್ಯ ಲೇಖನಗಳು ಮರಳಿ ತನ್ನ ಕೈಗೆ ಬಾರದಿದ್ದರೆ, ಲೋಕದಲ್ಲಿ ಮುಖ ತೋರಿಸಿಕೊಂಡು ಬದುಕುವುದಾದರೂ ಹೇಗೆ? ತನ್ನವಸ್ಥೆ ಏನೆಂದು ಗಾಢವಾಗಿ ಆಲೋಚಿಸುವ ದುರ್ಗುಣ ಶ್ರೀಧರನಲ್ಲಿ ಇದುವರೆಗೆ ಇರಲಿಲ್ಲ. ಈಗ ವಿಚಾರಿಸುತ್ತಾನೆ–ಅದು ಭಯಂಕರವೇ ಆಗಿದ್ದಿತು. ತನ್ನ ಕೈಗೆ ತಾನೇ ಜೇಡಿ ಹಾಕಿ, ಅದರ ಬೀಗದ ಕೈಯನ್ನು ವಿರೋಧಿಗಳ ವಶಕ್ಕೆ ಕೊಟ್ಟಂತಾಯಿತು. ಒಂದು ಸಾಧನೆಗೆ ಹತ್ತು ಉಪಾಯಗಳು ನುಗ್ಗಿ ಬರುತ್ತಿದ್ದ ಅವನ ಬುದ್ಧಿಯಿಂದು ಪಂಗುವಾಗಿದೆ. ಅವನ ಮನಸ್ಸು ಖಾಲಿ ಬೆಂಕಿಪೆಟ್ಟಿಗೆಯಂತೆ ಟೊಳ್ಳಾಗಿದೆ. ಒರೆದು ಬೆಳಕು ಮಾಡೋಣವೆಂದರೆ ಒಂದೇ ಒಂದು ಕಡ್ಡಿಯಿಲ್ಲ. ಬಂದುದೆಲ್ಲ ಬರಲಿ, ಎನ್ನುವ ಅಲಕ್ಷ್ಯಭಾವವು ಅವನಿಗೆ!

ಆದರೂ ಸೀತಮ್ಮನ ಪಲಾಯನಕ್ಕಿಂತಲೂ ಚಂಚಲೆಯ ವಿರೋಧವು ಹೆಚ್ಚು ದುಷ್ಪರಿಣಾಮಕಾರಿಯಾದೀತೆಂದು ಆತನ ಮನಸ್ಸು ಕಳವಳಿಸಿತು.

ಅದೇ ದಿನ ಬೆಳಗ್ಗೆ ಚಂಚಲೆಯ ಕಡೆಯಿಂದ ಹುಡುಗನೊಬ್ಬ ಬಂದು, 'ತಮ್ಮ ಕೈಪೆಟ್ಟಿಗೆಯೊಂದು ಚಂಚಲಮ್ಮನವರ ವಶದಲ್ಲಿದೆಯಂತೆ. ಸಾಮಾನು ತರುವ ಅವಸರದಲ್ಲಿ ಅದೂ ಅವರ ಗಂಟಿನಲ್ಲಿ ಸೇರಿಕೊಂಡಿತಂತೆ' ಎಂದನು. 'ನಾಡಿದು ಸಾಯಂಕಾಲ ಬರುತ್ತೇನೆ, ಹೇಳು' ಎಂದು ಆ ಹುಡುಗನನ್ನು ಕಳುಹಿಸಿಕೊಟ್ಟನು. ಆರಿಹೋಗಿದ್ದ ಪಂಚಪ್ರಾಣಗಳಲ್ಲಿ ಒಂದು ಹಿಂದೆ ಬಂದಂತಾಯಿತು.

ಸೀತಮ್ಮನ ಅದೃಶ್ಯತೆಯ ಸಮಸ್ಯೆ ಮಾತ್ರ ಬಿಚ್ಚಲಿಲ್ಲ. ಶ್ರೀಧರನು ತನ್ನ ಕಚೇರಿಯಲ್ಲಿ ಚಿಂತಾಕ್ರಾಂತನಾಗಿ ಕುಳಿತಿದ್ದ. ಅಲ್ಲಿದ್ದ ಎರಡು ಮೂರು ಮಂದಿ ಗುಮಾಸ್ತರನ್ನು ಕಾರ್ಯಾಂತರದಲ್ಲಿ ಕಳುಹಿಸಿ, ಕೈಮೇಲೆ-ಕದಪನ್ನು ಆತುಕೊಂಡು ವ್ಯಾಕುಲನಾಗಿ ಕುಳಿತಿದ್ದ.

ಅಷ್ಟರಲ್ಲಿಯೆ ಕಚೇರಿಯ ಬಾಗಿಲು ಡಬ್ಬೆಂದು ತೆರೆಯಿತು. ರಾಮಣ್ಣ ಒಳಗೆ ಪ್ರವೇಶಿಸಿದ. ಶ್ರೀಧರ ಬೆಚ್ಚಿಬಿದ್ದು ಕುಳಿತಲ್ಲಿಂದ ಎದ್ದ. 'ಯಾರು ರಾಮಣ್ಣ! ಇಷ್ಟು ಬೇಗನೆ ನೀನು ಬರಬಹುದೆಂದು ಗೊತ್ತೆ ಇರಲಿಲ್ಲ' ಎಂದು ಶ್ರೀಧರನು ಆತನನ್ನು ಸ್ವಾಗತೀಕರಿಸಿದ.

ರಾಮಣ್ಣ:– (ಶಾಂತ ಮುಖಭಾವದಿಂದ) ನನಗೂ ತಿಳಿದಿರಲಿಲ್ಲ ಭಾವ! ಇಷ್ಟು ಬೇಗನೆ ಬರಲೇಬೇಕಾಯಿತು ಬಾರದೆ ನಿರ್ವಾಹವಿಲ್ಲ ವಾಯಿತು.

ಶ್ರೀಧರ:–ಏನು ಮನೆಯಲ್ಲಿ ಅಸ್ವಾಸ್ಥ್ಯವೇ? ನನಗೊಂದೂ ತಿಳಿದಿಲ್ಲವಲ್ಲ!

ರಾಮಣ್ಣ:– ಮನೆಯ–ನನ್ನ ಮನೆಯಲ್ಲಿ–ಎಲ್ಲರೂ ಕ್ಷೇಮದಲ್ಲಿದ್ದಾರೆ; ಜೀವಂತರಾಗಿದ್ದಾರೆ. ಆದರೆ ನಿನ್ನ ಮನೆಯಲ್ಲಿ ಜನಸಂಖ್ಯೆ ಕಡಿಮೆಯಾಗಿದೆ ಎಂದು ಕೇಳುತ್ತೇನಲ್ಲ!

ಶ್ರೀಧರ:– ಅಯ್ಯೊ ರಾಮು! ಎಂತಹ ಗ್ರಹಚಾರ ಹೇಳು! ಅತ್ತಿಗೆ ಎಂದರೆ ದೇವತಾಸ್ತ್ರೀಯೆಂದು ಭಾವಿಸಿದ್ದೆ. ಎಂತಹ ವಿನಯ! ಎಂತಹ ಗಂಭೀರತೆ! ತೋರಿಕೆಗೆ ಎಂತಹ ನಡತೆ! ಮುಂದೆ ಹೇಳುವುದಕ್ಕೆ ಬಾಯಿ ಬರುವುದಿಲ್ಲ!

ಬಾಯಿ ಆಡದುದನ್ನು ಕಣ್ಣೀರು ಹೇಳಿತು. ಶ್ರೀಧರನಿಗೆ ವ್ಯಸನ ವಾಗಿತ್ತು.

ರಾಮಣ್ಣ:– ನಿನ್ನ ಬಾಯಿ ಬಾರದಿರಲಿ, ಆಕ್ಷೇಪವಿಲ್ಲ. ಆದರೆ ನಾನೇನು ಮಾಡಬೇಕೆಂಬುದನ್ನು ಹೇಳು.

ಶ್ರೀಧರ:– ಜಾಗ್ರತೆಯಿಂದ ಮಾತಾಡು ರಾಮು! ನನ್ನ ಅನ್ನದಿಂದ ಕೊಬ್ಬಿದ ದೇಹ ನಿನ್ನದು.

ಶ್ರೀಧರನ ಬಾಯಿಯಿಂದ ಇಂತಹ ಮಾತು ಬೀಳುವ ಮೊದಲೆ, ರಾಮಣ್ಣನು ಜೇಬಿನೊಳಗೆ ಕೈಹಾಕಿ ರಾಜಿನಾಮೆಯನ್ನು ತೆಗೆದು ಶ್ರೀಧರನ ಕೈಯಲ್ಲಿಟ್ಟು 'ಇನ್ನುಮುಂದೆ ಅಜಾಗ್ರತೆಯಿಂದ ಮಾತಾಡಿದರೆ ತಪ್ಪಿಲ್ಲವಷ್ಟೆ' ಎಂದ

ಶ್ರೀಧರ:– ಏನೊ ರಾಮು! ಇತರರ ಹಣದಿಂದ ಒಂದೆರಡು ತಿಂಗಳು ಊರೂರು ಅಡ್ಡಾಡಿ ದೊಡ್ಡ ಸುಲ್ತಾನನಾಗಿಬಿಟ್ಟೆಯಲ್ಲ. ಈ ಪ್ರಪಂಚವನ್ನು ಬಿಟ್ಟು ಚಲಚ್ಚಿತ್ರ ಪ್ರಪಂಚಕ್ಕೇರಿ ಅಲ್ಲಿಯ ದೃಶ್ಯಗಳನ್ನು ತೋರಿಸುತ್ತಿರುವೆಯಲ್ಲ!

ರಾಮಣ್ಣ:- ನಿನ್ನ ದಾಸನಾಗಿದ್ದ ನನ್ನ ಜೀವ ಹಗರಣವಾಗಿತ್ತು. ಈಗ ಆ ದಾಸ್ಯ ಹರಿದುಹೋಗಿದೆ. ಇನ್ನು ವರಕೀಯ ಸಭ್ಯಗೃಹಸ್ಥನಿಗೆ ದೊರೆಯುವ ಪುರಸ್ಕಾರ ನನಗೂ ದೊರೆಯಬೇಕು. ಭಾವ . . . ಇರಲಿ. ನಾನೀಗ ಮಾಡಬೇಕಾದುದೇನು? ನೀನೆ ಹೇಳು.

ಶ್ರೀಧರ– ನಿನ್ನ ತಂಗಿ ಕಂಡವರೊಡನೆ ಪಲಾಯನ ಮಾಡುವ ಸ್ವಭಾವದವಳಾಗಿದ್ದರೆ ಯಾರೇನು ಮಾಡುವುದು? ಯಾರೇನು ಬೋಧಿಸುವುದು?

ರಾಮಣ್ಣ:- ನಿನ್ನ ಬೋಧನೆ ನನಗೆ ಬೇಕಾಗಿಲ್ಲ. ನನ್ನ ಪ್ರಶ್ನೆಗೆ ಉತ್ತರ ಕೊಡಬೇಕು. ಅದೊಂದು ನನಗೆ ಬೇಕಾದುದು. ಆ ಉತ್ತರ ಬಾರದೆ ನಾನು ಇಲ್ಲಿಂದ ಕದಲುವುದಿಲ್ಲ.

ಶ್ರೀಧರ.– ನಾನೇನು ನಿನ್ನ ತಂಗಿಯ ಮೈಗಾವಲಿನವನೆ?

ರಾಮಣ್ಣ:- ಆ ಕೆಲಸವನ್ನು ನಿನಗೆ ಯಾರೂ ಕೊಡಲಿಲ್ಲ; ಎಂಬುದು ನಿಜ. ಆದರೆ ನನ್ನ ತಂಗಿ, ಸೀತಮ್ಮ ಇಷ್ಟು ವರ್ಷಗಳಿಂದ ನಿನ್ನಲ್ಲಿದ್ದುದು ನಿಜವೇ?

ಶ್ರೀಧರ.– ನಿಜ; ಅವಳಿದ್ದುದೆ ತಪ್ಪಾಯಿತು.

ರಾಮಣ್ಣ.- ಹಾಗೆಯೇ ನಾನೂ ಭಾವಿಸುತ್ತೇನೆ. ಆಕೆಯ ಸಂರಕ್ಷಣೆಯ ಭಾರವನ್ನು ತಾನೇ ಹೊರುವೆನೆಂದು ಎದೆತಟ್ಟಿ ಹತ್ತುಬಾರಿ ನೀನು ನನ್ನಲ್ಲಿ ಹೇಳಿದುದಿರಬಹುದು. ಇದೂ ನಿಜವೇ?

ಶ್ರೀಧರ.– ಗತಿಯಿಲ್ಲದೆ ಮನೆಗೆ ಬಂದು ಬೀಳುವಾಗ ಯಾರೇನು ಮಾಡಬಹುದು?

ರಾಮಣ್ಣ:– ನಿಜ. ಆಕೆಗೆ ಗತಿಯಿರಲಿಲ್ಲ. ಆಕೆ ಇದುವರೆಗೆ ನಿನ್ನಲ್ಲಿ ಇದ್ದಳು. ನಿನ್ನ ತೊತ್ತಿನಂತೆ ಇದ್ದಳೆಂದು ಭಾವಿಸಿಕೊಳ್ಳೋಣ. ಅಂತೂ

ಇದ್ದಳು. ಜೀವಂತಳಾಗಿಯೆ ಇದ್ದಳು. ನೀನು ತಾಯಿ ಹೆಂಡಿರನ್ನು ಪರ ಸ್ಥಳಕ್ಕೆ ಕಳುಹಿಸಿಕೊಟ್ಟೆ. ಅವಳನ್ನು ಏಕಾಕಿನಿಯನ್ನು ಮನೆಯಲ್ಲಿ ಇರಿಸಿದೆ. ನಿನ್ನ ಉದ್ದೇಶವೇನಿತ್ತೊ ದೇವನೆ ಬಲ್ಲ. ನೀನು ಮನೆಗೆ ಬಂದಾಗ ಅವಳಿರ ಲಿಲ್ಲವಂತೆ. ಈ ಮಾತು ಸತ್ಯವೆಂದೆ ಹೇಳೋಣ. ಜನರು ಏನೇನೋ ಆಡುತ್ತಾರೆ. ಅದು ಸುಳ್ಳೆಂದೇ ಹೇಳೋಣ. ನಿನ್ನ ಮನೆಯಲ್ಲಿ ಇರುವ ಒಂದು ನಾಯಿಮರಿ, ಬೆಕ್ಕಿನ ಮರಿ ಕಾಣೆಯಾದರೆ, ಊರೆಲ್ಲ ಹುಡುಕಿಸುವಿಯೊ ಇಲ್ಲವೊ? ಇದೊಂದು ಸ್ತ್ರೀಜೀವ. ನಾಯಿ ಬೆಕ್ಕುಗಳಿಗಿಂತ ಹೆಚ್ಚು ಬೆಲೆ ಇದಕ್ಕಿದೆ ಎಂದು, ನೀನಲ್ಲದಿದ್ದರೂ ಇತರರು ಭಾವಿಸಬಹುದಾದ ಜೀವ. ಅದು ಆಕಸ್ಮಿಕವಾಗಿ ಕಾಣೆಯಾಯಿತು, ಎಂದು ಭಾವಿಸೋಣ. ನೀನೇನು ಮಾಡ ಬೇಕಾಗಿದ್ದಿತು?

ಶ್ರೀಧರ:- ಪೋಲೀಸರಿಗೆ ತಿಳಿಸಬೇಕಾಗಿದ್ದಿತು ನಿನ್ನ ತಂಗಿ ಪಾಕಶಾಸ್ತ್ರಿ ಯೊಡನೆ ಪಲಾಯನ ಮಾಡಿದಳೆಂದು ಡಂಗುರ ಸಾರಬೇಕಾಗಿದ್ದಿತು. ಅಲ್ಲವೆ?

ರಾಮಣ್ಣ:- ನನ್ನ ತಂಗಿ ಅಂಥವಳಾಗಿದ್ದರೆ, ಕೆಸರ ಹೊಂಡಕ್ಕೆ ಬೀಳು ತ್ತಿದ್ದಳಲ್ಲ. ಅದರೆ, ಅವಳು ಸತ್ತಿರುವಳೋ ಬದುಕಿರುವಳೋ ಎಂದು ನೋಡಿದ ಮೇಲಲ್ಲವೆ ಅವಳ ಪಲಾಯನದ ಸಂಗತಿಯನ್ನು ಸಂಶೋಧಿಸ ಬೇಕಾಗಿದ್ದುದು?

ಶ್ರೀಧರ:- ನನಗೆ ನಿನ್ನಷ್ಟು ವ್ಯವಹಾರ ಜ್ಞಾನವೆಲ್ಲಿದೆ ರಾಮು? ಎರಡು ತಿಂಗಳ ಸಂಚಾರದಿಂದ ಮಹಾಪುರುಷನಾಗಿಬಿಟ್ಟೆ.

ರಾಮಣ್ಣ.- ವ್ಯವಹಾರಜ್ಞಾನ ನಿನಗಿಲ್ಲದಿದ್ದರೆ ಕಲಿಸಿಬಿಡುತ್ತೇನೆ. ಪೋಲಿಸರಾದರೂ ನನ್ನ ಸೋದರಿಯನ್ನು – ನೀನು ಹೇಳುವಂತೆ ಪರಪುರುಷ ನೊಂದಿಗೆ ಪಲಾಯನ ಮಾಡಿದ ಪಾಪಿಷ್ಠೆಯನ್ನು – ಹುಡುಕಿಕೊಡುವರೋ ಇಲ್ಲವೋ ನೋಡುತ್ತೇನೆ. ಇನ್ನೂ ವಿವೇಕದ ಪ್ರಾಯ ಬರಲಿಲ್ಲ. ಲೋಕ ವ್ಯವಹಾರವನ್ನು ಅರಿತವಳಲ್ಲ. ' ಆದರೂ ತಂಗಿ ನನ್ನವಳು . . . ಹೆಣ್ಣು . . ಆದರೂ ಜೀವವುಳ್ಳವಳು ನಾಯಿ ಬೆಕ್ಕುಗಳಿಗಿಂತಲೂ ಹೆಚ್ಚು ಬೆಲೆಯುಳ್ಳವ ಳೆಂದು ನಾನು ಭಾವಿಸುತ್ತೇನೆ. ಪೊಲೀಸರಾದರೂ ಅನ್ವೇಷಣದಲ್ಲಿ ಸಹಾಯಕ ರಾಗುವರೋ ನೋಡಬೇಕು.

ಶ್ರೀಧರ. ದುಡುಕಬೇಡ ರಾಮಣ್ಣ! ದುಡುಕಬೇಡ!

ರಾಮಣ್ಣ.– ಇದಕ್ಕೆ ದುಡುಕುವುದೆಂದು ಹೆಸರಲ್ಲ. ಬೇರೆ ಉಪಾಯ ವಿಲ್ಲ ನೋಡು. ಹೊಣೆಗಾರಿಕೆಯನ್ನು ಕೊಡವಿಬಿಟ್ಟು ನೀನು ಸ್ವಸ್ಥವಾಗಿ ಕುಳಿತುಕೊಂಡಿರುವೆ. ನನಗೆ ಬೇರೆ ದಾರಿಯಿಲ್ಲ ನೋಡು. ಪ್ರಾಯ ಬಾರದ ತಂಗಿಗೆ ಪ್ರಾಯ ಬರುವ ವರೆಗೆ, ಅವಳ ನೀತಿಗೂ ಅನೀತಿಗೂ ನಡತೆಗೂ ನಾನೇ ಹೊಣೆಯಲ್ಲವೆ? ಅವಳ ಮಾತು ಹಾಗಿರಲಿ. ಅವಳ ಗಂಡನನ್ನು ಏನು ಮಾಡಿದೆ ಹೇಳು.

ಶ್ರೀಧರ – ಪ್ರಾಯ ಬಂದವರಿಗೂ ಬಾರದಿದ್ದವರಿಗೂ, ಹೆಚ್ಚೇನು? ಲೋಕದಲ್ಲಿರುವ ಸಕಲ ಮನುಷ್ಯರಿಗೂ ತಾನೊಬ್ಬನೆ ಸಂರಕ್ಷಕನೆಂಬ ಕೊಬ್ಬಿ ನಿಂದ ಆಡುತ್ತಿರುವೆಯಲ್ಲ ರಾಮು?

ರಾಮಣ್ಣ – ನನ್ನ ಭಾವನಿಗೆ ಬುದ್ಧಿ ಕೆಟ್ಟಿದೆಯೆಂದು ಕೇಳಿದ್ದೇನೆ. ಅವನಿಗೆ ಬುದ್ಧಿ ತಿಳಿಯುವ ವರೆಗೆ ಅವನೇನಾಗಿದ್ದಾನೆ? ಎಂದು ತಿಳಿವ ಭಾರ ನನಗೇ ಬಿತ್ತು ನೋಡು.

ಶ್ರೀಧರ – ನಾನು ಹುಟ್ಟಿದ ಹೊಟ್ಟೆಯಿಂದಲೆ ಹೊರಬಂದ ಅಣ್ಣನ ಯೋಗಕ್ಷೇಮಗಳಲ್ಲಿ ನನಗಿಂತಲೂ ಹೆಚ್ಚಿನ ಜವಾಬುದಾರಿ ನಿನ್ನದು, ಅಲ್ಲವೆ?

ರಾಮಣ್ಣ:– ನನ್ನ ಭಾವ ನಿನ್ನ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವ ನೆಂಬುದು ನಿಜ. ಆದರೂ ಅವನಲ್ಲಿರುವ ಹಣವನ್ನು ಕಿತ್ತುಕೊಂಡ ಮೇಲೆ ಆತನ ಯೋಗವೂ ಇಲ್ಲ ಕ್ಷೇಮವೂ ಇಲ್ಲ ನಿನ್ನ ವಿಚಾರದಲ್ಲಿ. ನನಗೆ ಹಾಗಲ್ಲ. ತಂಗಿಯು ಜೀವಂತಳಾಗಿರುವ ವರೆಗೆ ಅವಳು ಸುಮಂಗಲೆಯಾ ಗಿಯೆ ಇರಬೇಕು. ನಿನ್ನಂತಹ ಹಿತಚಿಂತಕರಿಂದ ಒದಗಬಹುದಾದ ಅಕಾಲ ವೈಧವ್ಯವನ್ನು ಸಾಧ್ಯವಾದ ಮನುಷ್ಯಪ್ರಯತ್ನದಿಂದ ತಪ್ಪಿಸಬೇಕು, ಎಂದು ತಂಗಿ ಹುಟ್ಟಿದ ಹೊಟ್ಟೆಯಲ್ಲಿಯೇ ಆಕೆಗಿಂತ ಮೊದಲು ಹುಟ್ಟಿದ ಅಣ್ಣನ ಬಯಕೆಯಿರುವುದರಲ್ಲಿ ಅನ್ಯಾಯವುಂಟೆ?

ಶ್ರೀಧರ:– ಹಾಗಾದರೇನು ನಿನ್ನ ಭಾವನ ಕೊರಳು ಹಿಸುಕುತ್ತಿದ್ದೇನೆ; ಅಥವಾ ಇದುವರೆಗೆ ಹಾಗೆ ಮಾಡಿಲ್ಲವಾದರೆ ಮುಂದಾದರೂ ಹಾಗೆ ಮಾಡು ತ್ತೇನೆ. ಎಂಬ ಅಭಿಪ್ರಾಯವೇ ನಿನ್ನದು?

ರಾಮಣ್ಣ:– ಅಭಿಪ್ರಾಯ ಮಾಡಿಕೊಳ್ಳುವುದು ಸಂಬಂಧಪಟ್ಟ ಮನುಷ್ಯನ ನಡತೆಯನ್ನು ನೋಡಿ. ಕಸಾಯಿಗೆ ಒಪ್ಪಿಸುವ ಪಶುವಿನಂತೆ, ನೀನವನ ಕೈಕಾಲು ಕಟ್ಟಿ ಯಾರ ವಶಕ್ಕೊ ಕೊಟ್ಟಿರುವೆಯೆಂಬ ಸಮಾಚಾರವು ನನ್ನ ಕಿವಿಗೆ ಬಿದ್ದಿದೆ. ಹೀಗಿರುವಾಗ ನೀನವನ ಕೊಲೆ ಮಾಡಿರದಿದ್ದರೆ, ಇನ್ನು ಮುಂದಾದರೂ ಆ ಘೋರಕೃತ್ಯ ಮಾಡಲು ಹಿಂಜರಿವವನಲ್ಲ ಎಂದು ಭಾವಿಸಬೇಕಾಗುತ್ತದೆ. ಆತನ ದೇಹವನ್ನು ತೋರಿಸು ಜೀವಂತನಾಗಿರುವನೊ ಇಲ್ಲವೊ? ಜೀವಂತನಾಗಿದ್ದರೆ ಬುದ್ಧಿವಿಕಲನಾಗಿರುವನೊ ಇಲ್ಲವೊ? ಎಂದು ತಿಳಿವ ಸಂದರ್ಭವನ್ನು ಮೊದಲು ನನಗೆ ಕೊಡು

ಶ್ರೀಧರ:– ಎಚ್ಚರತಪ್ಪಿ ಮಾತನಾಡಬೇಡ ರಾಮು!

ರಾಮಣ್ಣ – ರಾಮು ಎಚ್ಚರತಪ್ಪಿ ಮಾತಾಡುವುದಿಲ್ಲ. ಯಾರಲ್ಲಿ ಹೇಗೆ ಮಾತಾಡಬೇಕೆಂದು ಅವನಿಗೆ ಗೊತ್ತಿದೆ.

ಶ್ರೀಧರ: ನನ್ನಣ್ಣನ ಇರವನ್ನು ಹೇಳದಿದ್ದರೆ ನೀನೇನು ಮಾಡುವೆ?

ರಾಮಣ್ಣ:– ಮಾಡುವುದೇನು? ಅವನ ಸಮಾಚಾರವನ್ನು ತಿಳಿವ ಉಪಾಯವನ್ನು ಹೂಡಬೇಕಾಗುವುದಷ್ಟೆ.

ಶ್ರೀಧರ:– ನಿನ್ನ ಉಪಾಯ ಹೊರಡಲಿ. ಮತ್ತೆ ಹೇಳುತ್ತೇನೆ.

ಇದನ್ನು ಕೇಳಿದೊಡನೆ, ಸ್ವಲ್ಪವೂ ಉದ್ವೇಗವನ್ನು ಸೂಚಿಸದೆ ಶಾಂತವಾಗಿ, ಜೇಬಿನೊಳಗಿಂದ ಕರವಸ್ತ್ರವನ್ನು ತೆಗೆವಂತೆ, ಚಿಕ್ಕದೊಂದು ಪಿಸ್ತೂಲನ್ನು ತೆಗೆದು ಶ್ರೀಧರನ ಎದೆಗೆ ಸರಿಯಾಗಿ ಗುರಿಯಿಟ್ಟನು.

ಶ್ರೀಧರ ಹೆದರಿ ನಡುಗಿದ. ಗಾಳಿಯಲ್ಲಿ ನಡುಗುವ ಎಲೆಯಂತೆ ತತ್ತರಿಸಿ 'ರಾಮಣ್ಣ! ರಾಮಣ್ಣ! ಹುಡುಗಾಟಿಕೆ ಮಾಡಬೇಡವೊ' ಎಂದು ಅರಚಿದ.

ರಾಮಣ್ಣ:– ಇದರಲ್ಲಿ ಹುಡುಗಾಟಿಕೆ ಏನೂ ಇಲ್ಲ ಭಾವಯ್ಯ! ಸರ್ವಥಾ ಹೊರಡದ ಹೃದಯರಹಸ್ಯಗಳನ್ನು ಹೊರಹರಿಯಿಸುವ ನಳಿಗೆ ಇದು. ಈಗ ಗುಟ್ಟು ಹೊರಬೀಳುತ್ತದೆ ನೋಡು.

ಶ್ರೀಧರ:– (ಕಂಪಿಸುತ್ತಾ) ನನ್ನಣ್ಣ ಜೀವಂತನಾಗಿದ್ದಾನೆ. ಸುಳ್ಳಲ್ಲ ಇದು. ಹುಡುಗಾಟಿಕೆ ಮಾಡಬೇಡವೋ . . .

ರಾಮಣ್ಣ :- ಸಂತೋಷ ನಿನ್ನಣ್ಣ ಜೀವಂತನಾಗಿದ್ದಾನೆ . . . . ಈ ಗುಟ್ಟು ಹೊರಬಿತ್ತು . . . ಎಲ್ಲಿ ಹೇಗಿದ್ದಾನೆ ಹೇಳು . . ಹುಡುಗಾಟಿಕೆ ಮಾಡುವ ಈ ಪಿಸ್ತೂಲು ಜೇಬಿನೊಳಗೇ ಸೇರುವುದು

ಶ್ರೀಧರ:- ಅವನಿಗೆ ಹುಚ್ಚು . . . ಹುಚ್ಚರ ಆಸ್ಪತ್ರೆಗ ಕಲ್ಲಿಕೋಟೆಗೆ- ಕಳುಹಿಸಿದ್ದೇನೆ.

ರಾಮಣ್ಣ :- ಮಾತು ಹಾಗೆ ಬರಲಿ, ಭಾವಯ್ಯ. ಈಗಿನ ಹುಡುಗಾಟ ಇಲ್ಲಿಗೆ ಮುಗಿಯಿತು ಇನ್ನು ಆ ಭಾವನಿಗ ಹುಚ್ಚೋ ಈ ಭಾವನಿಗೆ ಹುಚ್ಚೊ ನೋಡಿದ ಮೇಲೆ ಅವಶ್ಯವಾದರೆ ಪುನಃ ಹುಡುಗಾಟವು ಪ್ರಾರಂಭ ವಾದೀತು. ಇಲ್ಲವಾದರೆ ಇಲ್ಲ

ಹೀಗೆಂದು ಪಿಸ್ತೂಲನ್ನು ಸ್ವಸ್ಥಾನದಲ್ಲಿಟ್ಟ. ಶ್ರೀಧರನಿಗ ಹೋದ ಪ್ರಾಣ ಬಂತು

ಶ್ರೀಧರ – ನನ್ನದು ತಪ್ಪಾಯಿತು ರಾಮಣ್ಣ! ಒಡಹುಟ್ಟಿದ ಅಣ್ಣನೆಂದು ಹಿಂದೆ ಮುಂದೆ ನೋಡದ ಅವನಿಗಾಗಿ ಹಣ ಖರ್ಚು ಮಾಡಿದೆ. ಆತನ ಹೆಂಡತಿಯಿಂದಾಗಿ ಅಪಕೀರ್ತಿ ಹೊತ್ತೆ. ಮಾಡಿದುದರ ಫಲವನ್ನು ತಿಂದೆ. ನನಗೊಂದು ಸಂತೋಷವೇನೆಂದರೆ, ನೀನೊಬ್ಬನು ಅವನ ಸಂರಕ್ಷಕನಾಗಿ ಬಂದು, ನನ್ನ ಕಷ್ಟಗಳನ್ನೂ ಹೊಣೆಗಾರಿಕೆಯನ್ನೂ ದೂಡುವೆಯಲ್ಲ! ಎಂಬುದು. ಇಂದಿಗೆ ನನ್ನ ಮತ್ತು ನಿನ್ನ, ನಿನ್ನ ತಂಗಿಯ ಮತ್ತು ಭಾವನ ಸಂಬಂಧ ಕಡಿಯಿತು.

ರಾಮಣ್ಣ. ನೀನು ಅವರಿಗಾಗಿ ಹಣ ಖರ್ಚು ಮಾಡಿದೆ. ಅದಕ್ಕಿಂತ ಎರಡು ಪಾಲು ಹೆಚ್ಚು ಕಸಿದೆ. ಅದು ಹಾಗಿರಲಿ. ನೀನು ಮಾಡಿದುದೆಲ್ಲ ಉಪಕಾರವೆಂದೆ ಭಾವಿಸುತ್ತೇನ. ಆದರ ಮನುಷ್ಯನ ದೇಹವೊಂದು ಉಳಿದರೆ ಸಾಲದು ನೋಡು. ಆತನ ಪೌರುಷವನ್ನು ಹಸಿ ಹಸಿಯಾಗಿ ತಿಂದು ತೇಗಿ ಉಗುಳಲು ಯತ್ನಿಸಬಾರದು. ಹೀಗೆ ಮಾಡದಿರುತ್ತಿದ್ದರೆ ಇಂದು ನಿನಗೂ ನನಗೂ ವೈಷಮ್ಯವಿರುತ್ತಿರಲಿಲ್ಲ.

ಶ್ರೀಧರ:- ಮಹಾರಾಯ! ನಿನಗೆ ತಿಳಿಯಬೇಕಾದುದೆಲ್ಲ ತಿಳಿಯಿತಷ್ಟೆ? ಇನ್ನಿಲ್ಲಿ ಇರಬೇಕಾದ ಅವಶ್ಯವೇನು? ಒಮ್ಮೆ ದಯಮಾಡಿ ಸವಾರಿ ಹೊರಡೋ ಣಾಗುವುದೇ?

ತಾತ್ಸಾರಸೂಚಕವಾದ ಅಟ್ಟಹಾಸದೊಂದಿಗೆ ರಾಮಣ್ಣನು ಹೊರಟು ಹೋಗುವಾಗ 'ಅವಶ್ಯವಿದ್ದರೆ ಇನ್ನೊಮ್ಮೆ ಕಾಣುತ್ತೇನೆ ಭಾವಯ್ಯ ನಿನ್ನ ಉಪಕಾರಕ್ಕೆ ಕೃತಜ್ಞನಾಗಿದ್ದೇನೆ' ಎಂದನು. ಶ್ರೀಧರನ ಅಖಂಡದೇಹದಲ್ಲಿ ಇದ್ದ ನೆತ್ತರವನ್ನೆಲ್ಲ ಒಂದೇ ಗುಟುಕಿನಿಂದ ಕುಡಿದುಬಿಟ್ಟರೆ ಆಗಬಹುದು- ಎಂದವನ ಹೃದಯದಲ್ಲಿತ್ತು.

ರಾಮಣ್ಣ ಹೊರಗೆ ಕಾಲಿಟ್ಟೊಡನೆ ಬಾಗಿಲು ಬಿದ್ದಿತು. ಶ್ರೀಧರನ ಮುಖವು ಜೋಲುಬಿದ್ದಿದೆ ಕೊಡಲಿಯಿಂದ ಹೊಡೆದಂತಾಗಿತ್ತು ಎದೆಗೆ. ಪರಿಸ್ಥಿತಿಯು ಭಯಂಕರವಾಗಿದೆ. ಶ್ರೀಧರನು ಮಕ್ಕಳಂತೆ ಅಳುತ್ತಿದ್ದ.

'ಮುಂದೇನಾಗುವುದೋ ದೇವರೇ ಬಲ್ಲ. ಲೋಕದ ಕಣ್ಣಿಗೆ ಸುಣ್ಣ ವಾಗಿದ್ದೇನೆ. ವಿರೋಧಿಗಳು ಹಲ್ಲುಮಸೆಯುತ್ತಿದ್ದಾರೆ. ಎಂದೂ ಆಗದ ಪರಾಭವ ಇಂದಾಯಿತು. ಭವಿಷ್ಯವು ದೈವಾಧೀನ ಆದರೂ ಮಾಡಬೇಕಾ ದುದನ್ನು ಮಾಡಬೇಡವೆ? ಅತ್ತಿಗೆ ಅಣ್ಣಂದಿರ ಪ್ರಕರಣವು ಹೀಗಾಯಿತು. ಇನ್ನದರಲ್ಲಿ ಕೈಹಾಕುವಂತಿಲ್ಲ. ಸೀತಮ್ಮ ಜೀವಂತಳಾಗಿಯೇ ಇರುವಳೆಂಬುದು ರಾಮಣ್ಣನ ಮಾತಿನಿಂದ ಧ್ವನಿಸಿದ ಹಾಗೆ ತೋರುತ್ತದೆ. ಇದರಿಂದ ಮುಂದೆ ಅನರ್ಥವಾಗಬಹುದಾದರೂ ಸದ್ಯದ ವಿಪತ್ತು ದೂರವಾಯಿತು. ಅದಕ್ಕೆ ಪ್ರತಿಬಂಧಕ್ರಿಯೆ ಮಾಡಲು ಅವಕಾಶವಿದೆ ರಾಮಣ್ಣನ ಪಿಸ್ತೂಲಿಗೆ ಪ್ರತಿ ಯಾಗಿ ನಾನೊಂದು ಪಿಸ್ತೂಲನ್ನು ಸರ್ವದಾ ಜೇಬಿನಲ್ಲಿ ಇಟ್ಟುಕೊಂಡರೆ ತಾತ್ಕಾಲಿಕ ಕಷ್ಟ ಪರಿಹಾರವಾಯಿತು. ಆದರೆ ಚಂಚಲೆ ಅಪಹರಿಸಿದ ಪೆಟ್ಟಿಗೆ ಯಲ್ಲಿ ರಾಮಣ್ಣನ ಕೋಪವನ್ನುದ್ರೇಕಿಸುವ ಪತ್ರಗಳೂ ಇವೆಯಲ್ಲ! ಅವು ಗಳನ್ನು ಸ್ವಾಧೀನಪಡಿಸಿಕೊಳ್ಳದೆ ಗತ್ಯಂತರವಿಲ್ಲ!' ಹೀಗೆ ಶ್ರೀಧರನಿಗೆ ಕರ್ತವ್ಯ ಬೋಧೆಯಾಯಿತು.

ಆದರೂ ಅವನ ಅರ್ಧ ಜೀವವು ಈ ಮೊದಲೆ ಹೋಗಿದ್ದಿತು.

# ಇಪ್ಪತ್ತಾರನೆಯ ಪ್ರಕರಣ

ಅದೇ ಚಿಕ್ಕ ಬೀದಿ, ಅದೇ ಹೊಲಸು ಕೊಂಪೆ, ಅದೇ ಚಿಕ್ಕ ಮನೆ, ಅದೇ ಗೃಹಶೃಂಗಾರ, ಚಂಚಲೆಯೂ ಮೊದಲಿನವಳೆ. ಆದರೆ, ಶ್ರೀಧರ ರಾಯನು ಆ ಸಂಜೆ ಅಲ್ಲಿಗೆ ಬಂದಾಗ ಹಿಂದಿನ ಶ್ರೀಧರನಾಗಿರಲಿಲ್ಲ. ಅವನ ಆಗಮನ ನಿರೀಕ್ಷಣೆ ಮಾಡುತ್ತಿದ್ದ ಚಂಚಲೆಯೂ ಪೂರ್ವದ ಚಂಚಲೆ ಯಾಗಿರಲಿಲ್ಲ ಕಾಶಿಅಮ್ಮನೂ ಮೊದಲಿನಂತಹ ಸಂಭ್ರಮ ಕುತೂಹಲ ಗಳನ್ನು ತೋರ್ಪಡಿಸಲಿಲ್ಲ. ಎಲ್ಲ ಬೊಂಬೆಯಾಟದ ದೃಶ್ಯಾವಳಿಯಂತೆ ನಡೆ ಯಿತು ಶ್ರೀಧರನು ಒಳಹೊಕ್ಕು ಚಂಚಲೆಯ ಕೋಣೆಯಲ್ಲೊಂದು ಕುರ್ಚಿ ಯನ್ನು ಹಿಡಿದ – ನಿಸ್ಸಂಗಭಾವದಿಂದ' ಮೊದಲು ಹಾಗಿರಲಿಲ್ಲ. ಆ ಮನೆ, ಅದರ ಕೋಣೆಗಳು, ಅದರ ಪ್ರತಿಯೊಂದು ಗೋಡೆ ಮಾಡು ಹಂಚುಗಳೂ ಆತ್ಮೀಯತಾಭಿಮಾನವನ್ನು ಉದ್ರೇಕಿಸುತ್ತಿದ್ದುವು ಈ ದಿನ ಸಂಜೆ, ಮುಸುಕು ವನ್ನು ಹೊಗುವಂತೆ ಶ್ರೀಧರನು ಅಲ್ಲಿಗೆ ಪ್ರವೇಶಮಾಡಿದನು.

ಚಂಚಲೆ 'ಕ್ಷೇಮವ?' ಎಂದು ವಿಚಾರಿಸಿದಳು.

ಶ್ರೀಧರ.– ದೇಹಕ್ಕೇನೋ ಕ್ಷೇಮ, ಆದರೆ ಮನಸ್ಸಿಗೆ ಸುಖವಿಲ್ಲ

ಚಂಚಲೆ:– ಏತರಿಂದ?

ಶ್ರೀಧರ.– ನೀನು ಕೇಳಿರಬಹುದು. ನಮ್ಮ ಮನೆಯಲ್ಲಿದ್ದ ಆ ಹುಡುಗಿ, ನನ್ನಣ್ಣನ ಹೆಂಡತಿ ನಾನು ಅತ್ತಿಗೆಯೆಂದು ಸಂಬೋಧಿಸುತ್ತಿದ್ದ ಗೋಮುಖ ವ್ಯಾಘ್ರ, ಯಾರಲ್ಲಿಯೂ ಹೇಳದೆ ಪಲಾಯನ ಮಾಡಿದಂದಿನಿಂದ ನನ್ನ ಮನಸ್ಸಿಗೆ ಶಾಂತಿಯೇ ಇಲ್ಲ.

ಚಂಚಲೆ:– ಅವರಿದ್ದಾಗ ಸುಖವಿತ್ತು. ಮನಸ್ಸಿಗಾದರೂ ನೆಮ್ಮದಿ ಇತ್ತು.

ಚಂಚಲೆ ಕೂಡ ಇಂತಹ ಕೊಂಕನ್ನರಿತವಳೆಂದು ಶ್ರೀಧರನು ಇದುವರೆಗೆ ಭಾವಿಸಿರಲಿಲ್ಲ.

ಶ್ರೀಧರ.– ಹೌದು; ನಿರ್ಗತಿಕನಾದ ಅಣ್ಣನ ಪತ್ನಿ. ಮನೆ ಮಂದಿ ಯಾಗಿ ನನ್ನೊಡನೆ ವಾಸಿಸುತ್ತಿದ್ದಳು. ಅನಾಥೆಗೆ ಆಶ್ರಯ ಕೊಡುತ್ತಿದ್ದೆನಲ್ಲ ಎಂಬ ಸಂತೋಷವಿದ್ದಿತು. ಕುಟುಂಬದ ಒಳಸುತ್ತಿನಲ್ಲಿ ಹಲಕಾಲದಿಂದ

ವಾಸಿಸುತ್ತ ಬಂದವರು ಆಕಸ್ಮಿಕವಾಗಿ, ಕಣ್ಮರೆಯಾದರೆ ಆಗುವ ವ್ಯಾಕುಲ ವೆಷ್ಟೆಂಬುದು, ಅಣ್ಣ, ತಮ್ಮ, ತಾಯಿ, ಮಗ ಎಂಬ ಸಾಂಸಾರಿಕ ಪ್ರೇಮದಿಂದ ಕಾಲಹರಣ ಮಾಡುವ ಸದ್ಗೃಹಸ್ಥರಿಗೇ ಗೊತ್ತು.

ಇದು ತನ್ನೆಡೆಗೆ ಎಸೆದ ಬಾಣವೆಂದು ಚಂಚಲೆಗೆ ಗೊತ್ತಾಯಿತು.

ಚಂಚಲೆ:– ಸಂದೇಹವೇನು? ಅತ್ತಿಗೆಯೆಂದು ನಿಮಗೆ ತುಂಬ ಪ್ರೀತಿ ಇತ್ತು.

ಶ್ರೀಧರ:– ಅದರಲ್ಲೇನು ಆಶ್ಚರ್ಯ? ಸ್ತ್ರೀಪುರುಷರು ಸಲಿಗೆಯಿಂದಿದ್ದರೆ ಅದೇನೋ ಒಳಗುಟ್ಟಿದೆ ಎಂದು ಭಾವಿಸುವವರಿಗೆ ಆಶ್ಚರ್ಯವಾದೀತು, ಎಲ್ಲರಿಗೂ ಆಗದು . ಇರಲಿ, ನೀನು ಕಳುಹಿಸಿದ ಹುಡುಗ ನನ್ನಲ್ಲಿಗೆ ಬಂದ; ನನ್ನ ಕೈಪೆಟ್ಟಿಗೆಯೊಂದು ಸಾಮಾನಿನ ಸಂಗಡ ಹೇಗೋ ನಿನ್ನ ಕೈಗೆ ಸೇರಿತೆಂಬುದನ್ನು ತಿಳಿಸಿದ. ಅದನ್ನು ಕೊಂಡುಹೋಗೋಣ . . ಎಂದು ಬಂದೆ.

ಚಂಚಲೆ:– ಬಂದುದು ಚೆನ್ನಾಯಿತು ಕೈಪೆಟ್ಟಿಗೆಯನ್ನು ಊರೂರಲ್ಲಿ ಹುಡುಕಬೇಕಾಗಿಲ್ಲ. ಆ ಬಗ್ಗೆ ಯೋಚನೆಪಡಬೇಕಾಗಿಲ್ಲ – ಎಂಬುದನ್ನು ತಿಳಿಸುವುದಕ್ಕಾಗಿಯೇ ತಮ್ಮಲ್ಲಿಗೆ ಜನ ಕಳುಹಿಸಿದೆ.

ಶ್ರೀಧರ.– ಒಳ್ಳೆಯದೇ ಆಯಿತು ಚಂಚಲೆ ನಿನ್ನಲ್ಲಿರುವ ವಸ್ತು ನನ್ನಲ್ಲಿರುವಂತೆಯೇ ಎಂಬುದು ನನಗೆ ಚೆನ್ನಾಗಿ ಗೊತ್ತು ಆದುದರಿಂದಲೆ ನನ್ನ ಮನೆಯಲ್ಲಿದ್ದಾಗಲೂ ಒಳಗೂ ಹೊರಗೂ ಯಾವ ನಿರ್ಬಂಧವನ್ನು ಇಡದೆ ನಿಮಗೆ ಎಡೆ ಕೊಟ್ಟೆ.

ಚಂಚಲೆ:– ಅದಕ್ಕಾಗಿ ಕೃತಜ್ಞಳಾಗಿದ್ದೇನೆ ಶ್ರೀಧರರಾಯರೇ! ನಿಮಗೆ ಜನ ಕಳುಹಿಸಿದುದು ಏಕೆಂದರೆ, ಆ ಪೆಟ್ಟಿಗೆ ನನ್ನಲ್ಲಿದೆ ಎಂದಿಷ್ಟೆ ನಿಮಗೆ ತಿಳಿಸುವುದಕ್ಕೆ!

ಶ್ರೀಧರ:– ಹಾಗೆಂದರೆ?

ಚಂಚಲೆ:– ತಿಳಿಯುವುದಿಲ್ಲವೆ? 'ನನ್ನ ಒಡವೆ ನನ್ನಲ್ಲಿದ್ದರೂ ನಿನ್ನಲ್ಲಿದ್ದರೂ ಸಮಾನ ಫಲ' ಎಂದಿರಲ್ಲವೇ? ಈ ಪೆಟ್ಟಿಗೆಗೆ ಮಾತ್ರ ಅಪವಾದವೇಕೆ? ಇದೂ ನನ್ನಲ್ಲಿದ್ದರೆ ಆಗದೆ?

ಶ್ರೀಧರ:– ಹೇಗಾದೀತು ಚಂಚಲೆ? ಅದರಲ್ಲಿ ಕೇವಲ ನನಗೆ ಮಾತ್ರ ಸಂಬಂಧಿಸಿದ ಪತ್ರಗಳಿವೆ.

ಚಂಚಲೆ:– ನಿಮಗೆ ಮಾತ್ರ ಸಂಬಂಧಪಟ್ಟವುಗಳನ್ನು ಅವಶ್ಯವಾಗಿ ಕೊಂಡುಹೋಗಿರಿ.

ಶ್ರೀಧರ:– ಉಳಿದವುಗಳನ್ನು?

ಚಂಚಲೆ:– ಅವುಗಳ ಸಂಬಂಧ ನನಗೂ ಇದೆಯಲ್ಲ.

ಶ್ರೀಧರ –ಇಂಥ ವಂಚನೆಯ ಮಾತು ನಿನ್ನ ಬಾಯಿಯಿಂದ ಬರಬಾರದು ಚಂಚಲೆ.

ಚಂಚಲೆ·– ನಾನೇನೂ ವಂಚಕಿಯಲ್ಲ. ನೀವು ಆಡಿದಂತೆ ಮಾಡಿರಿ. ನಾನೂ ಆಡಿದಂತೆ ವರ್ತಿಸುತ್ತೇನೆ.

ಶ್ರೀಧರ:– ನಾನೇನು ಆಡಿದ್ದೇನೆ?

ಚಂಚಲೆ.– ಮರೆತುಹೋಯಿತೆ ಶ್ರೀಧರರಾಯರೇ! ದಾದಿ ಕೆಲಸ ಮಾಡುವುದಕ್ಕಾಗಿ ನಾನು ನಿಮ್ಮಲ್ಲಿಗೆ ಬಂದುದಲ್ಲವೆಂಬುದು ನಿಮಗೆ ಚೆನ್ನಾಗಿ ಗೊತ್ತು ನಿಮ್ಮ ಉಪದೇಶ ಹಾಗಿತ್ತು. ನನ್ನ ಕೈಬಿಡುವಂತಿಲ್ಲವೆಂದು ನೀವು ಭಾಷೆ ಕೊಟ್ಟಿದ್ದಿರಿ. ಹಾಗೆ ಮಾಡಿಬಿಡಿರಿ.

ಶ್ರೀಧರ·– ಇದೇ ಶುಭಮುಹೂರ್ತವೆಂದು ನಿನಗೆ ಯಾವ ಜೋಯಿಸರು ಹೇಳಿದರು?

ಚಂಚಲೆ – ನಿಮ್ಮ – ನಮ್ಮ ಒಂದೆರಡು ವರ್ಷಗಳ ಪೂರ್ವಪರಿಚಯದಿಂದ ಲೋಕದಲ್ಲಿ ಕೆಡುಮಾತು ಎದ್ದಿರಲಿಲ್ಲ. ನಾನೂ ತಿಳಿದೊ ತಿಳಿಯದೆಯೊ ಅಥವಾ ವಂಚಿತಳಾಗಿಯೋ ನಿಮ್ಮಲ್ಲಿ ಒಂದೆರಡು ತಿಂಗಳು ಕಾಲಹರಣ ಮಾಡಿದ ಕಾರಣ ಅಲ್ಲದ ಸಲ್ಲದ ನಾಚಿಕೆಗೇಡಿಗೆ ಕಾರಣವಾಗಿದೆ.

ಶ್ರೀಧರ.– ಗುಪ್ತವಾಗಿ ಮಾಡಿದ ಕೆಲಸದಿಂದ ನಾಚಿಕೆ ಕೆಡುವುದಿಲ್ಲ. ಬಹಿರಂಗ ಕಾರ್ಯದಿಂದ ನಾಚಿಕೆ – ಎನ್ನುವ ಮಾತಿಗೆ ಅರ್ಥವೇ ಇಲ್ಲ.

ಚಂಚಲೆ·– ನಿಮಗೆ ಅರ್ಥವಾಗದಿರಬಹುದು. ಅಥವಾ ಆಗುವ ಅರ್ಥ ಬೇಡವಾಗದಿರಬಹುದು. ನನ್ನ ಅವಸ್ಥೆ ಹಾಗಿಲ್ಲವಲ್ಲ.

ಶ್ರೀಧರ.– ಮತ್ತೆ ಹೇಗಿದೆ?

ಚಂಚಲೆ:– ಮತ್ತೆ ಹೇಗೆಂದು ಕೇಳುವಿರಾ? ನನ್ನ ಆತ್ಮವು ನನ್ನ ಸ್ವಾಧೀನತೆಯಲ್ಲಿಯೆ ಇಲ್ಲದಿದ್ದಾಗ, ನಿಮ್ಮೊಡನೆ ಏಕಗೃಹವಾಸದಲ್ಲಿರಲು

ಸಮ್ಮತಿಸಿದಾಗ, ನನ್ನ ಸಮೀಪದ ಬಂಧುಗಳು ಬಹಳವಾಗಿ ಇದಿರಾಡಿದರು ಆಗ ನಾನು, 'ಕುಲಟೆಯಾಗಿರಲು ಶ್ರೀಧರನಲ್ಲಿಗೆ ಹೋಗುವುದಲ್ಲ. ಕುಲ ವ್ರತೆಯಾಗಿರುವುದಕ್ಕೆ' ಎಂದಿದ್ದೆ. ಅಲ್ಲದೆ, ನೀವು ಇಷ್ಟು ಬೇಗನೆ ನನ್ನ ಸಂಬಂಧವನ್ನು ಕಡಿದುಬಿಡಬಹುದೆಂದು ನಾನು ಭಾವಿಸಿರಲಿಲ್ಲ. ಇಂದಲ್ಲ ನಾಳೆಯಾದರೂ ನನ್ನನ್ನು ಗೃಹಿಣಿಯಾಗಿ ಸ್ವೀಕರಿಸುವಿರೆಂಬ ಆಲೋಚನೆಯಿಂದ ಅಲ್ಲಿಗೆ ನನ್ನನ್ನು ಆಮಂತ್ರಿಸಿದಿರೆಂದು ಎಣಿಸಿದ್ದೆ. ನನ್ನ ಸಮೀಪ ಸಂಬಂಧಿ ಗಳಲ್ಲಿ ಹಾಗೆಯೆ ಹೇಳಿದ್ದೆ.

ಶ್ರೀಧರ – ಈಗಲೂ ಹಾಗೇಕೆ ಹೇಳಬಾರದು?

ಚಂಚಲೆ:– ನಿಮ್ಮ ನಡತೆಗೆ ಸರಿಯಾದ ಅರ್ಥವಾಗುವುದಿಲ್ಲ.

ಶ್ರೀಧರ:– ಅದು ಯಾರ ತಪ್ಪು? ನೀನು ಅಂತಹ ಮಾತುಗಳನ್ನು ಅಷ್ಟು ಬೇಗನೆ ಹಬ್ಬಿಸಿದ್ದರೆ ಅದು ನನ್ನ ಅಪರಾಧವೆ? ಇಷ್ಟು ಬೇಗನೆ ನಿನ್ನನ್ನು ಗೃಹಿಣಿಯಾಗಿ ಸ್ವೀಕರಿಸುವ ಆಲೋಚನೆಯಲ್ಲಿರುತ್ತಿದ್ದರೆ, ದಿವ್ಯವಾದ ಮಿರುಗಿನ ಅಕ್ಷರಗಳಲ್ಲಿ ಆಮಂತ್ರಣಪತ್ರಿಕೆಯನ್ನು ಮುದ್ರಣ ಮಾಡಿಸಿ, ಮುಂಡಾಸು ಬಾಸಿಗಗಳನ್ನು ನಾನೆ ನನಗೆ ತೊಡಿಸಿಕೊಂಡು, ಇದೇ ಮನೆಗೆ ಮದುಮಗ ನಾಗಿ ಬಂದು, ನಿನ್ನನ್ನು ಮಂಗಲವಾದ್ಯ ಮೆರವಣಿಗೆಗಳೊಂದಿಗೆ ಕರೆದು ಕೊಂಡು ಹೋಗುತ್ತಿರಲಿಲ್ಲವೆ? ಅದು ದೂರದ ಸಂಭವ ಎಂದಿಷ್ಟೆ ಹೇಳಿದ್ದೆ.

ಚಂಚಲೆ:– ನನ್ನದೆ ತಪ್ಪೆಂದು ಈಗ ಬೋಧೆಯಾಗುತ್ತಿದೆ. ಹೀಗೆ ಆದೀತೆಂದು ಹೇಳಿದ ಬಂಧುಗಳೂ ಇದ್ದರು. ಮಾಡಿದ ತಪ್ಪಿಗೆ ಪ್ರಾಯ ಶ್ಚಿತ್ತವಾಗಬೇಕಾಗಿದೆ ಅಷ್ಟೆ.

ಶ್ರೀಧರ:– ನಿನ್ನ ಬ್ರಹ್ಮಾಂಡಪುರಾಣ ನನಗೆ ಬೇಕಾಗಿಲ್ಲ. ಕೈಪೆಟ್ಟಿಗೆಯ ಗತಿಯೇನು?

-- ಚಂಚಲೆ:– ಅದಕ್ಕೇನೂ ಅಪಾಯವಿಲ್ಲ. ಸುರಕ್ಷಿತವಾಗಿ ಇಲ್ಲಿಯೆ ಇದ್ದುಕೊಳ್ಳಲಿ

ಶ್ರೀಧರ: ಓಹೋ! ಈಗ ತಿಳಿಯಿತು. ಮನುಷ್ಯರನ್ನು ದುಷ್ಕರ್ಮಕ್ಕೆ ಇಳಿಸಿ, ಅನಂತರ ಅಷ್ಟು ಕೊಡು ಇಷ್ಟು ಕೊಡು ಎಂದೂ, ಕೊಡದಿದ್ದರೆ ಮಾಡಿದುದನ್ನು ಪ್ರಕಟಪಡಿಸುತ್ತೇನೆಂದೂ ಭಯ ಹುಟ್ಟಿಸುವ (ಇದಕ್ಕೆ

ಇಂಗ್ಲಿಷಿನಲ್ಲಿ ಬ್ಲೇಕ್ ಮೈಲ್ ಎನ್ನುತ್ತಾರೆ) ಸ್ತ್ರೀ-ಪುರುಷರು ಇಂಗ್ಲಂಡು ಮೊದಲಾದ ಪರದೇಶಗಳಲ್ಲಿ ಅಸಂಖ್ಯಾಕರಾಗಿರುವರು. ನೀನೂ ಅಂತಹ ದೊಂದು ಕೂಟಕ್ಕೆ ಸೇರಿರುವೆ, ನಿನ್ನ ಹಿಂದೆ ದುರ್ಜನರ ತಂಡ ಒಂದಿದೆ ಎಂದು ನಾನು ಭಾವಿಸುತ್ತೇನೆ.

ಚಂಚಲೆ:- ಶ್ರೀಧರರಾಯರೇ! ಹದನುತಪ್ಪಿ ಮಾತಾಡಬೇಡಿರಿ. ನೀವು ದುಷ್ಕರ್ಮಕ್ಕಿಳಿಯಲು ನಾನು ಕಾರಣವೆ? ಮಂಗಳೂರಿನ ಪ್ರತಿಯೊಂದು ಬೀದಿಯ ಪ್ರತಿಯೊಂದು ರಸ್ತೆಯ ಕಂಬಗಳೂ ಮೈಲುಕಲ್ಲುಗಳೂ ಕಾರಣ ಗಳನ್ನು ಕೊಟ್ಟಾವು

ಶ್ರೀಧರ.- ಬಾಯಿಕೆಟ್ಟು ಮಾತಾಡಬೇಡ. ನನ್ನ ದಾರಿ ನನಗೆ ಗೊತ್ತು. ಹೇಗೆ ನಡೆಯಬೇಕೆಂಬುದೂ ಗೊತ್ತು.

ಚಂಚಲೆ – ಹಾಗಾದರೆ ನನ್ನ ದಾರಿಯೂ ಇಂತಹದೆಂದು ನಿರ್ಧರಿಸಿಬಿಡು ತ್ತೇನೆ. ಹೇಳಿಬಿಡಿರಿ. ಅಂದಿನ ಮಾತಿನ ಭವಿಷ್ಯವೇನು?

ಶ್ರೀಧರ: - ಅಂದು ನಾನಾಡಿದ ಮಾತಿನ 'ಧಾಟಿ' ಎಂತಹದೆಂಬುದರ ನೆನೆಪು ನನಗಿಲ್ಲ. ಒಂದು ವೇಳೆ ನಿನ್ನ ಮಾತೆ ಸತ್ಯವಾಗಿರಬಹುದು. ತರ್ಕದ ಮಟ್ಟಿಗೆ ಹಾಗೆ ಒಪ್ಪಿಕೊಳ್ಳೋಣ ಆದರೆ ಈಗಿನ ಸ್ಥಿತಿಯಲ್ಲಿ ಆ ಮಾತು ಇಲ್ಲದ ಹಾಗೆಯೆ ಎಂದು ಭಾವಿಸಿಕೊ. ಅನನ್ಯ ಪ್ರೀತಿಯಿಂದ ಒಬ್ಬ ಪುರುಷ ನನ್ನು ನಂಬಿದ ಸ್ತ್ರೀಯನ್ನು ಆತನು ವಂಚಿಸಿದನೆಂದರೆ, ಅವನಿಗೆ ಪಾಪವುಂಟು. ದೈವಶಾಪವುಂಟು. ನಿನ್ನ – ನನ್ನ ಸಂಬಂಧದಲ್ಲಿ ಈ ಸೂತ್ರವು ಅನ್ವಯಿಸು ವುದಿಲ್ಲ. ನಿನ್ನನ್ನು ನಂಬಿದವನಲ್ಲಿ ಅಪನಂಬಿಕೆ ಸರಳವರ್ತನದಿಂದ ಇದ್ದವ ನಲ್ಲಿ ಕುಹಕಾಚರಣೆ ಸಹವಾಸಪ್ರಾರಂಭದ ದಿವಸಗಳಲ್ಲಿಯೇ ಇಂತಹ ಕುಯುಕ್ತಿಗಳನ್ನು ಶಾಸ್ತ್ರೋಕ್ತವಾಗಿ ಆಚರಿಸಿದಾಕೆಯ ಸಂಗಡ ಒಂದೆ ಮಾಡಿ ನಲ್ಲಿ ವಾಸಮಾಡುತ್ತಿದ್ದರೆ ಯಾರಿಗೇನು ಸುಖ? ದನ ಹುಲಿಗಳನ್ನು ಒಂದೇ ಹಟ್ಟಿಯಲ್ಲಿ ಕಟ್ಟಬಹುದೆ? ನಿನಗೂ ಕೆಲ ಸಂಗತಿಗಳು ತಿಳಿದಿರಲಿಲ್ಲವಂತೆ. ನನಗೂ ತಿಳಿದಿರಲಿಲ್ಲ. ತಿಳಿದ ಮೇಲೆ ನಾವಿಬ್ಬರೂ ಬೇರೆ ವ್ಯಕ್ತಿಗಳಾದೆವು. ಇಷ್ಟು ಪರಿವರ್ತನವಾದ ಮೇಲೆ, ಹಿಂದಿನ ವಾಗ್ದಾನ ಮೊದಲಾದವುಗಳಲ್ಲಿ ಔಚಿತ್ಯವೇನಿದೆ? ಇರಲಿ. ಈಗಲಾದರೂ ನಿನ್ನ ನೈಜಸ್ವಭಾವವನ್ನು ತಿಳಿಸಿದೆ. ಅದರಿಂದ ಉಪಕಾರವಾಯಿತು.

ಚಂಚಲೆ.—ನಿಮಗೆ ಉಪಕಾರವಾಗಿರಬಹುದು. ನನಗಾದ ಅಪಕಾರಕ್ಕೆ ಪ್ರತೀಕಾರವಾಗಬೇಕು.

ಶ್ರೀಧರ:— ನಿನ್ನಿಂದ ಏನಾಗುವುದೋ ಅದನ್ನೆಲ್ಲ ಮಾಡು. ದೊಡ್ಡ ಪರ್ವತವನ್ನು ಚಿಕ್ಕಿಲಿ ಕಡಿಯಲಿ . . ನನ್ನ ಕೈಪೆಟ್ಟಿಗೆ . .

ಚಂಚಲೆ:— ನಾಳೆ ನಿಮ್ಮ ಮೇಲೆ ದಾವೆ ಮಾಡುತ್ತೇನೆ. ಅದಕ್ಕಾಗಿ ನನಗೆ ಕೈಪೆಟ್ಟಿಗೆ ಬೇಕು.

ಶ್ರೀಧರ·— ಏನೆಂದು ದಾವೆ?

ಚಂಚಲೆ.— ಏನೆಂದು ತಿಳಿಯದೆ? ಇದ್ದುದನ್ನು ಇದ್ದಂತೆ ನ್ಯಾಯಾಧೀಶರ ಮುಂದೆ ಇಡುತ್ತೇನೆ.

ಶ್ರೀಧರ:— ಹಾಗೆಯೇ ಮಾಡು, ಅಡ್ಡಿಯಿಲ್ಲ ನಿನಗಿರುವ ಕಾನೂನು ನನಗೂ ಇದೆ ನಿನ್ನ ಸತ್ಯಗಳಿಗೆ ನಾನೂ ರುಜುವಾತು ಕೊಡುತ್ತೇನೆ. ನ್ಯಾಯಾಧೀಶರು ವಿಧಿಸಿದ ಶಿಕ್ಷೆಗೆ ತಲೆಬಾಗಿ ಸಮ್ಮತಿ ಸೂಚಿಸುತ್ತೇನೆ. ಇಷ್ಟೆ ತಾನೆ ನಿನ್ನ ಪ್ರತೀಕಾರ? ನಿನಗೆ ಬೇಕಾದ ಪತ್ರಗಳನ್ನು ಇಟ್ಟುಕೊ. ಉಳಿದವುಗಳನ್ನು ಇತ್ತ ಕೊಡು.

ಚಂಚಲೆ:— ನನಗೆ ಸಂಬಂಧಿಸಿದ ಪತ್ರಗಳು ನನಗೆ ಬೇಕು. ಉಳಿದವುಗಳು ಸೀತಮ್ಮ ವೆಂಕಟರಾಯರಿಗೆ ಬೇಕು.

ಶ್ರೀಧರ:— ಇತರರ ಕೆಲಸಗಳಲ್ಲಿ ಕೈಹಾಕುವ ಅಧಿಕಪ್ರಸಂಗ ನಿನಗೆ ಬೇಡ ಚಂಚಲೆ! ಉಳಿದವುಗಳನ್ನು ನನಗೆ ಕೊಡು.

ಚಂಚಲೆ·— ಕೊಡದಿದ್ದರೆ . . ?

ಶ್ರೀಧರ.— ಹಾಗೆನ್ನುವ ಶಕ್ತಿ ನಿನಗಿಲ್ಲ

ಚಂಚಲೆ.— ನಿಮ್ಮಲ್ಲಿ ಸ್ಪಷ್ಟವಾಗಿ ಹೇಳಿಬಿಡುತ್ತೇನೆ ಅವು ನಿಮಗೆ ದೊರೆವಂತಿಲ್ಲ.

ಶ್ರೀಧರನ ಸಿಟ್ಟು ತಲೆಗೇರಿತು ಕುರ್ಚಿಯಿಂದ ಮೇಲೆದ್ದು ಕೈಯೆತ್ತಿ 'ಏನೆಂದೆ?' ಎಂದು ಅಟ್ಟಹಾಸದಿಂದ ಗದರಿಸಿದನು.

ಚಂಚಲೆ:— ಆ ಪೆಟ್ಟಿಗೆಯಲ್ಲಿರುವ ಒಂದು ಚೂರು ಕಾಗದವೂ ನಿಮಗೆ ದೊರೆಯುವಂತಿಲ್ಲ.

ಶ್ರೀಧರರಾಯನು ಕೋಪದಿಂದ ಕುರುಡನಾಗಿದ್ದನು. ನಿನ್ನ ಕುತ್ತಿಗೆ ಹಿಸುಕಿದರೆ ಕೇಳುವವರಾರು? ಎಂದು ಚಂಚಲೆಯ ಕಡೆಗೆ ಹಾರಿ ಆಕೆಯ ಕೊರಳನ್ನು ಹಿಸುವುದಕ್ಕೆ ಸಿದ್ಧನಾಗಿದ್ದನು.

'ಅಯ್ಯೋ! ಕೊಲ್ಲುತ್ತಾರೆ! ಕೊಲ್ಲುತ್ತಾರೆ!' ಎಂದಾಕೆ ಅರಚಿದಳು.

ಮುಂದೆ ಏನಾಯಿತೆಂಬ ವಿವರಗಳು ಯಾರಿಗೂ ತಿಳಿಯವು. ನಾಲ್ಕಾರು ದಾಂಡಿಗರು ದೊಡ್ಡ ದೊಡ್ಡ ಡೊಣ್ಣೆ ಹಿಡಿದುಕೊಂಡು, ಕಿಟಕಿಯ ಸಂದಿನಿಂದ, ಬಾಗಿಲ ದಾರವಂದದ ಎಡೆಯಿಂದ, ಗೋಡೆಯ ಆಚೆಯಿಂದ, ಮನೆಯ ಈಚೆ ಯಿಂದ ದಬಡಬನೆ ಸದ್ದುಮಾಡಿಕೊಂಡು 'ಹೊಡೆಯಿರಿ! ಬಡಿಯಿರಿ!' ಎಂದು ಬೊಬ್ಬಿಟ್ಟುದೂ, ರಪ್ಪೆಂದು ಒಂದು ಸದ್ದಾದುದೂ, ನೆಲಕ್ಕೆ ಏನೋ ಒಂದು ವಸ್ತು ದೊಪ್ಪನೆ ಬಿದ್ದುದೂ, 'ಕೊಂದರೋ ಕೊಂದರು, ಸಹಾಯಕ್ಕೆ ಬನ್ನಿ' ಎಂದು ಕರ್ಣಕಠೋರ ಕ್ರಂದನವೊಂದು ಕೇಳಿಸಿದುದೂ, ಮುದಿ ಕಾಶಿ 'ಅಯ್ಯೊ ಮಗಳೆ! ಬೇರೆ ಯಾರಿಗೇನಾದರೂ ಚಿಂತೆಯಿಲ್ಲ. ನೀನೊಬ್ಬಳು ಉಳಿದರೆ ಸಾಕು' ಎಂದು ಬೊಬ್ಬಿರಿದುದೂ ಮಾತ್ರ ಗೊತ್ತು.

ಬೀದಿಯಲ್ಲಿ ಪ್ರಾಣರಕ್ಷಣೆಗೆ ಎಂಬಂತ ಒಂದು ವ್ಯಕ್ತಿ ಓಡಿದುದನ್ನು ಯಾರೋ ಕಂಡರು.

ಮತ್ತೇನೂ ತಿಳಿಯಲಿಲ್ಲ, ಕತ್ತಲೆಯೋ ಕತ್ತಲೆ!

# ಇಪ್ಪತ್ತೇಳನೆಯ ಪ್ರಕರಣ

ತಾನು ಮುಂಬಯಿಯನ್ನು ಬಿಟ್ಟು ಊರಿಗೆ ಹೊರಡುವುದರ ವಿಷಯವಾಗಿ ಬರೆದ ಪತ್ರದಲ್ಲಿ ರಾಮಣ್ಣನು ಹೀಗೆ ಬರೆದಿದ್ದನು – ಬೇಸರು ನನ್ನ ಜೀವನವನ್ನೆ ತಿನ್ನುತ್ತಿದೆ. ಇದು ಸುಳ್ಳಲ್ಲ; ಸತ್ಯವೆ. ಅತ್ಯವಸರದಲ್ಲಿ ಮುಂಬಯಿಗೆ ನಡೆದೇಬಿಡಬೇಕೆಂದು ಶ್ರೀಧರನು ರಾಯಸ ಕೊಟ್ಟಾಗ ಇನ್ನು ಅಲ್ಲಿ ಎಂತಹ ಮಹಾಕಾರ್ಯಗಳಿಗೆ ಕೈಗೊಡುವುದಿದೆಯೊ? ಎಂದು, ರಾಮಣ್ಣನ ಭಾವನೆಯಿತ್ತು. ಅಲ್ಲಿಗೆ ಹೋದ ಮೇಲೆ ಅಂತಹ ಬಿಸಿಬಿಸಿ ಕೆಲಸಗಳೇನೂ ಗೋಚರಿಸಲಿಲ್ಲ. ಎಲ್ಲ ತಣ್ಣಗೆ! ದಿನಕ್ಕೆ ಹತ್ತು ಮಂದಿಯನ್ನು ಕಾಣಬೇಕೆಂದು ಹುಕುಂ ಕೊಟ್ಟಿದ್ದನಷ್ಟೆ. ಆ ಪ್ರಕಾರ ಹತ್ತು ಮಂದಿಯ ಮನೆಬಾಗಿಲನ್ನು ಕಾಯುವುದು; ಹಲವರಿಂದ ಕೆಟ್ಟ ಮಾತುಗಳನ್ನು ಆಡಿಸಿಕೊಳ್ಳುವುದು. ಕೆಲವರಿಂದ ಸಭ್ಯರೀತಿಯಲ್ಲಿ 'ನೀವಿಲ್ಲಿಂದ ದಯಮಾಡಿಸಿರಿ' ಎಂದು ಹೇಳಿಸಿಕೊಳ್ಳುವುದು; ಇತರರ ಮನೆಗೆ ಹೋಗಿ ಮುಖಭಂಗ ಮಾಡಿಸಿಕೊಳ್ಳುವುದು. ಇಷ್ಟೆ ಅವನಿಗಿದ್ದ ವೃತ್ತಿ. ಶ್ರೀಧರನ ಶಾಸನವು ಯಮಶಾಸನದಂತೆ ಅನುಲ್ಲಂಘನೀಯವೆಂದ ಮೇಲೆ, ಈ ಕಟುತರಾನುಭವವು ತನ್ನ ಪೂರ್ವಸಂಚಿತ ಪಾಪಫಲವೆಂದು ಸಮಾಧಾನ ತಂದುಕೊಳ್ಳಲು ರಾಮಣ್ಣನು ಅಭ್ಯಾಸಿಸಿದನು.

ಸ್ವಲ್ಪಕಾಲವು ಹೀಗೆ ಕಳೆದ ಮೇಲೆ, ಇಂತಹ ನಿಷ್ಕಾಮಕರ್ಮ ಬುದ್ಧಿಯಿಂದ ಆತ್ಮನಿಂದನೆಯನ್ನು ಮಾಡಿಸಿಕೊಳ್ಳುವುದರೊಡನೆ ಸ್ವಲ್ಪ ಸ್ವಾರ್ಥಸಾಧನೆಯನ್ನೂ ಕೈಕೊಂಡರಾಗದೇ? ಎಂದೆನಿಸಿತು. ಕೆಲವು ದೊಡ್ಡ ದೊಡ್ಡ ವ್ಯಾಪಾರಸಂಸ್ಥೆಗಳ ಪ್ರಾತಿನಿಧ್ಯವನ್ನು ಸಂಪಾದಿಸಲು ಪ್ರಯತ್ನಿಸಿದ; ಪ್ರಯತ್ನಗಳಲ್ಲಿ ಅರ್ಧಕ್ಕರ್ಧ ಯಶಸ್ವಿಯಾದುವು. ಶ್ರೀಧರನ ಕೈಗೂಸಾಗಿದ್ದು ಹೊಟ್ಟೆ ಹೊರೆದುಕೊಳ್ಳುವುದಕ್ಕಿಂತ ಉದರ ತರ್ಪಣಕ್ಕಾಗಿ ಪ್ರಯತ್ನಪಡುವುದು ಲೇಸೆಂದು ತೋರಿತು. ಸ್ವಾತಂತ್ರ್ಯ ಸಂಪಾದಿಸಬೇಕೆಂಬ ಸ್ವಾವಲಂಬನತತ್ಪರ ಬುದ್ಧಿಯನ್ನು, ಇಷ್ಟುಕಾಲದ ಏಕಾಂತವಾಸವು ರಾಮಣ್ಣನಿಗೆ ಕಲಿಸಿಕೊಟ್ಟಿತು. ಶ್ರೀಧರನ ರೋಷಾಗ್ನಿ ದಳ್ಳಿಸುವ ಸಂದರ್ಭದಲ್ಲಿಯೂ ಜೀವಹಿಡಿದುಕೊಂಡು, ತಲೆಯೆತ್ತಿ ಬದುಕಬೇಕೆಂದೂ, ಬದುಕಬಹುದೆಂದೂ ಅನುಭವವೇದ್ಯವಾಯಿತು,

ಇಷ್ಟಾದ ಮೇಲೆಯೆ ಅವನು 'ನಾನು ಊರಿಗೆ ಬರಲೇ?' ಎಂಬ ಪ್ರಶ್ನಾರ್ಥಕ ಚಿಹ್ನೆಯನ್ನೊಳಗೊಂಡ ಪತ್ರ ಬರೆಯಲು ಸಾಹಸಮಾಡಿದುದು. ಆಕಸ್ಮಿಕವಾದ ತಂತಿಯು ಅಕರ್ಮ್ಯವಾಗಿ ಬಿದ್ದಿದ್ದ ಆತನ ಉತ್ಸಾಹವನ್ನು ಹೊಡೆದೆಬ್ಬಿಸಿತು. ತಂತಿ ಬಾರದಿದ್ದರೆ, ಸ್ವದೇಶಕ್ಕೆ ಬರುವಾಗ ಹತ್ತೆಂಟು ದಿವಸಗಳ ವಿಲಂಬವಾಗುತ್ತಿದ್ದಿತು ತಂತಿ ಬಂದುದರಿಂದ ಕೂಡಲೆ ಹೊರಡಬೇಕಾಯಿತು. ಜೀವನಸಂಕಷ್ಟದ ಬಿರುಬಿಸಿಲಿನ ಬೇಗೆಯಲ್ಲಿ ಬಂದಾತ, ಮಂಗಳೂರಿಗೆ ಬಂದೊಡನೆ ಬೆಂಕಿಗೆ ಬೀಳಬೇಕಾಯಿತು.

ಅದರಲ್ಲಿಯೆ ಒಂದು ಸಮಾಧಾನ. ತನ್ನವರಿಗಾಗಿ ಜೀವದ ಹಂಗು ತೊರೆದು ಕೆಲಸಮಾಡುವುದೆಂಬ ಹೆಗ್ಗಳಿಕೆ. ಹತ್ತು ಜನರು 'ಸರಿ, ಉಚಿತ ಕಾರ್ಯವನ್ನೆ ಮಾಡಿದ' ಎಂದು ಹೊಗಳುವಂತಹ ಉದ್ಯಮವಿದು ಎಂಬ ಉಬ್ಬು; ಶ್ರೀಧರನೆಂಬ ಹೆಬ್ಬಾವಿನ ಕ್ರೂರ ಗ್ರಾಸದಿಂದ ಕಳಚಿಬೀಳುವ ಸಂಭವವೆಂಬ ಸಮಾಧಾನ, ಎಲ್ಲದಕ್ಕಿಂತಲೂ ಹೆಚ್ಚಾಗಿ, ಇದುವರೆಗೆ ತನ್ನ ತಂಗಿಗೆ, ಅನಾಥ ಬಾಲಿಕೆಗೆ, ಗಂಡನಿದ್ದೂ ವೈಧವ್ಯವೊದಗಿದ ಬಡವೆಗೆ ತಾನೇನೂ ಉಪಕಾರ ಮಾಡಲಿಲ್ಲ; ಅವಳ ಕಣ್ಣೀರಿನ ಆಳದಲ್ಲಿ ಎಂತಹ ಮರುಕವಿದೆ ಎಂಬುದನ್ನು ತಿಳಿವ ಕುತೂಹಲವನ್ನು ಇದುವರೆಗೂ ತೋರ್ಪಡಿಸಲಿಲ್ಲ, ಆ ಕುಂದನ್ನು ಈಗ ಹೋಗಲಾಡಿಸುವೆನೆಂಬ ಕರ್ತವ್ಯಬುದ್ಧಿ, ಇಂತಹ ಭಾವನೆಗಳಿದ್ದ ರಾಮಣ್ಣನು ವ್ಯವಹಾರ ಪ್ರಪಂಚಕ್ಕೆ ದುಮುಕುವಾಗ ಕೆಚ್ಚೆದೆಯವನಾಗಿದ್ದನು. ಬಂದ ದಿನವೆ ಉಗಿಬಂಡಿಯ ನಿಲ್ದಾಣದಲ್ಲಿ ಇದಿರುಗೊಂಡು ಸಕಲ ಸಮಾಚಾರಗಳನ್ನೂ ಆಧಾರಪೂರ್ವಕವಾಗಿ ವಿವರಿಸಿದ ಮೋಹನನ ಸಹಕಾರವು, ತನ್ನ ಹೃದಯವನ್ನು ಆಚ್ಛಾದಿಸಿದ್ದ ಸಂದೇಹಚ್ಛಾಯೆಯನ್ನು ನಿವಾರಿಸಿಬಿಟ್ಟಿದ್ದಿತು. ಆದುದರಿಂದ ಅವನ ಪುರುಷಕಾರವು ಇಂದು ಪಂಗುವಾಗಿರಲಿಲ್ಲ. ಅಸಾಧಾರಣ ವೇಗಪಾಟವವನ್ನು ಹೊಂದಿದ್ದಿತು.

ಮನೆಗೆ ಬಂದೊಡನೆ ಹೆಂಗುಸರು ತಮ್ಮ ಸುದ್ದಿಯ ಮೂಟೆಯನ್ನು ಬಿಚ್ಚಿದರು. 'ಯಾವುದಕ್ಕೂ ಸ್ವಲ್ಪ ತಡೆಯಿರಿ, ಮತ್ತೆಲ್ಲ ಹೇಳುತ್ತೇನೆ' ಎಂದು, ಎಲೆಯ ಮುಂದೆ ಕುಳಿತು ಊಟದ ಶಾಸ್ತ್ರವನ್ನು ಮುಗಿಸಿ, ರಾತ್ರಿ ಎಂಟು ಗಂಟೆಯಾಗುವುದರೊಳಗೆ ಮೋಹನನ ಮನೆಗೆ ಹೋಗಿ, ಅಲ್ಲಿ ಅರ್ಧ ಗಂಟೆಯ ಕಾಲವನ್ನು ಮಂತ್ರಾಲೋಚನೆಯಲ್ಲಿ ಕಳೆದು, ಆತನ ಮೋಟರ್

ಕಾರಿನಲ್ಲಿಯೇ ಕುಳಿತು ಸೋದರಮಾವನ ಮನೆಗೆ ಹಾರಿಬಿಟ್ಟನು ಅಲ್ಲಿ ಸೀತಮ್ಮ ಅಶೋಕವನವಾಸಿನಿಯಾಗಿದ್ದ ಸೀತೆಯಂತೆ ಕಂಬನಿಗರೆದು ಏನೂ ಆಡದೆ ಅಣ್ಣನಿಗೆ ಸ್ವಾಗತವಿತ್ತಳು ರಾಮಣ್ಣನು ಮಾತಾಡಲಿಲ್ಲ. 'ಮನೆಯಲ್ಲಿ ಅವಶ್ಯ ಕಾರ್ಯವಿದೆ, ಹೊರಡು' ಎಂದು ತಂಗಿಗೆ ಪ್ರೀತಿಯ ಕಟ್ಟಪ್ಪಣೆಗೊಟ್ಟನು. ಬಂಧುಗಳಿಗೆ ಸ್ಥಿತಿಗತಿಗಳು ತಿಳಿದಿದ್ದುದರಿಂದ ಯಾರೇನೂ ಆಡಲಿಲ್ಲ. ನಾಟಕದ ಮೂಕದೃಶ್ಯದಂತೆ ಎಲ್ಲವೂ ನಡೆಯಿತು. ಪದ್ದಣ್ಣನ ಮುದಿ ತಾಯಿಯೂ ಇವಳೊಡನೆ ಹೊರಟಳು. ತನ್ನ ಜೀವನಕರ್ತವ್ಯಗಳಲ್ಲಿ ಒಂದು ಮುಗಿದಂತಾಯಿತೆಂದು ಮೋಹನರಾಯನು ತನ್ನ ಮನೆಯ ಮುಂದ ಮೋಟರನ್ನು ನಿಲ್ಲಿಸಿ ಹಾಸಿಗೆಗೆ ಹಾರಿದನು ರಾಮಣ್ಣನ ಮನೆಮುಂದಿ ಯಾರಿಗೂ ರೆಪ್ಪೆಗೆ ರೆಪ್ಪೆ ಕೂಡಿರಲಿಲ್ಲ. ಸೀತಮ್ಮನ ಮುಖ ಮಳೆಗಾಲದ ಮೋಡದಂತೆಯೆ ಇದ್ದಿತು. ರಾಮಣ್ಣನು ಹೇಳಿದನು

'ಅಳಬೇಡ ತಂಗಿ! ಇದುವರೆಗೆ ಬಾಲ್ಯದ ಅವಿಚಾರದಿಂದಲೋ ಸ್ವಾರ್ಥದ ಭೀತಿಯಿಂದಲೊ, ನಿನ್ನ ವಿಷಯವಾಗಿ ಅಲಕ್ಷ್ಯಮಾಡಿದೆನಮ್ಮ. ಇನ್ನೂ ಹಾಗೆ ಮಾಡುವಂತಿಲ್ಲ. ಒಂದು ವಾರದೊಳಗೆ ಭಾವನನ್ನು ಎಲ್ಲಿದ್ದರೂ ಹುಡುಕಿ ತರುತ್ತೇನೆ.

ಅಷ್ಟರಲ್ಲಿ ಆರ್ದ್ರಾವೃಷ್ಟಿಯೇ ಪ್ರಾರಂಭವಾಯಿತು.

ಸೀತಮ್ಮ.- ನಾಚಿಕೆಗೆಟ್ಟ ಈ ಹೆಣ್ಣಿನ ಮುಖ ನೋಡಬೇಕೆಂದಾದರೂ ನಿನಗೆ ಹೇಗೆ ಕಂಡಿತು?

ರಾಮಣ್ಣ:- ಶ್ರೀಧರನಂತಹ ರಕ್ಕಸರು ಬಂಧುಗಳಾಗಿರುವಾಗ ಯಾವ ಅಬಲೆಯರೂ ನಾಚಿಕೆಗೆಟ್ಟ ನುಡಿಗಳನ್ನು ಕೇಳಬೇಕಾಗುತ್ತದೆ. ನಿನ್ನ ನಿರಪರಾಧಿತ್ವವು ನನಗೆ ಗೊತ್ತಿದೆ. ಹೆಚ್ಚು ಮಾತಾಡಬೇಡ

ಸೀತಮ್ಮ:- ನಾನು ನಿರಪರಾಧಿನಿಯೆಂಬುದನ್ನು ಪರಮಾತ್ಮನೊಬ್ಬನೆ ಒಪ್ಪಿಕೊಂಡಾನು.

ರಾಮಣ್ಣ:— ನನಗೆಲ್ಲ ಗೊತ್ತಿದೆ ಸೀತು; ನೀನು ನನಗೆ ಬರೆದು ನನ್ನ ಕೈಗೆ ತಲಪದ ಪತ್ರಗಳು; ನೀನೂ ಭಾವನೂ ಪರಸ್ಪರವಾಗಿ ಬರೆದು ನಿಮ್ಮ ನಿಮ್ಮ ಕರಗತವಾಗದ ಲೇಖನಗಳು; ನಿಮ್ಮ ನಡತೆಯ ಮೇಲೆ ಕಣ್ಣಿಟ್ಟು ನೋಡುತ್ತಿದ್ದ ಜನರಿಂದ ತಿಳಿದ ಸಂಗತಿಗಳು; ಎಲ್ಲ ನನ್ನಲ್ಲಿವೆ; ಪ್ರಪಂಚವೇ

ಕೈ ಬಿಟ್ಟರೂ ನೀನು ನನ್ನ ತಂಗಿ. ಹಾಗೆ ಹೇಳುವುದಕ್ಕೆ ನನಗೆ ನಾಚಿಕೆಯೂ ಇಲ್ಲ. ನಿರಪರಾಧಿನಿಯರಾಗಿ ಲೋಕಾಪವಾದಕ್ಕೆ ಬಲಿಯಾಗುವ ಹುಡುಗಿಯರ ಭ್ರಾತೃಗಳಿಗೆ ಮರಣಾನಂತರ ರೌರವಪ್ರಾಪ್ತಿಯೆಂದಿದ್ದರೆ, ಆ ರೌರವಕ್ಕೆ ಈಗಲೆ ದುಮುಕುವುದಕ್ಕೂ ಸಿದ್ಧನಾಗಿದ್ದೇನೆ. ಆ ಮಾತು ಹಾಗಿರಲಿ. ಮೊದಲು ಡಾ. ವೆಂಕೋಬರಾಯರನ್ನು ಕಾಣಬೇಕು. ಭಾವನ ಆಗುಹೋಗುಗಳನ್ನು ತಿಳಿಯಬೇಕು ಬೇರೆಲ್ಲಿಯೂ ಸಂಗತಿ ತಿಳಿಯದಿದ್ದರೆ, ರಕ್ತಮಾಂಸದಿಂದ ಕೊಬ್ಬಿದ ಶ್ರೀಧರನ ಎದೆಯಿಂದಲೆ ಹೊರಡಿಸಬೇಕು ಆ ಗುಟ್ಟನ್ನು. ಭಾವನನ್ನು ಜೀವಂತನಾಗಿ ಕಂಡಮೇಲೆ ಮುಂದಿನ ಸಮಾಚಾರ.

ಇಂತಹ ಅಣ್ಣನು, ಎದೆತಟ್ಟಿ 'ನಾನಿದ್ದೇನೆ' ನಿನ್ನ ರಕ್ಷಣೆಗೆ' ಎಂದು ಅಭಯಕೊಡುತ್ತಿದ್ದಾಗ, ಇನ್ನೂ ನಾಲ್ಕು ದಿನ ಈ ಪ್ರಪಂಚದಲ್ಲಿ ಜೀವಿಸಿದರೆ ಆಗಬಹುದೆಂದು ಸೀತಮ್ಮನ ಮನಸ್ಸಿಗೆ ತೋರಿತು.

ಮರುದಿನ ಪ್ರಾತಃಕಾಲವೇ ಭಾವನ ಅನ್ವೇಷಣಕ್ಕೆ ಪ್ರಾರಂಭ. ಡಾ. ವೆಂಕೋಬರಾಯರನ್ನು ಕಂಡುದಾಯಿತು. ಶರೀರವು ದೊಡ್ಡದಾದರೂ ಅವರ ಮನಸ್ಸು ಭೀತಿಯಿಂದ ಸಂಕುಚಿತವಾಗಿದ್ದಿತು. 'ಶ್ರೀಧರನೆಂದರೆ ದೊಡ್ಡ ಮಾರೀಚ ರಾಮೂ! ನಾಳೆ ಏನು ಮಾಡಬಹುದು? ಏನು ಮಾಡಲಾರನು? ಎಂಬ ಸಂಗತಿ ಅರಿಯದು ಅವನ ವಿರೋಧ ಕಟ್ಟಿಕೊಂಡು ನನಗೇನಾಗಬೇಕು?' ಎಂದವರೇ ರಾಮಣ್ಣನ ಉದ್ವೇಗವನ್ನು ಕಂಡು, ತಿಳಿದ ಎಲ್ಲ ಸಂಗತಿಗಳನ್ನು ಮರೆಮಾಜದೆ ಹೇಳಿದರು. 'ಈ ಸುದ್ದಿ ನನ್ನಿಂದ ಹೊರಟಿತೆಂದು ಯಾರಿಗೂ ಗೊತ್ತಾಗಬಾರದು' ಎಂದು ಮಂಗಲಪದ ಹಾಡಿದರು. ಡಾ. ವೆಂಕೋಬರಾಯರು ಗುಟ್ಟನ್ನು ಹೊರಹಾಕಿದ ವಿಷಯ ಶ್ರೀಧರನ ಕಿವಿಗೆ ಬೀಳಲೆ ಇಲ್ಲ. ಬೀಳುವುದಕ್ಕೆ ಅವಕಾಶವಿರುವ ಮೊದಲೆ ರಾಮಣ್ಣನ ಪಿಸ್ತೂಲು ಶ್ರೀಧರನ ಹೃದಯದಿಂದಲೇ ಅದನ್ನು ಹೊರಗೆಳೆಯಿತು.

ಮರುದಿನ ಪ್ರಾತಃಕಾಲದಲ್ಲಿಯೇ ತನ್ನ ಮನೆಗೆ ಸರಿಯಾದ ಕಾವಲನ್ನಿರಿಸಿ ರಾಮಣ್ಣನು ಕಲ್ಲಿಕೋಟೆಗೆ ಪ್ರಯಾಣ ಬೆಳೆಸಿದ ಹೋಗುವಾಗ ಅವನಲ್ಲಿ ಕೆಲ ಲೇಖನಗಳಿದ್ದುವು. ಕಳೆದ ಆರೆಂಟು ತಿಂಗಳಿನಿಂದಿತ್ತ ಪರಸ್ಪರವಾಗಿ ಮಾತುಕತೆಯಾಡದ ಗಂಡಹೆಂಡಿರ ಮೂಕಹೃದಯದೊಳಗೆ ಎಂತಹ

ನಿಗೂಢ ಭಾವನೆಗಳು ಅಡಗಿದ್ದುವೆಂಬುದಕ್ಕೆ ಸಾಕ್ಷೀಭೂತವಾದ ಪತ್ರಗಳೇ ಅವು.

ಕಲ್ಲಿಕೋಟೆಯಲ್ಲಿಳಿದು ಆಸ್ಪತ್ರೆಯ ಡಾಕ್ಟರರನ್ನು ಕಂಡು, ಅವರ ಪರಿಚಯವನ್ನು ಮಾಡಿಕೊಂಡು, ರಾಮಣ್ಣನು ಉನ್ಮಾದರೋಗಿ ವೆಂಕಟರಾಯನ ಸ್ಥಿತಿಗತಿಯನ್ನು ವಿಚಾರಿಸಿದನು.

ಡಾಕ್ಟರ್:- ರಾಮಣ್ಣನವರೇ! ವೆಂಕಟರಾಯರಿಗೆ ಈಗ ಕ್ಷಣಿಕ ಉನ್ಮಾದವಿದ್ದಂತೆ ತೋರುತ್ತದೆ. ಈ ಉನ್ಮಾದ ಮೂಲವು ಏನೋ ಒಂದು ಅತ್ಯಾಚಾರದಿಂದ ಆಯಿತು ಎಂಬುದು ಸಂಭಾಷಣೆಯಿಂದ ತಿಳಿದುಬರುತ್ತದೆ. ರೋಗೋಪಶಮನವು ನಮ್ಮ ಅಧೀನವಾಗಿಲ್ಲ. ಅತ್ಯಾಚಾರಕ್ಕೆ ಬಲಿಯಾದ ಬಡಪಾಯಿ . . .

ರಾಮಣ್ಣ:- ಏನೆನ್ನುತ್ತಾರೆ ಅವರು?

ಡಾಕ್ಟರರು.- ತಮ್ಮ ತಮ್ಮನಲ್ಲಿ ಅವರಿಗೆ ದುರಂತ ದ್ವೇಷವಿದೆ ಅದಕ್ಕೆ ಸ್ತ್ರೀ-ಎಂದರೆ ಸ್ವಪತ್ನಿಯೇ ಕಾರಣವೆನ್ನಬಹುದು.

ರಾಮಣ್ಣ:— ಹೆಂಡತಿಯ ವಿಷಯದಲ್ಲಿ ಅವರ ಅಭಿಪ್ರಾಯವೇನು?

ಡಾಕ್ಟರರು:-ಒಮ್ಮೊಮ್ಮೆ ಹೆಂಡತಿಯನ್ನು ಆತ್ಮಗತವಾಗಿ ಜರೆದಾಡುತ್ತಾರೆ. ಆದರೆ ರೋಷವೆಲ್ಲ ತಮ್ಮನ ಮೇಲೆ . . ವಯಸ್ಸಾಗದ ಹುಡುಗಿ . . . ಬಂಧುಬಳಗ ಯಾರೂ ಇಲ್ಲ . . ಪರಗೃಹವಾಸ . . ತಮ್ಮನಂತಹ ಸರ್ವಭಕ್ಷಕರು ಇರುವಾಗ ಆಕೆ ಬಲಿಯಾದರೆ ತಪ್ಪೇನು? ಅವಳ ಪ್ರಾಯದ ಅವಳ ಸ್ಥಿತಿಯ ಯಾವ ಹುಡುಗಿಯರೂ ಹೀಗೆಯೇ ಆಗಬಹುದು. ಎಂಬ ಅಭಿಪ್ರಾಯವು ಮಾತಿನ ಅಡಿಯಲ್ಲಿ ನಿಂತಂತೆ.ತೋರುತ್ತದೆ.

ರಾಮಣ್ಣ·- ತನ್ನ ಭಾವನ ವಿಷಯದಲ್ಲಿ ಏನೆನ್ನುತ್ತಾರೆ?

ಡಾಕ್ಟರರು.- ಒಮ್ಮೊಮ್ಮೆ ರೋಷವು ಉಕ್ಕೇರುತ್ತದೆ. ಆದರೆ ಮತ್ತೆ ಆತನೇನು ಮಾಡಿಯಾನು? ಊಟಕ್ಕೆ ಗತಿಯಿಲ್ಲದ ಬಡವ; ತಮ್ಮನಿಂದಲೆ ಆತನ ಹೊಟ್ಟೆ ತುಂಬಬೇಕು. ಹೀಗೆಂದು ಪಶ್ಚಾತ್ತಾಪ ಪಡುತ್ತಾರೆ. ಉನ್ಮತ್ತಭಾಷಿತದಿಂದ ಹೆಕ್ಕಿಕೊಂಡ ಸಂಗತಿಗಳಿವು. ತಮ್ಮನ ನೆತ್ತರನ್ನು ಹೀರಿದ ಮೇಲೆ ಪತಿತೆಯಾದರೂ ಅದೇ ಹೆಂಡತಿಯ ಕೈಹಿಡಿದು ಆಯುಶ್ಶೇಷವನ್ನು ಕಳೆಯಬಹುದೆನ್ನುವಷ್ಟು ದ್ವೇಷ ತಮ್ಮನ ಮೇಲೆ!

ರಾಮಣ್ಣ – ಹಾಗಾದರೆ ಬದುಕಿದೆ ಡಾಕ್ಟರರೇ! ನಾನೆ ಆ ಭಾವ. ನನ್ನ ತಂಗಿಯೇ ಅವನ ಹೆಂಡತಿ. ಪರದೆಯ ಹಿಂದೆ ರೋಮಾಂಚಕ ಪ್ರಸಂಗಗಳು ನಡೆದಿವೆ. ಅವನ್ನೆಲ್ಲ ಸಾವಧಾನವಾಗಿ ಹೇಳುತ್ತೇನೆ. ಈಗ ನಿಮ್ಮಿಂದ ಒಂದುಪ ಕಾರವು ಆಗಬೇಕಾಗಿದೆ.

ಡಾಕ್ಟರರು.– ಏನದು?

ರಾಮಣ್ಣ.– ಅವರ ತಮ್ಮ ನನಗೂ ದ್ವೇಷಿ. ನಾನೂ ಅವರೂ ಒಟ್ಟಿಗೆ ಆ ತಮ್ಮನ ಬೇಟೆಗೆ ತೊಡಗುತ್ತೇವೆ. ನನ್ನಲ್ಲಿಯೂ, ಪತಿವ್ರತೆಯಾದ ತಂಗಿ ಯಲ್ಲಿಯೂ, ಇರುವ ದುರಭಿಪ್ರಾಯಗಳನ್ನು ಬಿಡುವಂತೆ ಅವರನ್ನು ಹೇಗಾ ದರೂ ಪ್ರೇರಿಸಬೇಕು.

ಡಾಕ್ಟರರು.– ಅವಶ್ಯವಾಗಿ ಬೋಧಿಸುತ್ತೇನೆ ರಾಮಣ್ಣನವರೇ! ಬುದ್ಧಿ ನಾಶಹೊಂದಿದ ಮನುಷ್ಯ ಸತ್ತಂತೆಯೇ ಸರಿ. ಭ್ರಾಂತರಿಗೆ ಬುದ್ಧಿ ಬರಿಸಿದರೆ ಸತ್ತವರನ್ನು ಬದುಕಿಸಿದ ಪುಣ್ಯ.

ಅನಂತರ ರಾಮಣ್ಣ, ನಡೆದ ಸಂಗತಿಗಳಲ್ಲಿ ಡಾಕ್ಟರರ ಶ್ರವಣಕ್ಕೆ ಅವಶ್ಯ ವಾದ ಭಾಗಗಳನ್ನೆಲ್ಲ ವಿವರಿಸಿ ಹೇಳಿದನು. ಡಾಕ್ಟರರ ಕಣ್ಣಿನಲ್ಲಿ ನೀರು ತುಂಬಿತು. 'ಹುಲಿ ನರಭಕ್ಷಕನಾಗುವುದಿದೆಯಂತೆ. ಮನುಷ್ಯರೂ ಹಾಗಾ ಗುವರೆಂಬುದನ್ನು ಇದುವರೆಗೆ ತಿಳಿದಿರಲಿಲ್ಲ ರಾಮಣ್ಣನವರೇ! ಪ್ರಾಯ ಇಷ್ಟಾ ಯಿತು. ದೇಹ ಇಷ್ಟು ಬೆಳೆದಿದೆ. ಆದರೂ ಈ ಪ್ರಪಂಚದ ಅನುಭವವು ಸಂಪೂರ್ಣವಾಗಿ ಆಗಲಿಲ್ಲ' ಎಂದು ಉದ್ಗಾರವೆತ್ತಿದರು.

ಅನುಕೂಲ ಪರಿಸ್ಥಿತಿಯೊದಗಿದಲ್ಲಿ, ಆ ದಿನ ಸಾಯಂಕಾಲವೇ ರಾಮಣ್ಣ ವೆಂಕಟರಾಯರ ಭೆಟ್ಟಿಯು ಸಂಘಟಿಸಬೇಕೆಂದು ಡಾಕ್ಟರರು ವಿಧಿ ಸಿದರು.

ಈ ಮಧ್ಯೆ ಡಾಕ್ಟರರು, ರಾಮಣ್ಣನವರಿಂದ ಕೇಳಿದ ಕಥಾಬೀಜವನ್ನು ಬಹಳವಾಗಿ ವಿಸ್ತರಿಸಿ, ಉತ್ಕೃಷ್ಟ ಕಥಾಲೇಖಕರಿಗೂ ಅಲಭ್ಯವಾದ ಅಸಾ ಧಾರಣ ಕಥಾಲಾಪ ಕೌಶಲದಿಂದ, ಬೇಕಾದಲ್ಲಿ ಲಂಬೀಕರಿಸಿ, ಅವಶ್ಯವಾದಲ್ಲಿ ಕ್ರೋಡೀಕರಿಸಿ, ಸೀತೆಯ ವಿಷಯವಾಗಿ ಅನುಕಂಪವೂ, ಶ್ರೀಧರನ ವಿಷಯ ವಾಗಿ ಕೋಪೋದ್ರೇಕವೂ ಉಕ್ಕೇರುವಂತೆ, ವ್ಯಕ್ತಿಗಳ ಹೆಸರನ್ನು ಅಡಗಿಸಿ 'ಹುಚ್ಚ'ನಿಗೊಂದು ಕತೆ ಹೇಳಿದರು.

'ಇದುವೇ ನನ್ನ ತಮ್ಮನ ಕಥೆ; ನನ್ನ ಕಥೆ. ಕತೆಕಟ್ಟಿ ಹೊಗಳುವಷ್ಟು ಪ್ರಸಿದ್ಧಿಗೆ ಬಂದೆವು' ಎಂದು ಹುಚ್ಚನು ಕುಣಿದನು.

'ಹಾಗಾದರೆ ಆ ಪುಣ್ಯಾತ್ಮೆಯೆಂದರೆ ಸೀತೆಯೋ? ಎಂದು ಡಾಕ್ಟರರು ಕೇಳಿದರು.

'ಪುಣ್ಯಾತ್ಮೆ ಎನ್ನುತ್ತೀರಲ್ಲ ನೀವು? ಲೋಕವೆ ಹಾಗೆ ಹೇಳದೆ? ಹೌದು, ಆಕೆಯೆ ನನ್ನ ಹೆಂಡತಿ'

'ಹುಚ್ಚ'ನ ಮನಸ್ಸು ಮೆದುವಾದುದನ್ನು ಕಂಡು, ಡಾಕ್ಟರರು ರಾಮಣ್ಣ ಸೀತಮ್ಮನವರ ಪ್ರಸ್ತಾಪವನ್ನೆತ್ತಿದರು, ಗುಣಕಥನಕ್ಕೆ ಮೊದಲುಮಾಡಿದರು ರಾಮಣ್ಣನ ಆಗಮನವನ್ನು ತಿಳಿಸಿದರು. ಸೀತಮ್ಮನ ಅಕ್ಷತಪಾತಿವ್ರತ್ಯಕ್ಕೆ ಸಮರ್ಥನೆ ಕೊಟ್ಟರು. ವೆಂಕಟರಾಯನ ದೃಷ್ಟಿಯನ್ನು ಆಚ್ಛಾದಿಸಿದ್ದ ಹುಚ್ಚಿನ ಪರಿ ತೆರೆದಂತಾಯಿತು. 'ಹುಚ್ಚ' 'ಡಾಕ್ಟರರೇ! ನನ್ನ ಹುಚ್ಚಿಗೆ ಮದ್ದು ಮಾಡಿರಿ. ಸೀತಮ್ಮ ರಾಮಣ್ಣ ಇಬ್ಬರನ್ನೂ ನನ್ನ ಕಣ್ಣಮುಂದೆ ತೋರಿಸಿರಿ' ಎಂದನು.

ಇಷ್ಟಾದ ಮೇಲೆ, ರಾಮಣ್ಣ ವೆಂಕಟರಾಯರ ಸಂದರ್ಶನವು ಯಾವ ವಿಕಟ ಸನ್ನಿವೇಶಗಳೂ ಇಲ್ಲದೆ ನಡದುವು. ಡಾಕ್ಟರರಿಗೆ ಧನ್ಯವಾದವನ್ನು ಅರ್ಪಿಸಿ ಇಬ್ಬರೂ ಉಗಿಬಂಡಿಯನ್ನೇರಿ ಮಂಗಳೂರಿಗೆ ಹೊರಟರು.

ವೆಂಕಟರಾಯನಿಗೆ ಹಿಂದಿನ ಗಳಿಗೆಯ ವರೆಗೆ ಹುಚ್ಚು ಹಿಡಿದಿತ್ತೆಂಬುದರ ಗುರುತು ಒಂದೇ ಒಂದು—ಆತನ ಗಂಭೀರ ಮೌನ!

ರಾಮಣ್ಣನು ಅವನನ್ನು ಮಾತಿಗೆ ಎಳೆಯುತ್ತಿದ್ದನು. ಆದರೆ ಸುಲಭವಾಗಿ ಮಾತಿಗೆ ತೊಡಗುತ್ತಿರಲಿಲ್ಲ.

ಆಗ ಮೆಲ್ಲನೆ ಪೆಟ್ಟಿಗೆಯ ಬೀಗ ತೆಗೆದು, ತಾನು ತಂದಿದ್ದ ಲೇಖನಗಳೆಲ್ಲ ವನ್ನೂ ವೆಂಕಟರಾಯನ ಕೈಗೆ ಸಮರ್ಪಿಸಿದನು!

# ಇಪ್ಪತ್ತೆಂಟನೆಯ ಪ್ರಕರಣ

ಸರಕಾರಿ ಆಸ್ಪತ್ರೆಯಲ್ಲಿ ಆ ದಿನ ದೊಡ್ಡ ಕೋಲಾಹಲ. ಪಿಸ್ತೂಲಿನ ಹೊಡತದಿಂದ ಕ್ಷತವಾಗಿ ರಕ್ತಧಾರೆಯನ್ನು ಸುರಿಸುತ್ತಿದ್ದ ದೇಹವೊಂದು ಡಾಕ್ಟರರ ಶಸ್ತ್ರಕ್ರಿಯೆಯನ್ನಪೇಕ್ಷಿಸಿ ಒಂದು ಕೋಣೆಯೊಳಗೆ ಬಿದ್ದಿತ್ತು ಪೋಲೀಸು ಇಲಾಖೆಯ ಮುಖಂಡರು ಸುತ್ತುಗಟ್ಟಿ ನಿಂತಿದ್ದರು. ಗಾಯಗೊಂಡವನಿಗೆ ಮರಣವೇ ಗತಿಯೆಂದು, ಅವನನ್ನು ಪರಲೋಕಕ್ಕೆ ಬೀಳ್ಕೊಡಲು ಎಲ್ಲರೂ ಸಿದ್ಧರಾಗಿ ನಿಂತಿದ್ದರು ಬಂಧುಗಳು, ಬಳಗದವರು, ಸ್ನೇಹಿತರು, ಕೇವಲ ಕುತೂಹಲ ನಿವೃತ್ತಿಗಾಗಿ ಕಿಟಿಕಿಯೊಳಗೆ ಇಣಿಕಿನೋಡುವವರು, ಇನ್ನೂ ಅನೇಕ ಜನರು, ಜೇನುನೊಣಗಳಂತ ಅಲ್ಲಿ ಗುಂಪುಗೂಡಿದ್ದರು.

ಮರಣವಾಙ್ಮೂಲವನ್ನು ತೆಗೆದುಕೊಳ್ಳುವ ಶಾಸ್ತ್ರವಿಧಿಯು ಸಾಂಗವಾಗಿ ಪರಿಸಮಾಪ್ತವಾಯಿತು ವಾಙ್ಮೂಲವು ಹೀಗಿದ್ದಿತು:—

ಚಂಚಲೆ ನನ್ನತ್ತೆಯ ಮಗಳು. ಖೂನಿ ನಡೆದ ದಿನ ನಾನೂ, ನನ್ನ ನಾಲ್ಕು ಮಂದಿ ಸ್ನೇಹಿತರೂ ಅಲ್ಲಿದ್ದೆವು ಶ್ರೀಧರರಾಯರು ಬಂದು, ಆ ಬಡ ಹುಡುಗಿಯನ್ನು ಅತ್ಯಾಚಾರಕ್ಕೆ ಆಹುತಿ ಕೊಡಬೇಕೆಂದಿದ್ದರು. ಕುತ್ತಿಗೆಗೆ ಕೈಹಾಕಿದರೆಂದು ತೋರುತ್ತದೆ. ಅವಳು ಚೀರಿದಳು. ಜೀವದ ಹಂಗು ತೊರೆದು ನಾವು ಆಕಯ ಸಹಾಯಕ್ಕ ಹೋದೆವು ಶ್ರೀಧರನ ಕೈಯಲ್ಲಿ ಪಿಸ್ತೂಲಿದ್ದಿತು. ಅದರ ಗುರಿ ನನ್ನೆಡೆಯೇ ಆಯಿತು. ನಾನು ಬಿದ್ದೆ. ಮತ್ತೇನಾಯಿತೆಂದು ಗೊತ್ತಿಲ್ಲ.

ಮೋಹನನ ಮುಖವು ಪ್ರಸನ್ನವಾಗಿಯೇ ಇದ್ದಿತು. ಎಂದಿನಂತೆಯೆ ಗುಂಡುಗುಂಡಾಗಿ ಪ್ರಬುದ್ಧ ಯೌವನದ ಪ್ರಸನ್ನ ಸೌಂದರ್ಯವೈಭವವು ಪೊರಹೊಮ್ಮಿ ಗೋಚರಿಸುತ್ತಿದ್ದಿತು. ಶ್ವಾಸದಲ್ಲಿ ಮಾತ್ರ ಸ್ಥಾನಚ್ಯುತಿಯ ಲಕ್ಷಣ, ಈಗಲೋ ಮತ್ತೆಯೋ ಆರಿಹೋಗುವಂತಿದ್ದಿತು. ಹೃದಯದ ಆಳದಿಂದಲೇ ಉಕ್ಕಿ ಹರಿದ ಕಣ್ಣೀರು ತಟಕಿಡುತ್ತಿದ್ದಿತು. 'ಆ ಹುಡುಗಿಯನ್ನು – ಸಾಯುವ ಮೊದಲೆ ಒಮ್ಮೆ ನೋಡಬೇಕು' ಎಂದು ಮೋಹನನು ಬಿಕ್ಕುಮಾತಿನಲ್ಲಿ ಆಡಿದನು.

ಆ ಹುಡುಗಿ ಬಂದಳು. ಚಂಚಲೆ ಹಿಂದಿನವಳಾಗಿರಲಿಲ್ಲ; ಆಕೆಯು ಪ್ರೇತದಂತೆ ಇದ್ದಳು.

ಮೋಹನ:– ಏನು ಚಂಚಲೆ? ನನ್ನ ವಿಷಯವಾಗಿ ಏನೆಣಿಸುತ್ತಿ?

ಚಂಚಲೆ.– ಎಣಿಕೆಯೇನು ಭಾವ? ನನಗಾಗಿ ಪ್ರಾಣಾಪಾಯ ತಂದು ಕೊಂಡೆ.

ಮೋಹನ:– ನಿನಗಾಗಿ ಅಲ್ಲ; ನಮ್ಮ ಕುಟುಂಬದ ಮಾನರಕ್ಷಣಾರ್ಥವಾಗಿ . . . ಇಷ್ಟು ಸಣ್ಣ ಪ್ರಾಯದಲ್ಲಿ ಎಂತಹ ಅವಿವೇಕವನ್ನು ಮಾಡಿದೆ ಚಂಚಲೆ? ಸುಖವಾಗಿ ಬದುಕಲು ಇನ್ನೂ ವರ್ಷವಿತ್ತು. ಅದಕ್ಕೆ ಇಷ್ಟು ಬೇಗನೆ ಭಂಗ ತಂದೆಯಲ್ಲ.

ಚಂಚಲೆ. – ಹೌದು.

ಮೋಹನ:- ನಾನೊಬ್ಬ ಬಿಕಾರಿಯಾಗಿದ್ದೆ ಆದರೂ ನನ್ನ ಕೈ ಹಿಡಿದಿದ್ದರೆ ಇಂತಹ ಘಟನೆಗಳಿಗೆ ಎಡೆಯಿತ್ತೆ?

ಚಂಚಲೆ:– ಅನುಭವಿಸಿದ ಮೇಲಲ್ಲವೆ ಬುದ್ಧಿ ಬರಬೇಕು?

ಮೋಹನ:– ನೀನು ನನ್ನವಳಾಗುವುದಿಲ್ಲವೆಂದು ತಿಳಿದ ಮೇಲೆಯೂ ಬೆಲೆಗೊಟ್ಟರೆ ದೊರೆಯದ ಈ ದೇಹವನ್ನು ಮಣ್ಣಕುಡಿಕೆಯಂತೆ ಶ್ರೀಧರನ ಕಾಲ ಬ್ಳದೆತಕ್ಕೆ ಸಮರ್ಪಿಸಿದೆನಲ್ಲವೆ?

ಚಂಚಲೆ·– ಇದುವರೆಗೆ ಹೇಳಿದುದೂ ನಿಜ; ಇನ್ನು ಹೇಳುವುದೂ ನಿಜ. ಎಲ್ಲ ವಿಷಾದಕರ. ಮುಂದೆ ಏನು ಮಾಡಬೇಕೆಂದು ಹೇಳು.

ಮೋಹನ:– ಶ್ರೀಧರನ ರಕ್ತವನ್ನು ಹೀರಬೇಕೆಂಬ ಆಸೆಯಿದ್ದಿತು. ಅವನಿಗಾಗುವ ಪ್ರತೀಕಾರವನ್ನಾದರೂ ಕಣ್ಣಾರೆ ನೋಡಿ ಸುಖದಿಂದ ಸಾಯಬೇಕೆಂಬ ಬಯಕೆಯಿದ್ದಿತು. ಆ ಎರಡು ಯೋಗಗಳೂ ತಪ್ಪಿದುವು. ತಪ್ಪಿದರೂ ಚಿಂತೆಯಿಲ್ಲ. ನೀನಾದರೂ ಮುಯಿಗೆ ಮುಯಿ ತೀರಿಸುವ ಶಪಥ ಮಾಡಿದರೆ ಅರೆಗಳಿಗೆ ಹಿಗ್ಗಿ ಸಾಯುತ್ತೇನೆ.

ಚಂಚಲೆ·– ಈ ಜೀವ ಹೀಗೆಯೆ ಇದ್ದರೆ!

ಮೋಹನ:– ಸೀತಮ್ಮನ ವಿಚಾರದಲ್ಲಿಯೂ ನನಗೆ ಕನಿಕರವಿದೆ. ನೀನೊಬ್ಬಳು. ಆಕೆಯೊಬ್ಬಳು. ಅಭ್ಯಂತರವೆಷ್ಟೆಂಬುದನ್ನು ನೋಡು. ಆಕೆ ಗಂಡನೊಡನೆ ಸುಖವಾಗಿ ವಾಸಿಸುವುದನ್ನು ನೋಡಬೇಕಾಗಿತ್ತು. ಅದೂ

ಆಗಲಿಲ್ಲ. ಆಕೆಯಲ್ಲಿ ಹೀಗೆನ್ನಬೇಕು - ನಿನ್ನಂತಹ ಪತಿವ್ರತೆಯರು ಕಲಿಯುಗ ದಲ್ಲಿಲ್ಲವೆಂದು ನುಡಿದೇ ಪ್ರಾಣಬಿಟ್ಟನೆಂದು.

ಚಂಚಲೆ 'ಹುಂ' ಎಂದ ಶಬ್ದ ಅಶ್ರುಪ್ರವಾಹದಲ್ಲಿ ಎಲ್ಲಿಯೋ ತೇಲಿ ಹೋಯಿತು.

ಮೋಹನ.- ಹಾಗಾದರೆ ತಕ್ಕಮಟ್ಟಿನ ಸಂತೋಷದಿಂದಲೆ ಸಾಯು ತ್ತೇನೆ ಅಯ್ಯೋ! ಮರೆತುಹೋಯಿತು ರಾಮಣ್ಣನವರನ್ನು ಕಾಣ ಬೇಕಿತ್ತು ಸಾಯುವ ಮೊದಲೇ!

ಚಂಚಲೆ·- ಅವರು ಊರಲಿಲ್ಲ. ಕಲ್ಲಿಕೋಟೆಗೆ ಹೋಗಿದ್ದಾರೆ.

ಮೋಹನ:- ಹೌದು; ನನ್ನಲ್ಲಿಯೂ ಹೇಳಿದ್ದರು. ಅವರಿಗೆ ಬೇಕಾದ ಸಹಾಯ ಮಾಡು ಚಂಚಲೆ! ನಮ್ಮಲ್ಲಿರುವ ಪತ್ರಗಳನ್ನು ಕೊಟ್ಟಂತೂ ಆಯಿತು. ಅವಶ್ಯವಾದರೆ, ನಾನು ಯಾವ ರೀತಿಯಲ್ಲಿ ಪ್ರಾಣಭೀತಿಯಿಲ್ಲದೆ, ನಿನ್ನ ಕೆಲಸಕ್ಕೆ ಮುಂದೆ ಬಂದೆನೋ ಅದೇ ರೀತಿಯಲ್ಲಿ ನೀನೂ ಸೀತಮ್ಮನವರ ಮಾನರಕ್ಷಣೆಗಾಗಿ ಹೋರಾಡು.

ಚಂಚಲೆ - ಅವಶ್ಯವಾಗಿ.

ಮೋಹನ - ನಿಮ್ಮ ಹೆಸರನ್ನುಚ್ಚರಿಸಿಕೊಂಡೇ ಸತ್ತನೆಂದು ರಾಮಣ್ಣನವ ರಲ್ಲಿ ಹೇಳು.

ಚಂಚಲೆ:- ಹುಂ . ಆಯಿತು

ಮೋಹನ:- ನನಗೂ ಇಹಲೋಕಕ್ಕೂ ಇರುವ ಋಣಸಂಬಂಧ ಇಲ್ಲಿಗೆ ಮುಗಿಯಿತು. ಈ ದೇಹದ ಮೋಟರು, ಹಳೆಯದಾಗಿರದಿದ್ದರೂ ಊರೂರು ಸುತ್ತಿ ಸಡಿಲಾಗಿದೆ, ಈಗ ಯಂತ್ರವೂ ಮುರಿದು ಬಿದ್ದಿದೆ. ಇನ್ನು ತಿರುಗುವ ಶಕ್ತಿಯಿಲ್ಲ. ಸುತ್ತುವ ಸಾಮರ್ಥ್ಯವಿಲ್ಲ. ನೀನು ಸುಖ ದಿಂದ ಸ್ವಚ್ಛ ಜೀವನವನ್ನು ನಡೆಸಿ ನೂರು ವರುಷ ಬಾಳು. ನಾನು ಹೋಗು ತ್ತೇನೆ . . . ಬರುವುದಿಲ್ಲ.

ಚಂಚಲೆ ತಟಸ್ಥೆಯಾಗಿಯೇ ಅಲ್ಲಿ ನಿಂತಿದ್ದು, ಶ್ವಾಸೋಚ್ಛ್ವಾಸಕ್ಕಾಗಿ ಬಹಳ ಪ್ರಯತ್ನಪಡುತ್ತಿದ್ದ, ಉಬ್ಬಸಪಡುತ್ತಿದ್ದ, ಮೋಹನನ ಯಮಯಾತನೆ ಯನ್ನು ನೋಡಿ ಕಣ್ಣೀರು ಸುರಿಸುತ್ತಿದ್ದಳು. ಆಕೆಗೆ ವಯಸ್ಸೆಷ್ಟೋ ಆಗ

ದ್ದಿತು. ಪ್ರಾಪಂಚಿಕಾನುಭವವನ್ನು ಕಲಿಸಬೇಕಾದರೆ ಮೋಹನನ ಮರಣ ಯಾತನೆಯೆ ಆಗಬೇಕಾಯಿತು.

ಉಸಿರಿನ ವೇಗ ಕಡಿಮೆಯಾಯಿತು. ತೂಗಿ ತೊನೆದು ಮೆಲ್ಲನ ನಲೆ ಹಿಡಿವ ತೊಟ್ಟಿಲಿನಂತೆ ಶ್ವಾಸವು ನಿಂತಿತು. ಜೀವಕಳೆ ಅಂತರಿಕ್ಷದಲ್ಲಿ ಲಯ ಗೊಂಡಿತು. ಮೋಹನನೆಂದು ಹೆಸರಿದ್ದ ಆ ಮನುಷ್ಯನಿಗೆ ಹೆಣವೆಂಬ ಹೆಸ ರೊದಗಿತು. ಮೋಟರಿನ ವಿದ್ಯೆಯಲ್ಲಿ ದ್ರೋಣಾಚಾರ್ಯನೆಂದು ಹೆಗ್ಗಳಿಕೆ ಹೊಂದಿದ್ದವನು, ಸಮರಭೂಮಿಯಲ್ಲಿಯೆ ಕವಚಧಾರಿಯಾಗಿ ಮಲಗಿದ.

'ನಾನು ಸರಿಯಾಗಿರುತ್ತಿದ್ದರೆ ಹೀಗಾಗುತ್ತಿದ್ದಿತೆ?' ಎಂದು ಹಂಬಲಿಸಿ, ನಿರರ್ಗಳನಯನವಾರಿಯನ್ನು ಸುರಿಸಿದಳು.

ಹೀಗೆ ಆಗುತ್ತಿದ್ದಿತೇ? ಎಂಬುದು, ಆದ ಸಂಗತಿಗಳಲ್ಲಿ ಆಗಬಾರದಿದ್ದವು ಗಳನ್ನು ಕುರಿತು ಪಶ್ಚಾತ್ತಪಿಸಿ ಕೇಳುವ ಪ್ರಶ್ನೆ. ಹೀಗಾಯಿತು ಎಂಬುದು ವಸ್ತುಸ್ಥಿತಿ. ಊಹೆಗೂ ವಾಸ್ತವಿಕ ಸಂಭವಕ್ಕೂ ಅಷ್ಟು ವ್ಯತ್ಯಾಸ!

೦ ೦ ೦ ೦ ೦

ಮೃತೋತ್ತರ ಪರೀಕ್ಷೆಯಾಯಿತು ಅಧಿಕಾರಿಗಳು ಕೇಳಬೇಕಾದ ಸಾಕ್ಷ್ಯಗಳನ್ನೆಲ್ಲ ಕೇಳಿದರು. ಮೃತನ ವಾಙ್ಮೂಲವನ್ನೋದಿದರು. ಮೋಹನ ಸತ್ತನೆಂಬುದರಲ್ಲಿ ಯಾರಿಗೂ ಸಂದೇಹ ಬರಲಿಲ್ಲ. ಅದಕ್ಕೆ ಪಿಸ್ತೂಲೆ ಕಾರಣ ವಾಯಿತೆಂಬುದಕ್ಕೂ ಆಧಾರವಿಲ್ಲದಿರಲಿಲ್ಲ. ಇಷ್ಟು ಎಳೆಹರೆಯದ ಸೊಬಗನು ಈ ರೀತಿಯಲ್ಲಿ ಮರಣ ಹೊಂದಬೇಕಾದ ಅವಶ್ಯಕತೆ ಏನಿದ್ದಿತು? ಎಂಬ ಸಂಗತಿ ಅವರಿಗೆ ಗೊತ್ತಾಗಲಿಲ್ಲ. ಗೊತ್ತಾಗುವುದಾದರೂ ಹೇಗೆ?

ಅನಂತರ ಮೋಹನನ ದೇಹವು, ಆಸ್ಪತ್ರೆಯಿಂದ ಮಸಣಕ್ಕೆ ಹೊರಟಿತು.

# ಇಪ್ಪತ್ತೊಂಬತ್ತನೆಯ ಪ್ರಕರಣ

ಕೆಚ್ಚೆದೆಯ ಕಡುಗಲಿಯಾಗಿದ್ದ ಶ್ರೀಧರನು ಆಕಸ್ಮಿಕ ಪಲಾಯನ ಸೂತ್ರವನ್ನು ಪಠಿಸಬಹುದೆಂದು ಊಹಿಸಿದ ಜನರೇ ಇಲ್ಲ. ತನಗಿಂತಹ ಶೋಚನೀಯಾವಸ್ಥೆಯು ಸಂಪ್ರಾಪ್ತವಾಗಬಹುದೆಂದು ಶ್ರೀಧರನು ಕನಸಿನಲ್ಲಿಯಾದರೂ ಕಂಡಿರಲು ಕಾರಣವೂ ಇಲ್ಲ. ವಿರೋಧಿ-ಸಮೂಹವನ್ನು ಅಡ್ಡಗಟ್ಟಿ ನಿಲ್ಲಿಸಿ 'ನಿಮ್ಮ ಪ್ರಾಣ ಹಿಂಡುತ್ತೇನೆ' ಎಂದವನು, ಜೀವವನ್ನು ಕೈಯೊಳಗಿಟ್ಟು ಪಾಯವಾಗುವುದೆಂಬುದು ಅನಿರೀಕ್ಷಿತವಾಗಿದ್ದಿತು. ಚಂಚಲಾ ಪ್ರಕರಣವು ಅಂತಹದು. ಕೊಲ್ಲಬೇಕೆಂದೋ ಆತ್ಮರಕ್ಷಣೆ ಮಾಡಬೇಕೆಂದೋ ಎತ್ತಿದ ಪಿಸ್ತೂಲು ಯಾರ ಜೀವವನ್ನೊ ಹಾರಿಸಿತೆಂಬ ಆಲೋಚನೆ ಹೊಳೆದೊಡನೆ. ನನಗೆ ಈ ಪ್ರಪಂಚದಲ್ಲಿ ಸ್ಥಾನವಾವುದು? ಪೊಲೀಸರೆಂಬ ಬೇಟೆನಾಯಿಗಳಿಂದ ತಲೆತಪ್ಪಿಸಿಕೊಳ್ಳುವ ಬಗೆ ಹೇಗೆ? ಎಂಬ ಭಾವನೆಗಳು ಒತ್ತೊತ್ತಾಗಿ ಮನಸ್ಸನ್ನು ಅವುಕಿ ಕಾಲನ್ನು ದೂಡಿಬಿಟ್ಟುವು. ನಾಲ್ಕು ದಿನ ಶ್ರೀಧರನಿಗೆ ಅಜ್ಞಾತವಾಸ!

ಐದನೆಯ ದಿನ ಪೊಲೀಸರ ಬಂದಿ. ಕಸಾಯಿಗಲ್ಲಿಗೆ ಒಯ್ಯಲ್ಪಡುವ ಹೋತನಿಗಿರುವಂತಹ ದಿಗ್ಬಂಧ! ಮೊದಲೆ ಅರ್ಧಜೀವವಾಗಿದ್ದವನು ಈಗ ಗತಾಸುವಾಗಿದ್ದನೆಂದರೂ ತಪ್ಪಲ್ಲ. ದೇಹವು ಒಣಗಿ ಬತ್ತಿಯಾಗಿದ್ದಿತು; ಒಂದು ಹಿಡಿ ಹುಲ್ಲಿನಷ್ಟು ಲಘುವಾಗಿದ್ದಿತು. ದೇಹದ ಮೇಲೆ ಸರಕಾರದ ಅಧಿಕಾರಮುದ್ರೆ. ಹೃದಯದ ಮೇಲೆ ದುಃಖದ ತಪ್ತಮುದ್ರೆ. ಅವನು ಇಂದು ಪರತಂತ್ರ ಗೂಡಿಗೆ ಬಿದ್ದ ಇಲಿ. ಮೃತ್ಯುವಿಗೂ ಅವನಿಗೂ ನಡುವೆ ನಾಲ್ಕೆ ಗಜ ದೂರ. ಶ್ರೀಧರನು ನಿರುಪಾಯನಾಗಿದ್ದನು.

ಪೊಲೀಸರಿಂದ ತಪ್ಪಿಸಿಕೊಳ್ಳುವುದು ಅಸಾಧ್ಯವೆಂದು ಅರಿತಿದ್ದರೂ ಶ್ರೀಧರನ ಮನಃಪ್ರವೃತ್ತಿಯು 'ಓಡು! ಓಡು!' ಎಂದು ಕಾಲಿಗೆ ಬುದ್ಧಿ ಕಲಿಸಿದುದು ಅಸ್ವಾಭಾವಿಕವೇನೂ ಅಲ್ಲ. ಕೊಲೆಗಾರನ ಕಣ್ಣಮುಂದೆ ಹಗಲಿರುಳು ಪಾಶಿಕಂಬವು ತೋರುತ್ತಿರುವಾಗ, ಎಷ್ಟು ಧೈರ್ಯವಿದ್ದರೂ ಎಂತಹ ಕೆಚ್ಚೆದೆಯಿದ್ದರೂ, ಎಂತಹ ತಾಳ್ಮೆಯಿದ್ದರೂ ಕಾಲು ಓಡಿಬಿಡುತ್ತದೆ.

ಪರಚೋದನೆಯಿಲ್ಲದೆ ಕಣ್ಣು ನಿಮಿಷೋನ್ಮೇಷತತ್ಪರವಾಗಿರುವಂತೆ ಇದು ಯಾರೇನೂ ಕಲಿಸಿ ಮಾಡುವ ಕೆಲಸವಲ್ಲ ಹೃದಯವಾಸನೆಯೆಂಬ ಗಾಳಿಗೆ ಒಡಲು ಹಾರಿ ತೂರಿಬಿಡುತ್ತದೆಯಷ್ಟೆ!

ಬಲೆಗೆ ಬಿದ್ದ ಮೀನಿನಂತೆ ಸನ್ನಿಹಿತ ಮರಣನಾಗಿದ್ದ ಶ್ರೀಧರನು ನೆರೆಮನೆ ಸೇರಿ ಆದುದಕ್ಕಾಗಿ ಪಶ್ಚಾತ್ತಾಪಪಟ್ಟನೇ? ಇಲ್ಲವೇ? ಒಂದು ನಿಜ. ಭೂಕಂಪದಿಂದ ಕುಸಿದುಬಿದ್ದ ಜನಪದದಂತೆ, ಅವನ ಹೃದಯಭೂಮಿ ಅಡಿ ಮೇಲಾಗಿ ಪುಡಿಗಟ್ಟಿ ಹೋಗಿದ್ದಿತು. ಧೈರ್ಯವು ಕುಸಿದು ಬಿದ್ದಿತ್ತು. ಕಾರ್ಯಶಕ್ತಿ ಯಾವುದೋ ಹಾಳು ಕೊಂಪೆಯಲ್ಲಿ ಹೂಳಿಹೋಗಿದ್ದಿತು. ಬಹುಕಾಲ ಅಗೆದು, ಬಹುಕಾಲ ಹುಡುಕಿದ. ತನ್ನೆದೆ ತನಗೆ ದೊರೆಯಲಿಲ್ಲ. ತನ್ನ ಶಕ್ತಿ ತನಗೆ ಬರಲಿಲ್ಲ. ಕೊನೆಗೆ ದೊರೆವಾಗ ಹೃದಯಶಕ್ತಿಗಳು ಚೂರು ಚೂರಾಗಿದ್ದುದರ ಅನುಭವವಾಯಿತು. ತಾನೊಂದೆಡೆ ಲೋಕ ಒಂದೆಡೆ! ಎನ್ನುತ್ತಿದ್ದ ಅಹಂಕಾರದ ಗ್ರಂಥಿಯು ಒಡೆದುಹೋಗಿ ಅವನಿಂದು ವ್ಯತ್ಯಸ್ತ ಜೀವಿಯಾಗಿದ್ದನು. ಮನುಷ್ಯ ಜೀವನದಲ್ಲಿ ವಯೋವಸ್ಥೆಗಳೆಷ್ಟಿದ್ದರೂ, ವ್ಯಾವಹಾರಿಕ ಗಣನೆಗೆ ಸಿಕ್ಕುವುವು ಎರಡೇ – ಅಂದು ಮತ್ತು ಇಂದು! ಹೌದು, ಪ್ರತಿಯೊಬ್ಬನ ಬಾಳಿನಲ್ಲಿ ಅಂದು – ಇಂದುಗಳ ಸಂದು ಕಣ್ಣಿಗೆ ಹೊಡೆದು ಕಾಣುವುದಿದೆ. ಅದೇ ವಯೋವಿಭಾಗದ ಗಡಿಕಲ್ಲು. ಶ್ರೀಧರನೂ ಆ ಗಡಿ ಕಲ್ಲನ್ನು ಹಾಕಿ, ಅದರಿಂದತ್ತ – ಇತ್ತ ದೃಷ್ಟಿವಿಕ್ಷೇಪ ಮಾಡಿ ನೋಡಿದ, ವಿಚಾರಿಸಿದ!

ಅಂದು ಅವನಿಗೆ ದರ್ಪವಿತ್ತು; ಅಹಂಕಾರವಿತ್ತು; ರೀವಿಯಿತ್ತು, ರೌಳಿಯಿತ್ತು. ಒಂದೇ ಒಂದು ಬಿರುನೋಟದಿಂದ ಹತ್ತು ಜನ ಸೇವಕರ ಭವಿಷ್ಯವನ್ನು ತೊಡೆದುಬಿಡುವ ಅಧಿಕಾರಸಾಮರ್ಥ್ಯಗಳಿದ್ದುವು. ಅಂತರಂಗ ದಲ್ಲಿ ದುರಾಶಾ–ದುಷ್ಪ್ರವೃತ್ತಿಗಳು ಗಜರಿ ಗರ್ಜಿಸುತ್ತಿದ್ದರೂ ಅವುಗಳ ಗರ್ಜನೆ ಯನ್ನು ಕೇಳದೆ, ಕೇಳಿದರೂ ಕೇಳದಂತೆ ನಟಿಸಿ, 'ಶ್ರೀಧರನೆಂದರೆ ದೊಡ್ಡ ಮನುಷ್ಯನಯ್ಯ, ಎಂದು ಸುತ್ತಲೂ ಮುತ್ತುವ, ಅರ್ಥವಿಲ್ಲದೆ ನಗುಬೀರುವ, ಏನೋ ಒಂದು ಕೃತಕಸಭ್ಯಾಚಾರದಿಂದ, ಮನಸ್ಸನ್ನು ಸೆಳೆವ ಮಂದಿಗಳಿದ್ದರು. ಲೋಕವೇ ತನಗೆ; ತಾನೇ ಲೋಕಕ್ಕೆ ಎಂಬ ಅಹಂಕಾರವಿತ್ತು. ಇಂದು ಹಾಗಲ್ಲ. ಸೆರೆಯಾಳಾದ ತಾನೆಂದರೆ ಒಂದು ಹುಚ್ಚುನಾಯಿ. ಎಲ್ಲರೂ

ಒದೆಯಬೇಕು; ಡೊಣ್ಣೆಯಿಂದ ತಲೆಗೆ ಹೊಡೆಯಬೇಕು ಎಂದು ಸುತ್ತುಗಟ್ಟಿ ನೋಡುತ್ತಿದ್ದರಲ್ಲದೆ, ಮತ್ತೇನೂ ಇಲ್ಲ. ಕೊಲೆ ಮಾಡುವ ವರೆಗೆ ತಾನು ಮಾಡಿದ ಕೆಲಸಗಳು ಜನಮಾನ್ಯವಾಗಿದ್ದರೆ, ಮತ್ತದು ಅಮಾನ್ಯವಾಗುವ, ಹೇಯವಾಗುವ, ಬಗೆ ಹೇಗೆ? ಎಷ್ಟೋ ಬಡವರ ಒಡಲನ್ನಲ್ಲ; ನೀತಿಯನ್ನು, ನಡತೆಯನ್ನು, ಕೊಲೆ ಮಾಡಿದಾಗ 'ಭೇಷ್' ಎಂದವರು, 'ಭಲೆ' ಎಂದವರು ಈಗ ಹೇಸಿ 'ಛೀ!' ಎಂದು ನೂರು ಗಜ ದೂರ ಹಾರಿ ನಿಲ್ಲುವರಲ್ಲ? ಇದೇಕೆ?

ಇದುವರೆಗೂ ಕೆಲಸಗಳ ಮೇಲೆ ಕೆಲಸ, ದಿಗ್ವಿಜಯಗಳ ಮೇಲೆ ದಿಗ್ವಿಜಯಗಳನ್ನು ಸಾಧಿಸಿಕೊಂಡು ಬರುವ ಅವಸರದಲ್ಲಿ ಮನಸ್ಸೆಂದರೆ ಏನೆಂದು ತಿಳಿಯುವ ಅವಕಾಶವ ಅವನಿಗೆ ಇದ್ದಿರಲಿಲ್ಲ. ಈಗ ಮನಸ್ಸನ್ನು ಬಿಚ್ಚಿ ನೋಡಿದ. ಮಣ್ಣು ದೂಳಿ ಹಿಡಿದು, ಶತರಂಧ್ರವಾದ, ರಾಗದ ಪೆಟ್ಟಿಗೆಯಂತೆ ಅದು ಅಪಸ್ವರ ಕೊಡುತ್ತಿದ್ದಿತು.

ಮುಂದೇನು? ಎಂಬುದೊಂದು ಪ್ರಶ್ನೆ ಗಂಟಲಲ್ಲಿ ಸಿಕ್ಕಿದ ಕುಪ್ಪಿ ಚೂರಿದು.

ಪ್ರಕರಣವು ಪ್ರಚಂಡವೇ ಆದುದು, ಸಾವಿನ ಶಿಕ್ಷೆ ವಿಧಿಸಲ್ಪಡಬಹುದು. ಮರಣವು ಇಂದಲ್ಲ ನಾಳೆ ಬರಲೇಬೇಕು; ಅನಿವಾರ್ಯ ಸಂಭವವದು. ಅದಕ್ಕಾಗಿ ಅತ್ತು ಫಲವಿಲ್ಲ. ಬಿಡುಗಡೆಯಾದರೆ—ಅದು ಅಸಂಭವ—ಜೀವನವನ್ನು ಸ್ವಚ್ಛ ಧ್ಯೇಯಗಳಿಗೆ ಅನುಸಾರವಾಗಿ ಸಾಗಿಸುವ ಸಂದರ್ಭ ಒದಗುತ್ತದೆ. ವಿಮೋಚನೆಯ ಅನಂತರದ ಕಾರ್ಯಕ್ರಮಗಳನ್ನು ಈಗಲೆ ನಿರ್ಧರಿಸಬೇಕಾಗಿಲ್ಲ. ಈಗ ಮಾಡಬೇಕಾದ ಕರ್ತವ್ಯ-ಸಾಧ್ಯವಾದರೆ ಮರಣವನ್ನು ತಪ್ಪಿಸುವ ಪ್ರಯತ್ನ ಅಸಾಧ್ಯವಾದರೆ ವೀರನಂತೆ ಅದನ್ನು ಇದಿರಿಸುವುದಕ್ಕೆ ಅಭ್ಯಾಸ. ಹೀಗೆ ಮೃತ್ಯುವನ್ನಿದಿರಿಸಬೇಕಾದೀತು ಎಂಬ ಆಲೋಚನೆ ಬಂದೊಡನೆ ವ್ಯಸನಾಸಕ್ತಿಯ ಕಾರ್ಮೋಡ ಕ್ರಮೇಣ ಕರಗುತ್ತಾ ಬಂದು, ಪ್ರಕೃತ ಕರ್ತವ್ಯ ವಿವೇಕೋದಯದ ಸ್ವರ್ಣಕಿರಣಗಳೆರಡು ಹೃದಯಾಂತರಾಳವನ್ನು ನಸು ಬೆಳಗಿಸಿದಂತಾಯಿತು.

ಜಾರುವ ನೆಲದಲ್ಲಿ ಕಾಲಡಿಯನ್ನು ಬಲಿಯಿಸಿಟ್ಟು ನಡೆವಂತೆ, ಕರ್ತವ್ಯ ಕರ್ಮದ ಮೇಲೆ ಆತನು ದೃಢ ಮನಸ್ಸನ್ನು ಊರಲು ಪ್ರಯತ್ನ ಮಾಡಿದನು,

ಆಗ ಮೂರು ಸಮಸ್ಯೆಗಳು ತಲೆಯೆತ್ತಿ ನಿಂತುವು. ಕಾನೂನಿನ ವಿಧಿಯ ನಿರ್ವಹಣವೊಂದು ಅಣ್ಣ-ಅತ್ತಿಗೆ-ರಾಮಣ್ಣ ಇವರನ್ನು ಒಂದು ಸ್ಥಿತಿಗೆ ತರಬೇಕೆಂಬುದು ಇನ್ನೊಂದು ಚಂಚಲೆಯ ಮತ್ತು ತನ್ನ ಪ್ರಕರಣ.

ಮೊದಲಿನದಕ್ಕೆ ದೊಡ್ಡ ವಕೀಲರೊಬ್ಬರನ್ನು ನೇಮಿಸುವುದೆಂದಾಯಿತು ಎರಡನೆಯ ಸಮಸ್ಯೆ ಸ್ವಲ್ಪ ಜಟಿಲ. ಅವರಲ್ಲಿ ಪ್ರತೀಕಾರಬುದ್ಧಿ ಇರಬಹುದೆ? ಅಥವಾ ತಾಟಸ್ಥ್ಯವನ್ನು ವಹಿಸುವರೇ? ತನ್ನ ರಕ್ತಪಾನಕ್ಕಾಗಿ ಅವರು ಪಿಪಾಸಿತರಾಗಿದ್ದರೂ ತಪ್ಪೆನಿಸದು ಆ ಮಾತು ಹಾಗಿರಲಿ ಒಂದು ವೇಳೆ ಮನಕರಗಿ ಅವರು ತನ್ನ ಸಹಾಯಕ್ಕೆ ಒದಗಿಬಂದರೂ ಅವರ ಸಹಾಯವನ್ನು ತಾನು ಸ್ವೀಕರಿಸಬಾರದು. ಅಧಿಕಾರವಿದ್ದಾಗ, ಬಲವಿದ್ದಾಗ ಅವರನ್ನು ನಾಯಿ ಬೆಕ್ಕುಗಳಿಗಿಂತ ನಿಕೃಷ್ಟತರರೆಂದು ಭಾವಿಸಿದಾತ ಈಗ ಅವರ ಕಾಲಿಗೆ ಬಿದ್ದು ಬೇಡಿಕೊಳ್ಳುವುದಂತೂ ಇಲ್ಲ. ಅವರು ಆತ್ಮಪ್ರೇರಣೆಯಿಂದ ತನ್ನ ಸಹಾಯಕ್ಕಾಗಿ ಮುಂದೆ ಬಂದರೆ, ಅವರ ನೆರವನ್ನು ಅಪೇಕ್ಷಿಸುವುದು ಕೂಡ, ತನಗಿನ್ನೂ ಗೌರವವುಳಿದಿದ್ದರೆ ಅದಕ್ಕೆ, ತನ್ನ ಚಲಕ್ಕೆ, ಹತ್ತು ಜನ ಕೇಳಿ ನಡುಗುತ್ತಿದ್ದ ತನ್ನ ಹೆಸರಿಗೆ ಕಲಂಕವೆಂದು ಭಾವಿಸಿದನು. ಒಂದು ವೇಳೆ ಅವರ ಸಹಾಯದಿಂದಲಾದರೂ ತನಗೇನಾದೀತು? ಬಂಧುತ್ವದ ಸರಲಪ್ರೇಮವು ಅವರಲ್ಲಿದ್ದರೆ, ತನ್ನ ಬಿಡುಗಡೆಯಾಗಬೇಕೆಂದು ಅವರು ದೇವರಲ್ಲಿ ಪ್ರಾರ್ಥಿಸಲಿ; ಹರಕೆ ಹೇಳಲಿ, ಹಣ್ಣುಕಾಯಿ ಮಾಡಿಸಲಿ. ಶವವಾಗಿ ಕೆಡೆಯುವ ಮೊದಲು ಅಥವಾ ಸಭ್ಯ ಮನುಷ್ಯನಾಗಿ ಬದುಕಿ ಅದನಂತರ ಅವರ ಮುಖಾವಲೋಕನವಾದರೆ ಸಾಕೆನಿಸಿತು. ಚಂಚಲೆಯ ಸಮಸ್ಯೆಗೆ ಉತ್ತರವೇ ಆಗಲಿಲ್ಲ. ಹೀಗೇಕೆ ಮಾಡಿದೆ? ಎಂದು ಕೇಳಿದರೆ ಆ ಭಾಗದಲ್ಲಿ ಸಮಂಜಸವಾದ ಉತ್ತರ ಕೊಡಲು ಆಸ್ಪದವೇ ಇರಲಿಲ್ಲ.

'ದೈವವೆಂಬುದು ಒಂದಿದೆ; ಮನಸ್ಸಾಕ್ಷಿ ಎಂಬುದೊಂದಿದೆ, ಎಂದು ಲೋಕದ ಜನರು ಆಡುತ್ತಾರಲ್ಲ ಜೀವನದ ಕೊನೆಯ ಎರಡು ಗಳಿಗೆಗಳಲ್ಲಿಯಾದರೂ ಈ ಲೋಕೋಕ್ತಿಯ ಸತ್ಯವನ್ನು ಹುಡುಕುತ್ತೇನೆ' ಎಂದು ಶ್ರೀಧರನು ನಿರ್ಧರಿಸಿದನು.

ಆದುದರಿಂದಲೆ ತನ್ನ ಕಡೆಯ ವಕೀಲರಿಗಲ್ಲದೆ ಇತರರಾರಿಗೂ ಮುಖ ತೋರಿಸುತ್ತಿರಲಿಲ್ಲ.

# ಮೂವತ್ತನೆಯ ಪ್ರಕರಣ

ಮಂಗಳೂರಿನ ಉಗಿಬಂಡಿಯು ನಿಲ್ದಾಣಕ್ಕೆ ಬರುವಷ್ಟರಲ್ಲಿ ಬಂಡಿಯ ವೇಗ ಕಡಿಮೆಯಾದಂತೆ ವೆಂಕಟರಾಯನ ಭ್ರಾಂತಿವೇಗವೂ ಕಡಿಮೆಯಾಯಿತು; ಅದೂ ನಿಲ್ಲುವಾಗ ಇದೂ ನಿಂತಿತು ಈಗ ಅವನ ಬುದ್ಧಿ ಶುದ್ಧ ಮಂಡಲವಾಗಿದೆಯೆಂದರೂ ಸರಿಯೆ

ದುಗುಡದಿಂದ ಮುದುಡಿದ ಸೀತಮ್ಮನ ಮುಖದರ್ಶನವಾದಾಗಳಂತೂ, ತಾನು ಮಾಡಿದ ಶತಾಪರಾಧಗಳು ಏಕಕಾಲದಲ್ಲಿ ಸ್ಮೃತಿಪಟಲಕ್ಕೆ ನುಗ್ಗಿ ಬಂದುವು, ಆತನ ಮನಸ್ಸು ಕರಗಿತು, ಕಣ್ಣೀರಿನ ಪ್ರವಾಹದಲ್ಲಿ ಹುಚ್ಚೆಲ್ಲ ಸೋರಿ ಹೋಯಿತು. ಶ್ರೀಧರನ ವಿಪತ್ತನ್ನು ಕೇಳಿದ ಮೇಲಂತೂ ಹೇಳುವುದೇನು? ಒಮ್ಮೆ ಸಂತೋಷದಿಂದ ಹಿರಿಹಿಗ್ಗಿ ಆಕಾಶದ ವರೆಗೆ ಹಾರಿಬಿಟ್ಟನು.

ನಾಲ್ಕು ದಿನಗಳ ಅನಂತರ ವೆಂಕಟರಾಯನು ಹಿಂದಿನ ಮನುಷ್ಯನೇ ಆದನು. ದಾರಿದ್ರ್ಯದ ಒಂದು ಬದಿಯಲ್ಲಿ ಸಂಕಟ, ಇನ್ನೊಂದು ಬದಿಯಲ್ಲಿ ಉನ್ಮಾದವಿದ್ದ ಸ್ಥಿತಿ ಹೋಗಿ, ವೆಂಕಟರಾಯನು ತಿಳಿವಿನ ನೆಲೆಯನ್ನು ಕಂಡು ಸಮಾಧಾನಚಿತ್ತದಿಂದ ಇದ್ದನು. ತನ್ನ ಹೃದಯೇಶ್ವರಿ ಸೀತಮ್ಮ ತನಗೆ ಒಪ್ಪಿಸಬೇಕಾದ ಭಕ್ತಿಭಾವದಲ್ಲಿ ಒಂದು ತೊಲೆ ತೂಕವನ್ನೂ ಕಡಿಮೆಮಾಡಿರಲಿಲ್ಲ. ರಾಮಣ್ಣನೂ ಹಾಗೆಯೆ, ತನ್ನ ಬಂಧುಕೃತ್ಯಗಳನ್ನು ಮಾಡದೆ ಬಿಡಲಿಲ್ಲ ಈ ಎರಡು ಕಾರಣಗಳಿಂದ ವೆಂಕಟರಾಯನ ದಾರಿದ್ರ್ಯದುಃಖವು ಮುಚ್ಚಿಹೋಯಿತು. ಹೃದಯದಲ್ಲಿದ್ದ ನಿರಾಶೆಯ ಹೊಂಡಕ್ಕೆ ಮಣ್ಣುಬಿದ್ದು, ಅದರ ಮೇಲೆ ಆಶೆಯ, ಪ್ರೇಮದ, ಉತ್ಸಾಹದ ಕಾರ್ಯತತ್ಪರತೆಯ ಭಾವನೆಯೆಂಬ ಹಸುರು ಹುಲ್ಲು ಬೆಳೆಯತೊಡಗಿ, ಹೃದಯಭೂಮಿಯ ನವೀನ ವ್ಯವಸಾಯವೆ ಆಯಿತೆನ್ನಬಹುದು.

ಹೆಂಡತಿಯ ವಿಷಯವಾಗಿ ಅವನಿಗೇನಾದರೂ ಸಂದೇಹವಿದ್ದರೆ ಅದಿಷ್ಟೆ: ವರ್ಷ ದಾಟಿದ ಮೇಲೆ, ಮದುವೆಯಾಗಲಿರುವ ನ್ಯಾಯಸಮ್ಮತ ವಯೋಮಿತಿಯನ್ನು ಬಲು ದೂರ ಬಲು ಹಿಂದೆ ಬಿಟ್ಟ ಮೇಲೆ, ಚಿಕ್ಕ ಹುಡುಗಿಯನ್ನು ಕೊರಳಿಗೆ ಕಟ್ಟಿಕೊಂಡುದಾಯಿತು. ಇಂತಹ ಹಾಲುಹಲ್ಲಿನ ಹುಡುಗಿ ಇಷ್ಟು

ಪ್ರಾಯವಾದವನಲ್ಲಿ ಹೇಗೆ ಪ್ರೇಮವಿಟ್ಟಾಳು? ಮನಶ್ಶಾಸ್ತ್ರ ಪಂಡಿತರು ಇದೂ ಸಂಭವನೀಯವೆನ್ನಬಹುದೆ? ಇಲ್ಲ. ಹಾಗಾದರೆ ಇದೊಂದು ಅಪವಾದ. ಅಪವಾದಕ್ಕೂ ಸೂತ್ರವಿದೆಯುಲ್ಲವೆ?

ಒಂದು ದಿನ ಆಕಸ್ಮಿಕವಾಗಿ ಡಾ. ವೆಂಕೋಬರಾಯರು ರಾಮಣ್ಣನ ಮನೆಗೆ ಬಂದರು. ಅವರ ಮುಖ ಬಾಡಿತ್ತು. ಹೊಟ್ಟೆಯ ಉಬ್ಬು ಸ್ವಲ್ಪ ಕಡಿಮೆಯಾಗಿತ್ತು. ಹಿಂದಿನ ನಗುವಿರಲಿಲ್ಲ. ಹಗುರ ಬಗೆಯಿರಲಿಲ್ಲ. ಅದು ದೇಹದಷ್ಟೆ ಭಾರವಾಗಿದ್ದಿತು. ವೆಂಕಟರಾಯನನ್ನು ಕಂಡು 'ಏನು ಮಹಾ ರಾಯ? ಗ್ರಹಣ ಬಿಟ್ಟ ಚಂದ್ರನಂತಿರುವೆ!' ಎಂದು ಉದ್ಗಾರವೆತ್ತಿದರು.

'ಹೌದು ಡಾಕ್ಟರರೇ! ನಿಮ್ಮ ವೈದ್ಯವೃತ್ತಿಯ ಹೆಗ್ಗಳಿಕೆ ಅರಬಿ ಸಮುದ್ರ ದಲ್ಲಿ ಮುಳುಗಿ ಹೋಯಿತು ಏನೂ ಅರಿಯದ, ಮುಗುದೆಯಾದ ಸೀತಮ್ಮ ರೋಗವನ್ನು ಗುಣಮಾಡಿದಳು'

ಒಳಗೇ ಕಿಟಿಕಿಯಿಂದ ಇಣಿಕಿ ನೋಡುತ್ತಿದ್ದ ಸೀತಮ್ಮನ ಕಣ್ಣುಗಳು ಶರತ್ಕಾಲದ ಮೇಘದಂತೆ ಪರಿಶುದ್ಧವಾದ ಜಲಬಿಂದುಗಳನ್ನು ಸುರಿಸಿದವು.

ರಾಮಣ್ಣನ ಮನೆಯಲ್ಲಿ ಇರಬೇಕಾಗಿದ್ದವರೆಲ್ಲ ಆಗ ಇದ್ದರು. ತಾವು ಬಂದುದರ ಕಾರಣವನ್ನು ವೆಂಕೋಬರಾಯರು ಮೆಲ್ಲನೆ ಬಿಚ್ಚಿದರು:—

ರಾಮಣ್ಣನವರೇ, ವೆಂಕಟರಾಯರೇ, ನಾನು ನನ್ನೀ ಜೀವನದಲ್ಲಿ ಹಲವು ಅಧಿಕಪ್ರಸಂಗಗಳನ್ನು ಮಾಡಿದ್ದೇನೆ. ಅಂತಹದೇ ಇನ್ನೊಂದು ಅಧಿಕಪ್ರಸಂಗ ವನ್ನು ಮಾಡಬೇಕೆಂದು ಬಂದಿದ್ದೇನೆ. ಬೇಸರವಿಲ್ಲವಷ್ಟೆ?

ರಾಮಣ್ಣ:— ಇಲ್ಲ; ಹೇಳಿರಿ.

ವೆಂಕೋಬ:- ಲೋಕವು ಏನು ಬೇಕಾದರೂ ಆಗಲಿ. ಮನೆಯ ಹೊರಗಿನವರು ಏನು ಬೇಕಾದರೂ ಹೇಳಲಿ, ಮಾಡಲಿ; ನೀವು ಶ್ರೀಧರನಿಗೆ ವಿರೋಧವನ್ನು ಮಾಡಬಾರದು.

ರಾಮಣ್ಣ: ನಾವು ತೃಣಪ್ರಾಯರು; ಆ ಶಕ್ತಿಯಾದರೂ ಎಲ್ಲಿದೆ?

ವೆಂಕೋಬ:— ನೀವು ಸತ್ಯವನ್ನಾಡಿದರೂ ಶ್ರೀಧರನಿಗೆ ವಿಷಮ.

ರಾಮಣ್ಣ:- ಲೋಕಕ್ಕೆ?

ವೆಂಕೋಬ:— ಲೋಕೋಪಕಾರ ಮಾಡುವ ಸಾಮರ್ಥ್ಯವಾದರೂ ನಮ ಗೆಲ್ಲಿ ರಾಮಣ್ಣ?

ರಾಮಣ್ಣ: ಲೋಕಹಿತ ಮಾಡುವ ಸಂದರ್ಭ ತಾನಾಗಿ ಬಂದರೆ?

ವೆಂಕೋಬ:– ಎಷ್ಟೆಂದರೂ ನೀವು ಒಂದೇ ಗೂಡಿನ ಹಕ್ಕಿಗಳು. ಶ್ರೀಧರನು ದುಷ್ಟನೆಂಬುದನ್ನು ಒಪ್ಪಿಕೊಳ್ಳೋಣ. ಆತನು ವೆಂಕಟರಾಯರಿಗೂ ಅವರ ಕುಟುಂಬಕ್ಕೂ ಎಂತಹ ಕೇಡನ್ನು ಮಾಡಿರುವನೆಂಬುದೂ ನನಗೆ ಗೊತ್ತಿದೆ. ಅದರಿಂದ ತತ್ಕಾಲವೇನೋ ಅಸಹ್ಯ ಸಂಕಷ್ಟವಾಯಿತು ಇಬ್ಬರೂ ಪಾರಾದರು. ಸೀತಮ್ಮನ ಗುಣವು ಲೋಕಕ್ಕೆ ತಿಳಿಯಿತು. ಇನ್ನೊಂದೆಡೆಯಲ್ಲಿ ಅವಿತು ಹೊಂಚು ಹಾಕುತ್ತಿದ್ದ ಶ್ರೀಧರನ ದುರ್ದೈವವು ಆತನ ತಲೆಯನ್ನೆ ಒಡೆಯಿತು. ಅದರಿಂದ ಅವನಿಗೆ ಪ್ರಾಯಶ್ಚಿತ್ತವಾಗುವುದಿದ್ದರೆ ಆಗಲಿ. ನೀವು ಅವನ ವಿರುದ್ಧ ರಂಗವನ್ನು ಪ್ರವೇಶಿಸುವುದು ಸರಿಯಲ್ಲ.

ರಾಮಣ್ಣ – ಏತರಿಂದ?

ವೆಂಕೋಬ – ಇದನ್ನು ಕೆಲವರು ಹೇಡಿತನವೆನ್ನಲೂಬಹುದು, ಇನ್ನಷ್ಟೆ ಮಂದಿ ಉದಾರತೆಯೆಂದುಕೊಂಡು ತೊನೆಯಲೂ ಬಹುದು. ಹೊಂಡದಿಂದ ಮೇಲೆದ್ದು ಬಂದವರು, ಬಿದ್ದವರ ತಲೆಯ ಮೇಲೆ ಕಲ್ಲೆಸೆಯ ಬಹುದೇ?

ರಾಮಣ್ಣ ಬಿದ್ದುದು ಹುಲಿಯಾಗಿದ್ದರೆ? ನರಭಕ್ಷಕನಾಗಿದ್ದರೆ?

ವೆಂಕೋಬ:– ಸೆರೆಮನೆಯೊಳಗಿರುವ ಶ್ರೀಧರನನ್ನು ಸ್ವತಃ ಕಂಡು ಮಾತಾಡಿದ್ದೇನೆ. ಆ ವ್ಯಕ್ತಿಯಿಂದು ಸಂಪೂರ್ಣವಾಗಿ ಬದಲಾವಣೆ ಹೊಂದುವಂತಿದೆ.

ರಾಮಣ್ಣ:– ಕಷ್ಟಕಾಲದ ಬುದ್ಧಿ – ವೇದಾಂತ!

ವೆಂಕೋಬ:– ಶ್ರೀಧರನ ಮನಸ್ಸನ್ನು ಸುಧಾರಣೆಯ ಪಥವನ್ನು ಹಿಡಿಯುವುದೆಂದು ಹೇಳಬಲ್ಲೆ ಅತ್ತಿಗೆಗೆ ಬವಣೆಕೊಟ್ಟುದಕ್ಕಾಗಿ ಅಣ್ಣನನ್ನು ಹಿಂಸಿಸಿದುಕ್ಕಾಗಿ ವ್ಯಸನಪಡುತ್ತಿದ್ದಾನೆ ಒಂದೇ ಮಾತಿನಲ್ಲಿ ಹೇಳುವುದಿದ್ದರೆ, ಅವನಿಂದು ಭ್ರಾಂತನಾಗಿದ್ದಾನೆ. ವೆಂಕಟರಾಯನ ಹುಚ್ಚು ಅವನನ್ನು ಹಿಡಿದಿದೆ. ಈಗ ನಿಷ್ಪೌರುಷನಾದ ಅವನ ಮೇಲೆ ಕಲ್ಲೆಸೆಯುವುದರಲ್ಲಿ ಪಂಥವಿಲ್ಲ, ಪುರುಷಾರ್ಥವಿಲ್ಲ. ಅಲ್ಲದೆ, ನೀವು, ಆತನ ಕ್ರೂರ ವಜ್ರಮುಷ್ಟಿಯಿಂದ ಮರ್ದಿಸಲ್ಪಟ್ಟ ಬಂಧುಗಳು, ಎಂತಹ ಘೋರ ಪ್ರತೀಕಾರಸಾಧನೆಯಲ್ಲಿ ಉದ್ಯುಕ್ತರಾದರೂ 'ಹೀಗೆಯೇ ಆಗಬೇಕು. ಅಂತಹ ಪಾಪಿ ನಾನು' ಎಂದು ಹೇಳುವಷ್ಟು ಈ ಮನುಷ್ಯನ ಮನಸ್ಸು ಪಳಗಿದೆ, ರಾಮಣ್ಣನವರೇ!

ರಾಮಣ್ಣ:– ಆಗಿರಬಹುದು ಆದರೆ ನನಗೊಮ್ಮೆ ಆತನ ದರ್ಶನವಾಗಬೇಕು. 'ಮಾಡಿದುದನ್ನು ಕ್ಷಮಿಸು' ಎಂದಾತ ಕಾಲಿಗೆ ಅಡ್ಡಬಿದ್ದರೆ ಮತ್ತೆ ಒದೆಯುವುದಿಲ್ಲ

ವೆಂಕೋಬ:– ಆತನೀಗ ಯಾರ ದರ್ಶನವನ್ನೂ ತೆಗೆದುಕೊಳ್ಳುವುದಿಲ್ಲ. ಮರುಕವು ಜೀವವನ್ನು ಹಣ್ಣುಮಾಡಿದೆ ಬೇಡುವ ಕ್ಷಮೆಯನ್ನೆಲ್ಲ ದೇವರಿಂದಲೆ ಬೇಡುತ್ತೇನೆ – ಎನ್ನುತ್ತಾನೆ.

ರಾಮಣ್ಣನು ಉತ್ತರ ಕೊಡಲಿಲ್ಲ. ವೆಂಕಟರಾಯನು ಮೌನಿಯಾಗಿದ್ದನು. ವೆಂಕೋಬರಾಯರು ಜೇಬಿನಿಂದ ಒಂದು ಪತ್ರವನ್ನು ತೆಗೆದು ರಾಮಣ್ಣನ ಕೈಯಲ್ಲಿಟ್ಟರು.

'ಪಾರ್ವತಿಗೆ ಶ್ವಾಸ ಎಳೆಯುತ್ತಿದೆ. ಕೂಡಲೆ ಹೊರಟುಬರಬೇಕು' ಎಂದದರಲ್ಲಿ ಬರೆದಿತ್ತು.

ಆ ಪತ್ರವನ್ನೋದುವಾಗ ರಾಮಣ್ಣನ ಕೈ ನಡುಗಿತು. ತುಟಿ ನಡುಗಿತು, 'ಪರಮಾತ್ಮ! ಈ ಮಹಾಯಜ್ಞಕ್ಕೆ ಬಲಿಗಳೆಷ್ಟು?' ಎಂದು ಪತ್ರದಲ್ಲಿದ್ದ ಎಲ್ಲ ಸಂಗತಿಗಳನ್ನು ಎಲ್ಲರಿಗೂ ತಿಳಿಸಿದನು.

''ಪುಣ್ಯಾತ್ಮೆ! ಗಂಡನ ನರಕಯಾತನೆಯನ್ನು ನೋಡುವ ವರೆಗೆ ಇಲ್ಲಿ ನಿಲ್ಲದೆ ಥಟ್ಟನೆ ನಡೆದೇಬಿಡುವಳು' ಎಂದು ಸೀತಮ್ಮ ಅತ್ತಳು. ಈ ಮಾತನ್ನು ಕೇಳಿ ವೆಂಕಟರಾಯನೂ ಬಿಕ್ಕಿ ಬಿಕ್ಕಿ ಅತ್ತನು.

ರಾಮಣ್ಣ:– ವೆಂಕೋಬರಾಯರೆ, ಕಷ್ಟಗಳು ನಾಲ್ಕೂ ಕಡೆಯಿಂದ ಸುತ್ತುಗಟ್ಟುತ್ತಿವೆ. ಆಗಲಿ, ನಿಮ್ಮ ಬುದ್ಧಿವಾದವನ್ನು ಮರೆವಂತಿಲ್ಲ. ನೀವು ದಯವಿಟ್ಟು ಶ್ರೀಧರರಾಯರನ್ನು ಕಾಣಿರಿ. ಅವರು ಸೆರೆಮನೆಯಲ್ಲಿ ಇರುವಾಗ, ಹೊರಗಿನ ಬಂಧುವರ್ಗದವರಾದ ನಾವಾದರೂ ಪಾರ್ವತಿಯ ವಿಷಯದಲ್ಲಿ ಕಷ್ಟಪಡಬೇಕು. ಈ ಕುರಿತು ಅವರ ಅಭಿಪ್ರಾಯವೇನೆಂದು ಗೊತ್ತಿಲ್ಲ.

ವೆಂಕೋಬ:– ಆತ ಯಾರಿಗೆ ಮುಖ ತೋರಿಸುವುದಕ್ಕೂ ನಾಚುತ್ತಾನೆ. ಅರಸನಂತೆ ಮೆರೆದು, ಹತ್ತು ಜನರ ನೆತ್ತಿಯನ್ನು ತುಳಿದ ಗಂಡಾಳು, ನೀಚಸ್ಥಿತಿಯಲ್ಲಿರುವಾಗ ಹಾಗಾಗಲೇಬೇಕು. 'ನನ್ನ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತವಾದ ಮೇಲೆ ತಾನೆ ಇತರರ ಮುಖಾವಲೋಕನ ಮಾಡುವು'ದೆಂದು

ಮುಷ್ಕರ ಹಿಡಿದಿದ್ದಾನೆ. ಈ ಒಂದು ವಿಷಯದಲ್ಲಿ ಆತನ ಅಭಿಪ್ರಾಯ ವೇನೆಂದು ಹೆಟ್ಟಿ ನೋಡಿದೆ 'ನೀವು ಏನು ಬೇಕಾದರೂ ಮಾಡಿರಿ' ಎಂಬ ಅಲಕ್ಷ್ಯಭಾವದಿಂದ – ಬಹುಶಃ ನಾವು ಸಹಾಯಕ್ಕೆ ಹೋದರಾಗಬಹುದೆಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟು – ಹೇಳಿದನೆಂದು ತೋರುತ್ತದೆ. ಒಬ್ಬನು ಇನ್ನೊಬ್ಬನಿಗೆ ಎಷ್ಟೋ ಅಪರಾಧಗಳನ್ನೆಸಗಿರಬಹುದು. ಅದಕ್ಕಾಗಿ ದ್ವೇಷ ವನ್ನು ಕಟ್ಟಿಕೊಂಡರೆ, ಲೋಕದಲ್ಲಿ ಅನೇಕರು ಮರಣಾವಧಿಯಾಗಿ ಹಗೆಯನ್ನು ಸಾಧಿಸುತ್ತಾ ಇರಬೇಕಾದೀತು. ಈಗ ನಾನು ಹೇಳುವುದಿಷ್ಟೆ.– ಎಲ್ಲ ಅಪಕಾರ ಗಳನ್ನು ಮರೆತುಬಿಟ್ಟು, ಶ್ರೀಧರನ ಸಹಾಯಕ್ಕೆ – ಸಹಾಯಕ್ಕೆ ಅಲ್ಲದಿದ್ದರೂ, ಆತನ ಸಾಂಸಾರಿಕ ಕಷ್ಟಗಳಲ್ಲಿ ಒಂದಿಷ್ಟು ಕೈಗೊಡುವುದಕ್ಕೆ – ಸಮಯ ಬಂದಿದೆ. ನೀವೇನು ಹೇಳುವಿರಿ?

ಆಗ ಸೀತಮ್ಮ ನಡುವೆ ಪ್ರವೇಶಿಸಿದಳು ಭಾವನವರು ಎಷ್ಟೊ ತಪ್ಪು ಗಳನ್ನು ಮಾಡಿರಬಹುದು. ಅವರ ಅಪರಾಧಗಳು ಇಂದೇ ಹುಟ್ಟಿದುವಲ್ಲ; ಎರಡು ವರ್ಷಗಳಿಂದ ಬೆಳೆದು ಬಂದಿವೆ. ನಾನು ನಿರ್ಗತಿಕೆಯಾಗಿದ್ದಾಗ ಅಪವಾದಗಳನ್ನು ನುಂಗಿಕೊಂಡೆ. ಅದರೊಂದಿಗೆ ಅವರ ಕೂಳನ್ನೂ ನುಂಗಿದೆ ಆಗ ಪ್ರತೀಕಾರಸಾಧನೆಯನ್ನು ಮಾಡಲಿಲ್ಲ ಈಗ ಮಾತ್ರ ಹಾಗೆ ಮಾಡು ವುದು ಹೇಡಿತನದ ಸಾಕ್ಷಿ. ಅವರು ಕೊಟ್ಟ ಅನ್ನದಿಂದ, ಅವರು ನಮ್ಮಲ್ಲಿ ಆಚರಿಸಿದ ಪಾಪಕೃತ್ಯಗಳೆಲ್ಲ ಜೀರ್ಣಿಸಿ ಹೋದುವು. ಪಾಪ! ಪಾರ್ವತಿ, ನನ್ನಕ್ಕ, ಜೀವಾಲಂಬನವಾಗಿದ್ದಳು. ಅವಳ ಸದ್ಗುಣ, ಸೌಶೀಲ್ಯಗಳನ್ನೂ ಹೆಣ್ತನದ ಸೊಬಗನ್ನೂ ನೋಡುವಾಗ, ಶ್ರೀಧರನ ಘೋರಸ್ವಭಾವವು ಮರೆತು ಹೋಗುತ್ತದೆ. ಅದಲ್ಲದೆ, ನಮ್ಮ ಪ್ರತೀಕಾರವೆನ್ನುವುದಾದರೂ ಎಂತಹದು? ನನ್ನ ಹೆಸರೆತ್ತಿ ಭಾವನ ಮೇಲೆ ಫಿರ್ಯಾದಿ ಗಿರ್ಯಾದಿ ಮಾಡುವುದಕ್ಕೆ ನಾನೊಪ್ಪುವುದಿಲ್ಲ. ನನ್ನ ಮಾನರಕ್ಷಣೆಯಾಯಿತು. ಅವನ ಪೌರುಷವು ಧೂಳೀಪಟವಾಯಿತು. ಇದಕ್ಕಿಂತ ಹೆಚ್ಚಿನ ಪ್ರಾಯಶ್ಚಿತ್ತ ಅವನಿಗೇನಿದೆ?

ರಾಮಣ್ಣ:– ತಂಗೀ, ನಿನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸು.

ಸೀತಮ್ಮ:– ನಾನು ಹೇಳುವುದಿಷ್ಟೆ. ಇಷ್ಟು ವರ್ಷವೂ ನನ್ನ ಮನಸ್ಸಿನ ಕ್ಲೇಶಗಳನ್ನು ಯಾರಿಗೂ ತಿಳಿಸದೆ, ಎಲ್ಲವನ್ನೂ ಸಹಿಸಿಕೊಂಡೆ. ಈಗ ಹಗೆ ಸಾಧಿಸಿ ನಮಗೇನೂ ಲಾಭವಾಗುವಂತಿಲ್ಲ. ಪಾಪಗಳಿಗೆ ಪ್ರಾಯಶ್ಚಿತ್ತಗಳನ್ನು

ಕೊಡುವವನು ದೇವರೊಬ್ಬನೆ. ಅವನ ಕುಟುಂಬಕ್ಕಾಗಿ ಯಾವ ಕರ್ತವ್ಯಗಳು ಅವಶ್ಯವೋ ಅವುಗಳನ್ನು ಮಾಡಲೇಬೇಕು.

ರಾಮಣ್ಣ:– ಭಾವ! ನಿಮ್ಮ ಅಭಿಪ್ರಾಯವೇನು?

ವೆಂಕಟ.– ನನಗೇನೂ ಅಭಿಪ್ರಾಯವಿಲ್ಲ. ಯಾರ ಹೇತುವಿನಿಂದ ಇಂತಹ ಪ್ರಲಯನಾಟಕವು ಅಭಿನಯಿಸಲ್ಪಟ್ಟಿತೋ ಅವರೇ ಹೀಗೆ ಹೇಳಿದ ಮೇಲೆ ಯಾರೇನು ಮಾಡಲಾಗುತ್ತದೆ? ತಪ್ಪು ಯಾರಲ್ಲಿಯಾದರೂ ಇದ್ದರೆ, ಅದು ನನ್ನಲ್ಲಿ. ಶ್ರೀಧರನ ಸ್ವಭಾವ ಗೊತ್ತಿದ್ದೂ ನಾನು ಅಲಕ್ಷ್ಯ ಮಾಡಿದೆ. ನನ್ನ ತಪ್ಪಿಗೆ ಅವನಿಗೇಕೆ ಶಿಕ್ಷೆ?

ರಾಮಣ್ಣನು ಪುನರಾಲೋಚನೆಗೆ ತೊಡಗಿ 'ಹೌದು' ಎಂದು ಸಮ್ಮತಿಸಿದನು. ಮುಂದಿನ ಕಾರ್ಯವನ್ನು ಹೇಗೆ ಸಾಗಿಸಬೇಕೆಂದು ಡಾ. ವೆಂಕೋಬರಾಯರಲ್ಲಿ ವಿಚಾರಿಸಿದನು.

ರಾಮಣ್ಣನು ಸ್ವತಃ ಮದನವಳ್ಳಿಗೆ ಹೋಗಿಬರಬೇಕು. ಅವನೊಂದಿಗೆ ಇನ್ನೊಬ್ಬನೂ ಹೋಗಬೇಕು. ಪಾರ್ವತಿಯ ಸಜೀವ ದೇಹವನ್ನು ತರುವುದೋ ಹೆಣವನ್ನು ತರುವುದೋ ಗೊತ್ತಿಲ್ಲವಾದುದರಿಂದ ಇಬ್ಬರು ಹೋಗಬೇಕೆಂಬುದು ಡಾಕ್ಟರರ ಅಭಿಪ್ರಾಯವಾಗಿದ್ದಿತು. ರಾಮಣ್ಣನೂ ಒಪ್ಪಿದನು.

ಮನೆಗೆ ತೆರಳುವಾಗ ಡಾ ವೆಂಕೋಬರಾಯರಿಗೆ ಹಿಂದಿಲ್ಲದ ವ್ಯಸನ. ಆಹಾ! ಶ್ರೀಧರನು ಎಂತಹ ವ್ಯಕ್ತಿಗಳನ್ನು ವೈರಿಗಳಾಗಿ ಮಾಡಿಕೊಂಡ! ಸ್ನೇಹವಿರುತ್ತಿದ್ದರೆ, ಆತನ ಪ್ರಾಣಸಂಕಟದಲ್ಲಿ ಪ್ರಾಣಕೊಟ್ಟು ಸಹಾಯ ಮಾಡುತ್ತಿದ್ದರು ಈ ಪುಣ್ಯಾತ್ಮರು. ಸಹಾಯಕರನ್ನೆಲ್ಲ ಬಡಿದೋಡಿಸಿ ಅನಿವಾರಣೀಯ ವಿಪತ್ತಿಗೆ ತಾನಾಗಿಯೇ ತಲೆಯೊಡ್ಡಿದನಲ್ಲ! ಇವನಿಗೆ ಇದರಿಂದ ವಿಮೋಚನೆಯಾದರೂ ಹೇಗೆ? ಇವರು ಕ್ಷಮಿಸಿದರೂ ಕಾನೂನು ಕ್ಷಮಿಸೀತೆ? ಎಷ್ಟು ದೊಡ್ಡ ಮನುಷ್ಯನಲ್ಲಿ ಎಂತಹ ಚಿಕ್ಕ ಮನಸ್ಸು! ವೆಂಕೋಬರಾಯರು ಕಣ್ಣನ್ನು ಒರಸಿಕೊಂಡು ಹೋದರು.

ಆದರೆ ಡಾಕ್ಟರರಿಗೆ ಒಂದು ವಿಷಯದಲ್ಲಿ ಸಮಾಧಾನ.– ಶ್ರೀಧರ ದುಷ್ಟನಾಗಿದ್ದರೂ, ಅವನ ಬಂಧುಗಳೇ ಅವನಿದಿರಲ್ಲಿ ಕತ್ತಿಕಟ್ಟಿ ನಿಲ್ಲಬಾರದೆಂದು ಅವರೆಣಿಕೆಯಿತ್ತು. ವೆಂಕಟರಾಯನ ಹುಚ್ಚು ಬಿಟ್ಟು, ಅವನ ಮನಸ್ಸಿನ ಅರಾಜಕತೆ ಹೋಗಿ, ಶಾಂತಿಸ್ಥಾಪನೆಯಾಗಬೇಕೆಂಬ ಲವಲವಿಕೆ ಇತ್ತು.

ಜೀವಂತಳಾದ ಸೀತಮ್ಮ ಭರ್ತೃಗೃಹದಲ್ಲಿರುವುದನ್ನು ನೋಡಬೇಕೆಂಬ ಆಶೆಯಿತ್ತು. ಈ ಮೂರು ಕಾಂಕ್ಷೆಗಳೂ ನೆರವೇರಿದುವು. ಇವರ ಕುಟುಂಬಕ್ಕೆ ಎಷ್ಟೋ ಸಾರಿ ಮದ್ದು ಕೊಟ್ಟುದಕ್ಕೆ ಇಂದು ಇಮ್ಮಡಿಯಾದ ಪ್ರತಿಫಲ ಬಂತೆಂದು ಭಾವಿಸಿಕೊಂಡರು.

ಮರುದಿನವೇ ರಾಮಣ್ಣನೂ ಪದ್ಮಣ್ಣನೂ ಮದನಪಳ್ಳಿಗೆ ಹೊರಟರು. ಆದರೆ, ಇವರನ್ನು ಮದನಪಳ್ಳಿಯ ವರೆಗೆ ಬರಿಸುವ ಕಷ್ಟವನ್ನು ಪಾರ್ವತಿ ಕೊಡಲೆ ಇಲ್ಲ. ಮದನಪಳ್ಳಿಯಿಂದ ತಂತಿ ಹೊರಟ ದಿನವೇ ಆಕೆ ಇಹಲೋಕವನ್ನು ಬಿಟ್ಟಿದ್ದಳು. ರಾಮಣ್ಣನಿಗೆ ನಡುದಾರಿಯಲ್ಲಿಯೆ ಆಕೆಯ ಶವದ ದರ್ಶನವಾಯಿತು. ಸಾಯುವ ಗಳಿಗೆಯಲ್ಲಿ ಗಂಡನ ಮುಖಾವಲೋಕನವಾಗಬೇಕೆಂದು ಸೀತಮ್ಮ ಆಗ್ರಹಪಟ್ಟಿದ್ದಳು. ಆ ಆಶೆ ಈಡೇರಲಿಲ್ಲ.

ಎಲ್ಲರೂ ಮಂಗಳೂರಿಗೆ ಹಿಂದಿರುಗಿದರು – ಪಾರ್ವತಿ ಹೆಣವಾಗಿ! ಉಳಿದವರು ಅರ್ಧ ಜೀವವಾಗಿ!

ಈ ಸುದ್ದಿಯನ್ನು ಕೇಳಿದೊಡನೆ, ಸರೆಮನೆಯೊಳಗಿದ್ದ ಶ್ರೀಧರನೂ ಎಳೆಮಕ್ಕಳಂತೆ ಇಡೀ ದಿನ ಅಳುತ್ತಿದ್ದನಂತೆ 'ಇನ್ನೀ ಲೋಕಕ್ಕೆ ಮುಖ ತೋರಿಸುವ ಅವಶ್ಯಕತೆಯೇ ಇಲ್ಲ. ಆ ಮುದಿ ತಾಯಿಯೊಬ್ಬಳು ಸಾಯುತ್ತಿದ್ದರೆ!' ಎಂದು ಉದ್ಗಾರವೆತ್ತಿದನು.

ಅಂದಿನಿಂದ ಡಾ. ವೆಂಕೋಬರಾಯರ ಸಂದರ್ಶನವೂ ಶ್ರೀಧರನಿಗೆ ಬೇಡವಾಗಿತ್ತು.

# ಮೂವತ್ತೊಂದನೆಯ ಪ್ರಕರಣ

ಕೊಲೆಯ ಪ್ರಕರಣವು ಪೊಲೀಸರ ಕೈಗೆ ಸಿಕ್ಕಿದ ಮೇಲೆ ಕೇಳುವುದೇನು? ವಿಧಿಲೋಪಗಳಿಲ್ಲದೆ ಎಲ್ಲವೂ ಸಾಂಗವಾಗಿ ನೆರವೇರಿತು ಜಿಲ್ಲೆಯ ದಂಡಾಧಿಕಾರಿಗಳ ನ್ಯಾಯಸ್ಥಾನದ ಮೆಟ್ಟಿಲನ್ನೂ ಏರಿತು

ಶ್ರೀಧರನ ಪಕ್ಷವನ್ನು ಎತ್ತಿಹಿಡಿಯುವುದಕ್ಕೆ ದೊಡ್ಡ ವಕೀಲರೊಬ್ಬರು ಬಂದಿದ್ದರು. ಆದರೆ ಹೆಚ್ಚಿನ ಸಾಕ್ಷಿಗಳಿರಲಿಲ್ಲ ಕೊಲೆ ಮಾಡಿದುದು ನಿಜವೆಂದು ಆತನ ಅಂತಃಕರಣವೆ ಸಾಕ್ಷ್ಯ ಕೊಡುವಾಗ ಯಾರೇನು ಮಾಡಬಹುದು? ಆದರೂ ಶ್ರೀಧರನ ಗುಣಸ್ವಭಾವಗಳ ಭಯಂಕರತೆಯ ಅನುಭವವಾಗದಿದ್ದ ಯಾರೋ ಕೆಲಮಂದಿ ಏನೋ ಹೇಳಿದರು.

ಚಂಚಲೆ ತನ್ನ ಇದಿರಾಗಿ ರುಜುವಾತು ಕೊಡಲು ಬಂದಾಗ ಮಾತ್ರ ಅವನ ರೋಮಗಳೆಲ್ಲ ನೆಟ್ಟಗೆ ನಿಂತುವು ಆಕೆಗ ಒಮ್ಮೆ ದೊಣ್ಣೆಯಿಂದ ದೊಪ್ಪನೆ ಹೊಡೆದುಬಿಟ್ಟರೂ ತಪ್ಪಾಗದು ಎನಿಸಿತು ಯಾಕೆ? ಯಾರಿಗೆ ಗೊತ್ತು? ಮರುಕ್ಷಣವೇ ಆವೇಶತರಂಗಗಳನ್ನು ಕೆಳಗೊತ್ತುವ ತಾಳ್ಮೆ ಬಂತು. 'ಎಷ್ಟೆಂಥರೂ ದರಿದ್ರ ಸ್ತ್ರೀ ಸಮಾಜದಲ್ಲಿ, ಸಭ್ಯ ಸಮಾಜದಲ್ಲಿ, ಸ್ಥಾನಪಡೆವ ಯೋಗ್ಯತೆಯಿಲ್ಲದ ತಾಯಿತಂದೆಗಳ ಮಗಳು. ಅವಳ ಸ್ವಭಾವ ಹಾಗಿದ್ದರ ತಪ್ಪಲ್ಲ. ನಾನೇಕೆ ಮಧ್ಯದಲ್ಲಿ ಪ್ರವೇಶಿಸಬೇಕಿತ್ತು?'

ಶ್ರೀಧರನ ಮನಸ್ಸು ನಿಸ್ತರಂಗ ಸಮುದ್ರದಂತೆ ಸ್ತಬ್ಧವಾಗಿದ್ದಿತು. ಅವನು ಆವೇಶವನ್ನು ಹೊರತೋರಿಸಲಿಲ್ಲ; ಕಣ್ಣೀರನ್ನು ಸೂಸಲಿಲ್ಲ, ನಿಟ್ಟುಸಿರನ್ನು ಬಿಡಲಿಲ್ಲ, ತುಟಿಯನ್ನು ನಡುಗಿಸಲಿಲ್ಲ; ಪಿಟ್ಟೆಂದು ಮಾತಾಡಲೂ ಇಲ್ಲ. ತನ್ನ ವಿಚಾರಣ ಕಾಲದಲ್ಲಿ ಕುತೂಹಲ ತೃಪ್ತಿಗಾಗಿ ಹಿಂಡುಗಟ್ಟಿ ನೆರೆದು ಬಂದು ನೋಡುತ್ತಿದ್ದ ಜನರಾರೆಂಬುದನ್ನು ಕಣ್ಣೆತ್ತಿ ನೋಡಲಿಲ್ಲ. ಯಾವುದಾದರೊಂದು ಪ್ರಾಣಿ ಸತ್ತರೆ, ಅದರ ವಾಸನೆ ಮೂಗಿಗಡರಲಾಗಿ ಮೇಲೆ ಬೀಳುವ ಹದ್ದುಗಳಿವು. ಇವುಗಳನ್ನು ನೋಡುವುದೇನು?

ಲೋಕದ ಸಾವಿರಾರು ಮಂದಿಗೂ ತನಗೂ ಯಾವ ಸಂಬಂಧವೂ ಇಲ್ಲ; ಎಂಬ ಮುಖಭಾವವನ್ನು ತೋರ್ಪಡಿಸಿದರೂ, ನೆರೆದ ಜನರ ಇಂಗಿತವನ್ನು

ತಿಳಿಯದಾತ ಶ್ರೀಧರನಲ್ಲ. ಅವನ ಹುಟ್ಟಿನೊಡನೆ ಬಂದಿದ್ದ ಪರೇಂಗಿತಜ್ಞತೆ ಇಂದೂ ಅವನನ್ನು ಬಿಟ್ಟಿರಲಿಲ್ಲ

ಹೆಚ್ಚಿನ ಮಂದಿಯ ಅಭಿಪ್ರಾಯದಂತೆ, ತಾನೊಬ್ಬ ಸಾರ್ವಜನಿಕ ಶತ್ರು ವಾಗಿದ್ದನೆಂದು ಶ್ರೀಧರನಿಗೆ ಭಾಸವಾಯಿತು. ರೋಗದ ಇಲಿಯನ್ನು ದೂರ ದಲ್ಲಿ ವರ್ಜಿಸುವಂತೆ, ದೂರದಲ್ಲಿಯೆ ದಾಟಿಹೋಗುವವರಿದ್ದರು. ಕೊಕ್ಕಿನಿಂದ ಕುಕ್ಕುವ ಕಾಗೆಯಂತೆ, ಮರ್ಮಭೇದಿ ಕಠೋರವಾಕ್ಯಗಳನ್ನು ಆಡಿ ಅದರಿಂದ ತನ್ನಲ್ಲಾಗುವ ವಿಕಾರವನ್ನು ಕಂಡು ಆನಂದಿಸುವವರಿದ್ದರು ಏನೂ ಮಾತಾ ಡದೆ, ಹೊರಗಿನಿಂದ ವ್ಯಸನಸೂಚನೆಯನ್ನು ನಟಿಸಿ, 'ಈ ಮಾರಿಗೆ ಹೀಗೆಯೆ ಆಗಬೇಕಯ್ಯ' ಎಂದು ಮನದೊಳಗೆ ಗ್ರಹಿಸಿ, ತನಗೆ ವಿರುದ್ಧವಾಗಿ ಬಂದಿದ್ದ ಸಾಕ್ಷಿಗಳ ಪ್ರತಿಯೊಂದು ಮಾತನ್ನೂ ಪಂಚಭಕ್ಷ್ಯ ಪರಮಾನ್ನವನ್ನು ಸವಿವಂತೆ ಸವಿವ ದಯಾವಂತರಿದ್ದರು ವಿರೋದಭಾವವನ್ನು ಮುಚ್ಚಿಡದೆ ಬಹಿರಂಗ ವಾಗಿ ವ್ಯಕ್ತಪಡಿಸುವ ಧೀರರಿದ್ದರು 'ಏನು ಆಗುವುದೋ ನೋಡೋಣ' ಎಂದು ಕಾನೂನಿನ ಕ್ರಿಯಾಭಾಗವು ಹೇಗೆ ಆಗುವುದೆಂಬ ಒಂದೇ ಆಲೋಚನೆ ಯುಳ್ಳ ನ್ಯಾಯಶಾಸ್ತ್ರಪಂಡಿತರಿದ್ದರು 'ತಪ್ಪು ಮಾಡಿದ್ದರೂ ಇದೂ ಒಂದು ಜೀವ. ಸಾವಿನ ಸಂದೇಶವನ್ನು ಕೇಳುವಾಗ ಎಲ್ಲರಿಗೂ ಆಗಬಹುದಾದ ವ್ಯಸನ ಇದಕ್ಕೂ ಆದೀತು ಹೇಗೂ ಇದು ಸಾಯಬೇಕು ಶಾಂತಿಯಿಂದ ಲಾದರೂ ಸಾಯಲಿ' ಎನ್ನುವಷ್ಟು ಉದಾರಭಾವವನ್ನು ಹೊಂದಿರುವ ವ್ಯಕ್ತಿ ಗಳನ್ನು ಶ್ರೀಧರನು ಕಾಣಲಿಲ್ಲ.

ವಿಚಾರಣೆಯ ಕೊನೆಯ ದಿನದಲ್ಲಿ ದೂರದಲ್ಲೊಂದು ವ್ಯಕ್ತಿಯನ್ನು ಕಂಡ. ಒಣಗಿದ ತಾಳಿಯ ಹಣ್ಣಿನಂತೆ ಅಡಸಿಹೋಗಿದ್ದ ಮುಖವದು. ಅದನ್ನು ಕಂಡೊಡನೆ ಜೀವವು ಬೆಚ್ಚಿತು ಇಷ್ಟು ಜನರ ಮುಂದೆ, ನ್ಯಾಯದೇವತೆಯ ಮುಂದೆ, ಮುಖತೋರಿಸಲು ಹೆದರದಾತ ಆ ಮುಖವನ್ನು ಕಂಡೊಡನೆ ತಲೆ ತಗ್ಗಿಸಿಬಿಟ್ಟನು.

ಪೋಲೀಸರ ಅಂಗರಕ್ಷಣೆಯೊಡನೆ ಶ್ರೀಧರನು ಕೆಳಗಿಳಿದಾಗ ರಾಧಮ್ಮನು ಓಡಿಬಂದು 'ನಿನಗೇನಾಯಿತು ಮಗು? ನಿನ್ನ ಈ ಅವಸ್ಥೆಯನ್ನು ನೋಡುವುದ ಕ್ಕಾಗಿ ಬ್ರಹ್ಮ ನನಗಿಷ್ಟು ಆಯುಸ್ಸನ್ನು ಕರುಣಿಸಿದನೆ?' ಪೋಲೀಸು ಪಡೆಯ ಸುತ್ತುಗಟ್ಟನ್ನು ಮುರಿದು ಶ್ರೀಧರನನ್ನು ಬಿಗಿದಪ್ಪಿಕೊಂಡು ಎದೆಯೊಡೆವಷ್ಟು

ಅತ್ತಳು. ತಾವೂ ತಾಯುಮಕ್ಕಳೆ ಆದುದರಿಂದ ಪೋಲೀಸರೂ ಈ ಅಕ್ರಮ ಪ್ರವೇಶವನ್ನು ಸಹಿಸಿದರು, ತಟಸ್ಥರಾಗಿ ನಿಂತರು!

'ಇನ್ನು ಶ್ರೀಧರನೆಂಬ ಮಗ ನಿನಗೆ ಹುಟ್ಟಲಿಲ್ಲವೆಂದೇ ಭಾವಿಸಿಕೋ ತಾಯಿ. ಯಾರೇನು ಮಾಡಿದರು? ನಾನೇ ನನ್ನ ಕೊರಳನ್ನು ಹಿಸುಕಿಕೊಂಡೆ. ಪಾರ್ವತಿಯು ಜೀವದಲ್ಲಿದ್ದಾಗ ಒಂದು ದಿನದ ಸುಖವನ್ನು ಕೊಡದೆ ಅವಳನ್ನು ಕೊಂದ ಕಟುಕನಾದ ನನಗೆ ಪಾಶಿಕಂಬವೆ ಬುದ್ಧಿಕಲಿಸಬೇಕಲ್ಲವೆ?' ಎಂದು ನುಡಿದನು.

ರಾಧಮ್ಮ 'ಅಯ್ಯೊ ಮಗ! ನಿನಗೆ ಏನಾಯಿತು?' ಎಂದು ಹಲುಬಿದಳು. 'ಹೋಗುವ ಮೊದಲೆ ನಿನ್ನನ್ನು ಕಂಡು ಮತ್ತೊಮ್ಮೆ ಕ್ಷಮೆ ಬೇಡುತ್ತೇನೆ' ಎಂದು ಶ್ರೀಧರನು ಉತ್ತರಕೊಟ್ಟನು.

ನ್ಯಾಯಾಧೀಶರು ತಮ್ಮ ಹೊಣೆಗಾರಿಕೆಯನ್ನು ಸಂಪೂರ್ಣವಾಗಿ ತಿಳಿದು ವರ್ತಿಸಿದರೆಂಬುದನ್ನೂ ಇದಕ್ಕೆ ಬೇಕಾದ ಆಧಾರಗಳನ್ನು ಸಂಗ್ರಹಿಸಿಕೊಂಡೇ ತೀರ್ಮಾನವನ್ನು ಕೊಟ್ಟರೆಂಬುದನ್ನೂ ಒಪ್ಪಿಕೊಳ್ಳೋಣ. ಅವರು ಅಲ್ಲಿ ತಪ್ಪಿದರು, ಇಲ್ಲಿ ತಡವರಿಸಿದರು, ಎಂಬ ಕಾನೂನಿನ ಪಾಂಡಿತ್ಯವಾದರೂ ನಮಗೆ ಎಲ್ಲಿಂದ ಬರಬೇಕು? ಶ್ರೀಧರನ ವಕೀಲರೂ ವ್ಯವಹಾರದಲ್ಲಿ ನಿರುಪಮ ದಕ್ಷತೆಯನ್ನು ತೋರಿಸಿದರು. ಕೊಲೆಯೇ ಆಗಿರಲಿಲ್ಲವೆನ್ನುವುದು ಅವರ ಆಳವನ್ನೂ ಮೀರಿದ್ದಿತು. ಶ್ರೀಧರನು ಅದರ ಕರ್ತೃವಲ್ಲವೆನ್ನುವುದಕ್ಕೆ ಇಹಪರಗಳಲ್ಲಿರುವ ಸಕಲೋಪಪತ್ತಿಗಳನ್ನೂ ಉದ್ಧರಿಸಿ ಪ್ರತಿಪಾದಿಸಿದರು. ಒಂದು ವೇಳೆ ಶ್ರೀಧರನೆ ಕಾರಣವಾಗಿದ್ದರೂ ಕೊಲೆಯಾದ ಕಾಲಕ್ಕೆ ಆತನನ್ನು ಉದ್ರೇಕಿಸುವುದಕ್ಕೆ ಬೇಕಾದ ಸನ್ನಿವೇಶಗಳಿದ್ದುವೆಂದೂ ವಾದಿಸಿದರು. ಶ್ರೀಧರನು ಕೊಲೆಗೆ ಕಾರಣವಲ್ಲವೆನ್ನುವುದೂ, ಕಾರಣವಾಗಿದ್ದರೂ ಉದ್ವೇಜಕಸ್ಥಿತಿಯ ಪರಿಣಾಮವಾಗಿ ಹಾಗೆ ಮಾಡಿದನೆಂಬುದೂ ನಮಗೆ ನಿಮಗೆ ಪರಸ್ಪರ ವಿರೋಧಿಗಳಾಗಿ ಕಾಣಬಹುದು. ಆದರೆ ನ್ಯಾಯಮೂರ್ತಿಗಳಿಗೆ ಹಾಗೆ ಕಾಣಿಸದು. ಶ್ರೀಧರನಿಗೆ ಬಿಡುಗಡೆಯಾಗಿರುತ್ತಿದ್ದರೆ ವಕೀಲರು ಆತನಿಂದ ಪಡೆದ ಪ್ರತಿಫಲವನ್ನು ಬಹಿರಂಗವಾಗಿ ವಿಜಯೋದ್ಘೋಷಣೆಯೊಂದಿಗೆ ತಿಂದುತೇಗಿ ಜೀರ್ಣಿಸುತ್ತಿದ್ದರು. ಆದರೆ ನ್ಯಾಯಾಧೀಶರ ತೀರ್ಪು ಹೊರಟ ಮೇಲೆ ತಿಂದರೂ ತೇಗದೆ ಜೀರ್ಣಿಸಬೇಕಾಯಿತು.

ಶ್ರೀಧರನಿಗೆ ದ್ವೀಪಾಂತರವಾಸದ ಶಿಕ್ಷೆ!

ಈ ತೀರ್ಮಾನವನ್ನು ಕೇಳಿ ಶ್ರೀಧರನ ಮುಖ ಕಪ್ಪಾಯಿತು. ಪೋಲೀಸು ಪಡೆಯೊಂದಿಗೆ ಹೊರಡುವ ಸಮಯಕ್ಕೆ ವಕೀಲರು ಆತನ ಬಳಿಗೆ ಬಂದು, 'ಏನು ಮಾಡಲಿ ಶ್ರೀಧರರಾಯರೇ ಬಹಳ ವ್ಯಸನವಾಗುತ್ತದೆ; ವಿಶ್ವಪ್ರಯತ್ನ ಮಾಡಿದೆ. ಸಂಪೂರ್ಣ ಫಲ ದೊರೆಯಲಿಲ್ಲ. ಮರಣಶಿಕ್ಷೆಗಿಂತ ಇದೇ ವಾಸಿ ಯೆಂದು ಭಾವಿಸಿ ಸಮಾಧಾನ ತಂದುಕೊಳ್ಳಬೇಕಾಗುತ್ತದೆ' ಎಂದರು.

ಶ್ರೀಧರನು ಗಂಭೀರ ನಿರ್ವೇದಸೂಚಕ ಸ್ವರದಲ್ಲಿ 'ವಾಶಿಯಾಗಬಹು ದೆಂದು ಭಾವಿಸಿದ್ದೆ ವಕೀಲರೆ! ಅದಾಗಲಿಲ್ಲ. ಒಂದೇ ನಿಮಿಷ ನೇಣಿನಿಂದ ನೇತಾಡಿ ಹೆಣವಾಗಿ ಬೀಳುವ ಸುಖ ತಪ್ಪಿಹೋಯಿತು. ಇಪ್ಪತ್ತು ವರ್ಷ ಕಾಲ ಪ್ರತಿ ನಿಮಿಷವೂ ಸಾಯುವ ಕಷ್ಟವನ್ನನುಭವಿಸಿಕೊಂಡು ಬಾಳುವ ಕಾಲ ಬಂತಲ್ಲ!' ಎಂದನಂತೆ.

## ಮೂವತ್ತೆರಡನೆಯ ಪ್ರಕರಣ

ಎಲ್ಲವೂ ಮುಗಿಯಿತು. ಧೂಮಕೇತುವೊಂದು ಆಕಾಶದ ಶೂನ್ಯತೆ ಯಲ್ಲಿ ಉದ್ಭವಿಸಿ, ಅದೇ ಶೂನ್ಯತೆಯಲ್ಲಿ ವಿಲೀನವಾಯಿತು. ಸಣ್ಣ ಕುಟುಂಬ ವೆಂಬ ಶುಷ್ಕಕಾಷ್ಠದಿಂದ ಉದಿಸಿದ ಕಾಡುಗಿಚ್ಚು, ಹೊತ್ತುವಷ್ಟು ಹೊತ್ತಿ, ಕನಲುವಷ್ಟು ಕನಲಿ, ಹೊಗೆಕಾರುವಷ್ಟು ಕಾರಿ, ಸುತ್ತುಮುತ್ತಲಿನ ಹತ್ತಾರು ಮರಬಳ್ಳಿ ಪೊದರುಗಳಿಗೆ ಕೆಂಡಕಿಡಿಗಳನ್ನು ಕೆದರಿ ಅವುಗಳನ್ನು ಸುಟ್ಟು ಸೀಕರಿ ಗೊಳಿಸಿ, ಇನ್ನೂ ಸುಡಲಾರದೆ ಕ್ಷೀಣವಾಗಿ ನಂದಿಹೋಗುವ ಸ್ಥಿತಿಯನ್ನು ಮುಟ್ಟಿತು.

ಇದುವರೆಗೆ ತನ್ನ ನಿವಾಸಭೂಮಿಯಾಗಿದ್ದ, ವಿಲಾಸ ವಿಹಾರಕ್ಷೇತ್ರ ವಾಗಿದ್ದ, ದರ್ಪಾಹಂಕಾರಗಳ ಗರುಡಿಯಾಗಿದ್ದ, ಹುಟ್ಟುನಾಡನ್ನು ಬಿಡುವು ದೆಂದರೆ ಮರಣವೇದನೆಗಿಂತಲೂ ಮಿಗಿಲಾದ ಸಂಕಟವನ್ನು ಶ್ರೀಧರನಲ್ಲಿ ಉಂಟು ಮಾಡಿತು. ಸ್ವದೇಶ ಪರಿತ್ಯಾಗಮಾಡುವುದೇ ವ್ಯಸನಕರ. ಹೋದನಲ್ಲಾ!

ಎಂದು ಮರುಕಗೊಳ್ಳುವ ಸ್ನೇಹಿತವರ್ಗವಿದ್ದರೆ, ಬಂಧುಸಮೂಹವಿದ್ದರೆ, ವ್ಯಸನದ ವೇಗ ಮತ್ತಷ್ಟು ಹೆಚ್ಚು. ತನ್ನವರು ಎಂದೆನ್ನಿಸಿಕೊಳ್ಳುವವರಲ್ಲಿ, ಅಳಬೇಕಾದವರು ಅಳದಿರುವ, ಒಮ್ಮೆಯಾದರೂ ಸ್ಮರಿಸಬೇಕಾದವರು ಸ್ಮರಿಸದಿರುವ, ಸ್ಥಿತಿಯಲ್ಲಿ ವಿಯೋಗಹೊಂದುವುದರ ಸಂಕಟವನ್ನು ಹೇಳಿ ತೀರದು ತನ್ನ ಮನಸ್ಸು ಪರಿವರ್ತನಹೊಂದಿ ಪರಿಶುದ್ಧವಾಗಿರುವುದು, ಅದನ್ನು ಬಂಧುವರ್ಗವು ತಿಳಿಯದಿರುವುದು, ಸ್ವದೇಶವನ್ನು ಕೊನೆಯ ಬಾರಿಗೆ ಎಂದೆಂದಿಗೂ ಪರಿತ್ಯಜಿಸಬೇಕಾಗಿ ಬರುವುದು, ಸ್ವಜನರು, 'ಸ್ನೇಹಿತರು', ಹೀಗೇಕೆ ಆಗಲಿಲ್ಲ ಎಂದು ಕುತೂಹಲದಲ್ಲಿರುವುದು, ಮನಸ್ಸು ಮಾತ್ರ ಹುಟ್ಟುನಾಡಿಗೆ ಅಂಟಿಕೊಂಡಿರುವುದು . . ದೇಹವು ಮಾತ್ರ ದೂರ, ದೂರ, ಬಲು ದೂರ ನಡೆಯುವುದು! ಶ್ರೀಧರನ ಅವಸ್ಥೆ ಇದು ತಾನು ಮಾಡಿದ ಪಾಪದ ಸ್ಮರಣ ಜಾಡರ ಬಲೆಯಂತೆ ಮನಸ್ಸಿಗೆ ಹತ್ತಿಕೊಂಡಿದೆ ಉಜ್ಜಿ ತೆಗೆಯಲಾಗುವುದಿಲ್ಲ ಅತ್ತಿಗೆಯ ನೆನವು! ಅಣ್ಣನ ನೆನವು! ಅವರಿಗೇನೂ ಅನ್ಯಾಯ ಮಾಡದೆ ಇರುತ್ತಿದ್ದರೆ, ಒಂದೇ ನಿಮಿಷದಲ್ಲಿ, ಪಾಪಪಂಕಿಲವಲ್ಲದ ಅಶ್ರುಧಾರೆಯನ್ನು ಗಳಗಳನೆ ಸುರಿಸಿ, ಅವರ ಕಣ್ಣಿನಿಂದಲೂ ಕಂಬನಿ ಸುರಿಸುವಂತ ಮಾಡಿ, ಕಾಲಿಗೆ ಅಡ್ಡಬಿದ್ದು, ಹರಕೆಗೊಂಡು, ಸಮಾಧಾನದಿಂದ ಬೀಳ್ಕೊಳ್ಳುವುದು ಶ್ರೀಧರನಂತಹ ಸಮಾಹಿತಚಿತ್ತರಿಗೆ ಅಸಾಧ್ಯವಲ್ಲ ಆದರೆ, ಶ್ರೀಧರನ ಇಂದಿನ ಗತಿಯೇನು? ಸ್ಥಿತಿಯೇನು? ಎಲ್ಲೆಲ್ಲಿ ಸಂಸಾರವಿದೆಯೋ ಅಲ್ಲಲ್ಲಿ ಅತ್ತಿಗೆ, ಭಾವ, ಅಣ್ಣತಮ್ಮಂದಿರೆಂಬ ಬಾಂಧವ್ಯಬದ್ಧರಾದ ವ್ಯಕ್ತಿಗಳಿರುತ್ತಾರೆ. ಅದು ಸೋಜಿಗವಲ್ಲ. ಶ್ರೀಧರನಂತಹ ತಮ್ಮಂದಿರೂ ಮೈದುನರೂ ಮಾತ್ರ ಅಪರೂಪ. ಅಪಮಾನಗಳ ಮೇಲೆ ಅಪಮಾನಗಳನ್ನು ಹೊರಿಸಿ, ದುರಾಲೋಚನೆಗಳ ಮೇಲೆ ದುರಾಲೋಚನೆಗಳನ್ನು ಹೆಣೆದು, ಅತ್ತಿಗೆ ಅಣ್ಣಂದಿರ ಜೀವವನ್ನು ಹಸಿಬಿಸಿಯಾಗಿ ಮುಕ್ಕಳಿಸುವ ತಮ್ಮಂದಿರೂ ಮೈದುನರೂ ಎಷ್ಟು ಮಂದಿ ಇದ್ದಾರೆ? ಎಷ್ಟು ಮಂದಿ ಇದ್ದಾರು? ಇದೇ ಅವನ ಯೋಚನೆ. ಇದೇ ಅವನ ಮನಃಶಾಂತಿಯನ್ನು ಸುಟ್ಟು ಬೂದಿಮಾಡಿದ ಹಂಬಲು. ಪಾರ್ವತಿಯ ವಿಷಯವಾಗಿ ವೇದನಾಮಯ ಸ್ಮರಣೆಗಳಿದ್ದರೂ ಅವು ಇಷ್ಟು ಭಯಂಕರವಾಗಿರಲಿಲ್ಲ. ಗಂಡ-ಹೆಂಡತಿ, ಇವರ ಸಂಬಂಧಸಾಮ್ರಾಜ್ಯವೇ ಬೇರೆ. ಹೆಂಡತಿ ತಪ್ಪುಮಾಡಿದರೆ, ಗಂಡ ಸಹಿಸಿಕೊಳ್ಳುತ್ತಾನೆ. ಸಹಿಸಿಕೊಳ್ಳಬೇಕು. ಗಂಡ ಅತಿಕ್ರಮ ಮಾಡಿ

ದರೆ, ಇದು ನನ್ನ ಹಣೆಬರಹವೆಂದು ಹೆಂಡತಿ ಕಣ್ಣೀರಸಾಕ್ಷಿಯಾಗಿ ಬಂದುದೆಲ್ಲ ಬರಲಿ ಎನ್ನುತ್ತಾಳೆ. ಯಾಕೆ ಹೀಗಾಯಿತು, ಎಂದು ಕೇಳುವವರಿಲ್ಲ. ಈ ಕುಂದುಕೊರತೆಗಳು ದಾಂಪತ್ಯದ ಸ್ವಾಭಾವಿಕ ಸ್ಥಿತಿಯಲ್ಲಿ ಇರುವಂತಹವುಗಳೆ ಎಂದು ಲೋಕ ಹೇಳುತ್ತದೆ. ಹೇಳದಿದ್ದರೂ ಮರೆತುಬಿಡುತ್ತದೆ ಆದರೆ ಶ್ರೀಧರನಂತೆ, ದಾಂಪತ್ಯದ ಹೊರಗೆ ಕಾಲಿಡುವುದು ಮಾತ್ರವಲ್ಲ; ಪರಸ್ತ್ರೀಯರ ಜೀವನಪಥದಲ್ಲಿ ಕಂಟಕಗಳನ್ನೆಸೆಯಲು ಪ್ರಯತ್ನಿಸಿದರೆ ಸ್ವಾಮಿ ಭೂಮಿಗಳಿಗೆ ಮೆಚ್ಚಿಕೆಯಾದೀತೆ? ಸೂರ್ಯ-ಚಂದ್ರರು ಮರೆತಾರೆ? ಪ್ರಕೃತಿ ಪಂಚಭೂತಗಳು ಸಹಿಸುವುವೆ? ಇಲ್ಲ ಆದುದರಿಂದಲೆ, ಶ್ರೀಧರನ ಮನಸ್ಸು ರಾವಣನ ಚಿತೆ ಯಂತೆ, ಎಂದೆಂದಿಗೂ ಆರದೆ ಹೊಗೆ ಸೂಸುತ್ತಿದ್ದಿತು.

ದ್ವೀಪಾಂತರವಾಸದ ಶಿಕ್ಷೆಯಾದ ಮರುದಿವಸವೇ ಶ್ರೀಧರನು ಡಾ. ವೆಂಕೋಬರಾಯರನ್ನೂ ತಮ್ಮ ವಕೀಲರನ್ನೂ ಸೆರೆಮನೆಗೆ ಕರೆಯಿಸಿದ.

ಅವರಿಬ್ಬರೂ ಬಂದರು. ಬಂದೊಡನೆ ಅಸಾಮಾನ್ಯವಾದ ಚಿತ್ತಸ್ಥೈರ್ಯ ದಿಂದ ಅವರೊಡನೆ ನರಸವಾಡಿದ. 'ನನ್ನ ಜೀವನದ ಮರಣಯಜ್ಞದ ಪ್ರೇಕ್ಷಕರಾಗಿದ್ದೀರಿ ಇಂದು ಅದರ ಬೂದಿಯನ್ನು ಉದ್ವಾಸನ ಮಾಡಿ' ಎಂದ.

ಇಬ್ಬರ ಮನಸ್ಸೂ ಕರುಣಾರ್ದ್ರವಾಯಿತು.

ಶ್ರೀಧರ:– ವಕೀಲರೆ, ನನ್ನ ಮುಂದಿನ ಕರ್ತವ್ಯಶೇಷಗಳನ್ನು ನೀವು ನಿರ್ವ ಹಿಸಬೇಕಾಗಿದೆ. ಇದುವರೆಗಣ ನನ್ನ ಜೀವನದಲ್ಲಿ ಪುಣ್ಯಸಂಚಯವೇನೂ ಆಗದಿದ್ದರೂ, ಇತರರನ್ನು ಸುಲಿದೋ ಸೂರೆಮಾಡಿಯೋ ಸ್ವಲ್ಪ ಹಣವನ್ನು ಕೂಡಿಸಿಟ್ಟಿದ್ದೇನೆ. ವ್ಯಾಪಾರವೆಂಬ ಸಣ್ಣ ಸಸಿಯನ್ನು ಬಿತ್ತಿ ಬೆಳೆಯಿಸಿದ್ದೇನೆ. ಈ ವ್ಯಕ್ತಿಯೊಡನೆ ಅದೂ ಕಿತ್ತುಹೋಗುವುದು ಸರಿಯಲ್ಲ ನನ್ನ ಹೇಯ ಸ್ಮರಣಾರ್ಥವಾಗಿ ಅದೊಂದನ್ನು ಬಿಟ್ಟುಹೋಗುತ್ತೇನೆ. ಅದರ ಏರ್ಪಾಡು, ನೀವಿದ್ದು ಸಾಂಗವಾಗಿ ಜರಗಬೇಕಾಗಿದೆ.

ವಕೀಲ – ನಿಮ್ಮ ಅಪೇಕ್ಷೆಯಂತೆ ನಡೆಯಲು ಸದಾ ಸಿದ್ಧರಾಗಿದ್ದೇವೆ.

ಶ್ರೀಧರನು ಆಗಬೇಕಾದುದನ್ನೆಲ್ಲ ಹೇಳಿದನು. ತಾನು ಕೂಡಿಟ್ಟಿದ್ದ ಐವತ್ತು ಸಾವಿರದಲ್ಲಿ ಹತ್ತು ಸಾವಿರ ಅಣ್ಣ ವೆಂಕಟರಾಯನಿಗೆ. ಉಳಿದುದೆಲ್ಲ ಮಕ್ಕಳಿಗೆ. ಸಮಾನವಾದ ಹಕ್ಕಿನಿಂದ ವ್ಯಾಪಾರವನ್ನು ಅಣ್ಣನೂ ರಾಮಣ್ಣನೂ

ನಿರ್ವಹಿಸಿಕೊಂಡು ಬರತಕ್ಕದು. ನ್ಯಾಯವಿಧಿಯಂತೆ ಇಷ್ಟು ವ್ಯವಸ್ಥೆಯಾಗ ಬೇಕು.

'ಆಗಬಹುದು' ಎಂದು ವಕೀಲರು ನುಡಿದರು. ಡಾ. ವೆಂಕೋಬರಾಯರ ಬಾಯಿಯಿಂದ ಮಾತೇ ಹೊರಡಲಿಲ್ಲ. ಹತ್ತೆಂಟು ನಿಮಿಷದ ಸಂಭಾಷಣೆಯ ಅನಂತರ ಅಣ್ಣ, ತಾಯಿ, ರಾಮಣ್ಣ, ಅತ್ತಿಗೆ, ಮಕ್ಕಳು ಇಷ್ಟು ಮಂದಿಯನ್ನು ಕೊನೆಯ ಬಾರಿ ನೋಡುವ ಸುಖ ದೊರೆಯಬೇಕೆಂದು ಶ್ರೀಧರನು ಅಪೇಕ್ಷಿಸಿದನು. ವಕೀಲರೂ ವೆಂಕೋಬರಾಯರೂ ಇದಕ್ಕೂ ವ್ಯವಸ್ಥೆ ಮಾಡಿದರು.

ಆ ದಿನ ದುರ್ದಿನವಾಗಿದ್ದಿತು. ಸಾಯುವಾತನ ಚಕ್ರಶ್ವಾಸದಂತೆ ಬಿರುಗಾಳಿ ಸುತ್ತುತ್ತಿದ್ದಿತು ವೈಧವ್ಯದ ಅವಗುಂಠನದಂತೆ ದಿಙ್ಮುಖವನ್ನು ಮೇಘಜಾಲವು ಆವರಿಸಿಕೊಂಡಿದ್ದಿತು ಕಂಬನಿಯಂತೆ ವೃಷ್ಟಿಬಿಂದುಗಳು ಸುರಿಯುತ್ತಿದ್ದುವು. ಕನಸಿನಲ್ಲಿಯೇ ಬರೆದು ಕನಸಿನಲ್ಲಿಯೇ ಮಾಸಿಹೋಗುವ ಸುಖಸ್ವಪ್ನದಂತೆ ನೇಸರಕಾಂತಿಯು ಮಂದವಾಗಿ ಮಂಜಿನ ಮುಸುಕಿನಿಂದ ಪ್ರಕೃತಿಯು ಕಂದಿಹೋಗಿದ್ದಿತು. ಮಿಂಚಿಗೆ ಕೊನೆಯಿರಲಿಲ್ಲ. ಗುಡುಗಿಗೆ ಕಡೆಯಿರಲಿಲ್ಲ. ಮನೋಜಾಡ್ಯವನ್ನು ಉತ್ತೇಜಿಸುವ ಯಾವ ಸನ್ನಿವೇಶಕ್ಕೂ ಅಭಾವವಿರಲಿಲ್ಲ. ಶ್ರೀಧರನ ಮನಸ್ಸು ಒದ್ದೆಯಾಗಿದ್ದಿತು. ಸಧವೆಯಾಗಿದ್ದರೂ ವಿಧವೆಯಾಗಿದ್ದಂತೆ ಸತ್ತ ಪಾರ್ವತಿಯ ವೇದನಾಮಯ ಸ್ಮರಣೆಯಿಂದ, ಮೊದಲೆ ಒದ್ದೆಯಾಗಿದ್ದ ಮನಸ್ಸು ಮತ್ತೂ ಮುದ್ದೆಯಾಗಿದ್ದಿತು.

ಅರ್ಧ ಘಂಟೆಯೊಳಗೆ ಅಪೇಕ್ಷಿತ ಬಂಧುಗಳು ಬಂದರು. ರಾಧಮ್ಮ ಪ್ರೇತದಂತಿದ್ದಳು. ಮಕ್ಕಳು ಗರಿಹರಿದ ಹಕ್ಕಿಗಳಂತಿದ್ದರು. ವೆಂಕಟರಾಯನು ಕಳೇಬರ ಮಾತ್ರನಾಗಿದ್ದ. ಸೀತಮ್ಮ ಛಾಯಾರೂಪಿಣಿಯಂತೆ ಇದ್ದಳು. ರಾಮಣ್ಣ ಸ್ಮಶಾನಮೌನಧಾರಿಯಾಗಿದ್ದ.

ಒಣಗಿದ ಕಾಡಿನ ಮಧ್ಯದಲ್ಲಿಯೂ ಹಸಿಹಸಿಯಾಗಿ ಬೆಳೆವ ಬಳ್ಳಿಗಳಂತೆ ಇದ್ದ ಮಕ್ಕಳನ್ನು ಕಂಡೊಡನೆ, ಕಟ್ಟನ್ನೊಡೆದು ದುಮುಕುವ ಜಲಪ್ರವಾಹದಂತೆ ಆತನ ದುಃಖವು ಕಣ್ಣೀರಿನಲ್ಲಿ ಹರಿಯಿತು. 'ಇಂತಹ ಮಕ್ಕಳನ್ನು ನಾನು ಇದುವರೆಗೆ ಸ್ವಚ್ಛಭಾವದಿಂದ ಎತ್ತಿ ಮುದ್ದಿಡಲಿಲ್ಲವಲ್ಲ! ಎಂತಹ ಪಾಪಿ ನಾನು! ಇವುಗಳನ್ನೊಮ್ಮೆ ಪ್ರೀತಿಯಿಂದ ತಬ್ಬಿಕೊಂಡುದನ್ನು, ನನ್ನ ಕೈಹಿಡಿದ

ದುರ್ಭಾಗ್ಯೆ ಒಮ್ಮೆ ನೋಡುತ್ತಿದ್ದರೆ, ಸಾಯುವಾಗಲೂ ಎಷ್ಟು ಸುಖದಲ್ಲಿರುತ್ತಿದ್ದಳೋ! ದೇವರೇ ಬಲ್ಲ. ಆದರೇನು ನನಗೆ ವ್ಯಾಪಾರವಿತ್ತು. ಕೆಲಸದ ಗಡಿಬಿಡಿಯಿತ್ತು ಸಿನೆಮವಿತ್ತು. ನಾಟಕವಿತ್ತು. ಮಂಗಳೂರಿನ ಓಣಿಗಳಿದ್ದುವು. ಚಂಚಲೆಯರಂಥವರ ಒಡನಾಟದ ಕಾರ್ಯಬಾಹುಲ್ಯವಿತ್ತು ಯಾವುದಕ್ಕೂ ಅವಕಾಶವಿರಲಿಲ್ಲ ಕೊಲೆಮಾಡುವುದಕ್ಕೆ ಸಮಯವಿತ್ತು. ಮಕ್ಕಳಲ್ಲಿ ಒಂದು ಮೆದುಮಾತಾಡುವುದಕ್ಕೆ ಕಾಲವಿರಲಿಲ್ಲ' ಎನ್ನುತ್ತ ಮಕ್ಕಳನ್ನೆತ್ತಿದ. ಅವುಗಳ ಎಲುಬು ಪುಡಿಯಾಗುವಷ್ಟು ಎದೆಗೊತ್ತಿದ. ತಾಯಿ, ಅಣ್ಣ, ಅತ್ತಿಗೆ ಇವರ ಕಾಲಿಗೆ ಹೆಮ್ಮರದಂತೆ ಕೆಡೆದ. ಎಲ್ಲರೂ ಭ್ರಾಂತರಾಗಿದ್ದರು.

ಶ್ರೀಧರ.—ಮಕ್ಕಳೇ! ಇಂದಿನಿಂದ 'ಅಪ್ಪ'ನೆಂಬ ಶಬ್ದವನ್ನು ಮರೆತುಬಿಡಿ, ಮಕ್ಕಳೇ! ಈ ಪಾಪಿಯನ್ನು ಅಪ್ಪನೆಂದು ಸಂಬೋಧಿಸುವ ಅಭ್ಯಾಸವಾಗಿದೆ ನಿಮಗೆ ಅದನ್ನು ಮರೆತರೆ ನಿಮ್ಮ ಭವಿಷ್ಯವು ಒಳ್ಳೆಯದಾದೀತು!

ರಾಧಮ್ಮ.— ಅಯ್ಯೋ ಮಗು! ನೀನೂ ಹೀಗೆ ಹೇಳುವ ಕಾಲ ಬಂತೇ? ಎಲ್ಲರನ್ನೂ ಕೊಂಡೊಯ್ಯುವ ಯಮಪಾಶಕ್ಕೆ ನಾನು ಭಾರವಾದೆನೆ? ನನ್ನನ್ನು ಹೊರುವಷ್ಟು ಗಟ್ಟಿಯಾದ ಹಗ್ಗ ಅವನಲ್ಲಿಯೂ ಇಲ್ಲದಾಯಿತೇ?

ಶ್ರೀಧರ – ನಿಮಗಿಂದು ತಂದೆಯಿಲ್ಲ . ತಾಯಿಯಿಲ್ಲ . . . ಇದೆಲ್ಲ ನನ್ನಿಂದಾಗಿ.

'ನಮ್ಮನ್ನು ಬಿಟ್ಟು ಇಲ್ಲಿರುವುದೇಕೆ? ಮನೆಗೆ ಏಕೆ ಬರುವುದಿಲ್ಲ?' ಎಂದು ಮಕ್ಕಳ ಪ್ರಶ್ನೆ.

ಶ್ರೀಧರ – ಇನ್ನು ನನಗಿರುವ ಮನೆ ಇದುವೆ! ನೀವು ಮೊದಲಿನ ಮನೆಯೊಳಗೆ ಸುಖವಾಗಿ ಇರಿ ಮಕ್ಕಳೆ. ಅಪ್ಪನಿಲ್ಲದಿದ್ದರೂ ದೊಡ್ಡಪ್ಪ ಇದ್ದಾನೆ. ತಾಯಿಯಿಲ್ಲದಿದ್ದರೂ ದೊಡ್ಡತಾಯಿಯಿದ್ದಾಳೆ ಅವರು ಹೇಳಿದಂತೆ ನಡೆದುಕೊಂಡು, ನಿಮ್ಮಪ್ಪ ಯಾವ ಅಪಕೀರ್ತಿಯನ್ನು ತಂದನೋ ಅದನ್ನು ತೊಡೆದು ಬಿಡಿ, ತೊಳೆದುಬಿಡಿ ಮಕ್ಕಳೇ! ನನ್ನ ನೆನಪುಮಾಡುವುದೇ ಭಯಂಕರವೆನ್ನುವಂತಹ ಕ್ರೂರಕೃತ್ಯ ಮಾಡಿದ್ದೇನೆ. ಇದರರ್ಥವೇನೆಂದು ನಿಮಗೆ ಇಂದು ಆಗದು . . . ದೊಡ್ಡವರಾದ ಮೇಲೆ ಆಗಬಹುದು. ನಿಮ್ಮ ಮೇಲೆ ನನಗೆ ಸಿಟ್ಟಿಲ್ಲ. ಸಿಟ್ಟಿನಿಂದ ನಾನು ಬಾರದಿರುವುದಿಲ್ಲ . . ಎಂದು ಪುನಃ ಪುನಃ ಆಲಿಂಗಿಸಿದನು.

ಅನಂತರ ಉಳಿದವರನ್ನೆಲ್ಲ ಸಂಬೋಧಿಸಿ ಹೀಗೆಂದನು:– ಇಂದಿಗೆ ನನ್ನ ಜೀವನವು ಮುಗಿಯಬೇಕು. ಎಂತಹ ಅವಸಾನವು ಬರಬಾರದೋ ಅಂತಹ ಅವಸಾನವನ್ನು ಹೊಂದಬೇಕು. ಇನ್ನೂ ಕೆಲಗಾಲ ಈ ಜೀವ ಎಕ್ಕುತ್ತಿರಬಹುದು ಆದರೆ ನಿಮ್ಮ ಮಟ್ಟಿಗೆ ನಾನು ಮೃತನೇ. ಬಾಯಿಗೆ ನೀರೆರೆವ ಬಂಧುಗಳಿಲ್ಲದೆ ಕಣ್ಣೆತ್ತದ ನಾಡಿನಲ್ಲಿ ಸಾಯುತ್ತೇನೆ. ನಿಮ್ಮಲ್ಲಿ ನಾನಾಚರಿಸಿದ ಅಪರಾಧವು ಆತ್ಮದ ಕಿಲುಬಿನಂತೆ ಸೇರಿಕೊಂಡಿದೆ. ಅದನ್ನು ತೆಗೆಯಲು ಸಾಧ್ಯವಿಲ್ಲ. ಹೆಣ್ಣೆಂದರೆ ಆಟದ ಬೊಂಬೆ; ಬಂಧುಗಳೆಂದರೆ ಚದುರಂಗದ ಗರುಗಳು. ಪ್ರಪಂಚವೆಂದರೆ ದೊಡ್ಡ ಆಟದ ಕಳ–ಎಂಬ ಭಾವನೆ ನನಗಿತ್ತು ಅದಕ್ಕೆ ತಕ್ಕಂತೆ ಅಂದು ಮಾಡಿದೆ. ನನ್ನ ಕಾಮಕ್ಕೆ ಕಣ್ಣಿರಲಿಲ್ಲ. ದುರ್ಬುದ್ಧಿಗೆ ಮೇರೆಯಿರಲಿಲ್ಲ ಒಬ್ಬೊಬ್ಬರಲ್ಲಿ ಆಚರಿಸಿದ ಪಾಪವು ಒಂದೊಂದು ಬಗೆಯದು. ಅದೆಲ್ಲವನ್ನು ಕೂಡಹಾಕಿದರೂ, ಈ ಅತ್ತಿಗೆಯಲ್ಲಿ–ಈ ತಾಯಿಯಲ್ಲಿ ಎಸಗಿದ ಪಾಪವು ಎಲ್ಲವುಗಳಿಗಿಂತ ಘೋರ, ನೂರು ಪಾಲು ಹೆಚ್ಚು. ಇವರನ್ನು ಜೀವಜೀವ ಕೊಲ್ಲಲು ಬಯಸಿದೆ. ಕುಯುಕ್ತಿ ಜಾಲವನ್ನು ಹೂಡಿದೆ. ಆದರೆ ವಿದ್ಯುಜ್ಜ್ಯೋತಿಯಂತೆ ಅವರ ಆತ್ಮತೇಜಸ್ಸು ಎಲ್ಲವನ್ನೂ ಸುಟ್ಟು ಬೂದಿಮಾಡಿತು. ನನ್ನ ಜಾಲವು ನನ್ನನ್ನೆ ಸುತ್ತಿಕೊಂಡಿತು. ಹೆಣ್ಣಿಗೂ ಒಂದು ಜೀವವಿದೆ, ಅವಳಿಗೂ ಆತ್ಮವಿದೆ; ಅವಳ ಆತ್ಮವು ಕಲ್ಲಲ್ಲ, ಕೊರಡಲ್ಲ, ಮಣ್ಣಹೆಂಟೆಯಲ್ಲ, ಎಂದು ಭಾವಿಸಿರಲಿಲ್ಲ. ಈಗ ಮನಚ್ಚಕ್ಷುಗಳು ಒಂದೊಂದಾಗಿ ತೆರೆಯುತ್ತಿವೆ. ಪ್ರಯೋಜನವೇನು? ನಾನು ಹೋಗುತ್ತೇನೆ. ಎಲ್ಲರೂ ಕ್ಷಮಿಸಿರಿ. ಏನೋ ಹುಡುಗಾಟ ಮಾಡಿದ; ಕೆಟ್ಟುಹೋದ ಎನ್ನಿ. ಮುಂದಿನ ಜನ್ಮದಲ್ಲಾದರೂ ನನಗೆ ಸದ್ಬುದ್ಧಿ ಬರಲೆಂದು ದೇವರನ್ನು ಪ್ರಾರ್ಥಿಸಿರಿ.

ರಾಧಮ್ಮ ನೆಲಕ್ಕೆ ಬಿದ್ದು ಅತ್ತಳು.

ವೆಂಕಟರಾಯ – ನೀನೂ ನಾನೂ ಒಟ್ಟಾಗಿದ್ದು ಎರಡು ಮರಿಯಾನೆಗಳಂತೆ ಮೆರೆಯಬೇಕೆಂದು ಎಷ್ಟು ಹವಣಿಸಿದ್ದೆನೋ ದೇವನೆ ಬಲ್ಲ. ಆಗಲಿಲ್ಲ . . . ಆಗಲಿಲ್ಲ . . . ಎಂದುಕೊಂಡೇ ಒಂದು ದಿನ ನನ್ನೀ ಪ್ರಾಣ ನಿಲ್ಲಬೇಕೆಂದು ತೋರುತ್ತದೆ.

ಶ್ರೀಧರ:– ಹಾಗೆ ಹೇಳಿ ತನ್ನ ಮನಸ್ಸನ್ನು ಚೂರು ಚೂರು ಮಾಡಬೇಡ. ಎಲ್ಲವನ್ನೂ ಮರೆತುಬಿಡು. ಇದೇ ನನ್ನ ಕೊನೆಯ ಮಾತು.

ವೆಂಕಟ:– ನನ್ನ ಹಣೆಬರಹ ಓರೆಯಾಗಿತ್ತು. ಇಲ್ಲದಿದ್ದರೆ ಹೀಗೆ ಆಗ ಬೇಕಿತ್ತೆ? ಎಲ್ಲವನ್ನೂ ಮರೆಯಬಹುದು. ಆದರೆ ನೀನು ಮಾಡಿದ ಉಪಕಾರ ಗಳನ್ನೊ . . . ?

ಶ್ರೀಧರ – ನಿನ್ನಲ್ಲಿ 'ಮರೆತುಬಿಡು' ಎನ್ನುವ ಮಾತೂ ಇಲ್ಲ ಅತ್ತಿಗೆ. ಇಂಥ ರಾಕ್ಷಸನೊಬ್ಬ ತನಗೆ ಮೈದುನನಾಗಿದ್ದ ಎಂದು ಬೇಕಾದರೆ ನೆನಪಿನಲ್ಲಿ ಟ್ಟುಕೊ. ಅದರೊಂದಿಗೆ ನನ್ನ ಪಶ್ಚಾತ್ತಾಪದ ನೆನವೂ ಇರಲಿ.

ಸೀತಮ್ಮ:- ಹೀಗೆ ಹೇಳಬಹುದೇ ಭಾವ? ನೀವು ಮಾಡಿದ ಉಪಕಾರ ಗಳನ್ನು ಮಾತ್ರ ಸ್ಮರಿಸಲು ಹತ್ತು ಜನ್ಮ ಸಾಲುವುದೇ?

ಶ್ರೀಧರ – ಹೆಣ್ಣಾಗಿ ಹುಟ್ಟಿದವಳು ಮರೆಯುವುದನ್ನು ಕಲಿಯಬೇಕಮ್ಮ ನಿನ್ನಂತೆ. ಮರೆಯುವ ಶಕ್ತಿಯಿಲ್ಲದಿದ್ದರೆ, ನಿನ್ನಂಥ ನಿರ್ಗತಿಕ ತರುಣಿಯರು ತಾರುಣ್ಯವನ್ನು ದಾಟಿ ಬದುಕುವುದೆಂತು? . . ಹೀಗೆ ಹೇಳುತ್ತಾ ಮುಕ್ತಕಂಠ ನಾಗಿ ಅತ್ತನು.

ಎಲ್ಲರೂ ಅತ್ತರು. 'ಹೀಗೆ ಹೇಳಬೇಡಿರಿ. ನನ್ನಿಂದ ಏನಾಗಬೇಕು ಎಂಬುದನ್ನು ತಿಳಿಸಿರಿ' ಎಂದಳು ಸೀತಮ್ಮ.

ಶ್ರೀಧರ – ನನ್ನಿಂದ ಆಗಬೇಕಾದುದೆಲ್ಲ ಆಗಿಹೋಗಿದೆ. ಇನ್ನುಮುಂದಿನದು ನಿಮ್ಮಿಂದ ನಡೆಯಬೇಕು. ನಾನೊಬ್ಬ ನಡುವೆ ಕಾಲುಜಾರಿ ಬಿದ್ದರೂ ನಮ್ಮ ಕುಟುಂಬದಲ್ಲಿ ವಿಚ್ಛೇದವಾಗಬೇಕಾಗಿಲ್ಲ. ನಾನಿಲ್ಲ ಎಂಬುದನ್ನು ಮರಸಿ ಬಿಡುವಂತೆ ಎಲ್ಲವೂ ನಡೆಯಲಿ.

ರಾಮಣ್ಣ – ನಿನ್ನ ಉಪ್ಪನ್ನ ಉಂಡುದಕ್ಕೆ ನಾನಾವ ಪ್ರತೀಕಾರವನ್ನೂ ಮಾಡಲಿಲ್ಲ.

ಶ್ರೀಧರ:– ಪಿಸ್ತೂಲಿದೆಯೋ ರಾಮಣ್ಣ?

ರಾಮಣ್ಣ:– ಆ ಮಾತನ್ನೆತ್ತಿ ನನ್ನನ್ನು ಕೊಲ್ಲಬೇಡ.

ಶ್ರೀಧರ – ಈಗ ಇರಬೇಕಾಗಿತ್ತು ಆ ಪಿಸ್ತೂಲು. ಅದಿರುತ್ತಿದ್ದರೆ ದ್ವೀಪಾಂತರವಾಸದ ಶಿಕ್ಷೆ ತಪ್ಪಿಹೋಗುತ್ತಿತ್ತು. ಯಾರ ಕೈಯಿಂದ ಶಿಕ್ಷೆ ಹೊಂದುವುದು ಉಚಿತವಾಗಿದೆಯೊ ಅವರ ಕೈಯಿಂದಲೆ ದೊರೆಯುತ್ತಿತ್ತು.

ರಾಮಣ್ಣ :– ನನ್ನನ್ನು ಕ್ಷಮಿಸು ಭಾವ!

ಶ್ರೀಧರ:– ಪಿಸ್ತೂಲು ಏನನ್ಯಾಯ ಮಾಡೀತು? ನನಗೊಬ್ಬಳು ತಂಗಿ ಇರುತ್ತಿದ್ದರೆ ಅವಳ ಮಾನರಕ್ಷಣೆಯ ಸಂದರ್ಭ ಬರುತ್ತಿದ್ದರೆ ನಾನೂ ಹಾಗೆಯೆ ಮಾಡುತ್ತಿದ್ದೆ.

ಹೀಗೆ ಮಾತುಕತೆ ಮುಂದುವರಿಯುತ್ತಿದ್ದಾಗ, ರಾಧಮ್ಮನು ಮೂರ್ಛೆ ಹೋದುದು ಯಾರಿಗೂ ತಿಳಿದಿರಲಿಲ್ಲ. ರಾಮಣ್ಣ ಥಕ್ಕನೆ ಓಡಿ ಬಂದು, ತಾವು ಬಂದಿದ್ದ ಬಂಡಿಯಲ್ಲಿ ಅವಳನ್ನೂ ಸಣ್ಣ ಮಕ್ಕಳನ್ನೂ ಕೂರಿಸಿದ ಭಾವನ ಕಾಲಿಗೆ ಅಡ್ಡಬಿದ್ದ. ಅವನ ಕಣ್ಣೀರು ಪುಷ್ಪವೃಷ್ಟಿಯಂತೆ ಸುರಿಯಿತು. 'ನೀನು ಹೋಗು ರಾಮಣ್ಣ! ಕೊನೆಯ ನೋಟವಿದು ನನ್ನ ಎದೆಯನ್ನು ಭೇದಿಸಿ ಅವರ ಈಗಿನ ಪರಿಶುದ್ಧತೆಯನ್ನು ನೋಡು' ಎಂದನು ಶ್ರೀಧರ 'ಎಂಥ ಪ್ರಚಂಡವ್ಯಕ್ತಿಯ ಅವಸಾನ ಹೇಗಾಯಿತು? ಮನುಷ್ಯಾವಸ್ಥೆಯೆಂಗರೆ ಇಷ್ಟೆ ತಾನೆ!?' ಎಂದು ಹಿಂದೆ ಮುಂದೆ ಹತ್ತು ಸಲ ನಡದು ರಾಮಣ್ಣನು ಹೋದನು.

ಅಣ್ಣ ಅತ್ತಿಗೆಯರಲ್ಲಿ ಕ್ಷಮೆ ಬೇಡಿದುದು ಸಾಲದೆಂಬ ಶ್ರೀಧರನ ಮನಸ್ಸಿನಲ್ಲಿದ್ದುದರಿಂದ, ತಾಯಿ ಮಕ್ಕಳ ನಿಷ್ಕ್ರಮಣವನ್ನವನು ಗೋಚರಕ್ಕೆ ಬರಿಸಲೆ ಇಲ್ಲ ಅವರು ಹೋದ ಅನಂತರ ಹೃದಯವನ್ನು ಬಿಚ್ಚಿ ಮಾತಾಡುವ ಅವಕಾಶ ದೊರೆಯಿತು ಡಾ ವೆಂಕೋಬರಾಯರಲ್ಲಿಯೂ ವಕೀಲರಲ್ಲಿಯೂ ಪ್ರಸ್ತಾಪಿಸಿದ ಸಂಗತಿಗಳನ್ನು ಅವರಿಗೂ ತಿಳಿಸಿದನು 'ನಾನಿನ್ನು ಪುನಃ ಬರುವಂತಿಲ್ಲ. ನನ್ನ ಆಯುಸ್ಸಿನಲ್ಲಿ ಒಂದರ್ಧ ಕಳೆದು ಹೋಯಿತು. ಇನ್ನರ್ಧ ಬಂದೀವಾಸಕ್ಕಾಯಿತು. ನಾನು ಶಿಕ್ಷಾವಧಿಯನ್ನು ಮುಗಿಸಿ ಬದುಕಿ ಬರುವಂತಿಲ್ಲ, ಒಂದು ನಿಮಿಷ ಸುಮ್ಮನ ಕುಳಿತು ಅರಿಯದ ಜೀವ ಇಪ್ಪತ್ತು ವರ್ಷ ಬೆಪ್ಪಾಗಿ ಕುಳಿತಿರುವುದು ಹೇಗೆ? ಆಗಬೇಕಾದಂತೆ ಎಲ್ಲವೂ ಆಯಿತು. ದೈವಸಂಕಲ್ಪ ನೆರವೇರಿತು. ನೀವು ಮಾತ್ರ ಎರಕದಿಂದಿರಬೇಕು ಇರುತ್ತೇವೆಂಬ ಧೈರ್ಯವನ್ನು ಕೊಟ್ಟರೆ ಸಾಯುವ ಕಾಲಕ್ಕೆ ಅವಶ್ಯವಾದ ಅಲ್ಪಶಾಂತಿ ಯಾದರೂ ದೊರೆತೀತು. ಹಲ್ಲುಬಾರದ ನಾಲ್ಕು ಮಕ್ಕಳಿವೆ. ಪಾರ್ವತಿ ನರಕದಿಂದ ಸ್ವರ್ಗಕ್ಕೇರಿದಳು. ನನ್ನ ಪಾಡು ಹೀಗಾಯಿತಲ್ಲ ವ್ಯಸನದಿಂದ ಹೇಳುವ ಮಾತಲ್ಲವಿದು. ಸತ್ಯವೂ ಹೀಗೆಯೆ. ಕೊಳೆವ ಹಣ್ಣು ಬಿದ್ದು

ಹೋಗುತ್ತದೆ. ಉಳಿದವುಗಳು ಒಂದೆ ಗೊಂಚಲಲ್ಲಿ ಇರಬಾರದ್ದೇಕೆ? ನೀವು ನನ್ನ ಇಷ್ಟಾರ್ಥವನ್ನು ಪೂರೈಸುವ ಭರವಸೆ ಕೊಟ್ಟರೆ, ಲೋಕವನ್ನೆ ಗೆದ್ದಷ್ಟು ಸಂತೋಷ ನನಗೆ.

ಇಬ್ಬರೂ ಎದೆ ತಟ್ಟಿ 'ತಥಾಸ್ತು' ಎಂದರು

ಇನ್ನೇನೂ ಚಿಂತೆಯಿಲ್ಲ ಮನಸ್ಸು ಹಗುರವಾಗಿದೆ ಅಂದಮಾನ ದ್ವೀಪದ ಕಡೆಗೆ ಹಾರುತ್ತಿದೆ– ಎಂದ ಶ್ರೀಧರ.

ಂ ಂ ಂ ಂ ಂ

ಅಗಲಿಕೆಯ ವೇದನೆ ಮೂವರಿಗೂ ಅಸಹನೀಯವಾಗಿದ್ದಿತು ಸೆರೆ ಮನೆಯಿಂದ ಹೊರಬರುವಾಗ 'ಆಹಾ! ಎಂತಹ ಧೈರ್ಯ ಭಾವನವರಿಗೆ!' ಎಂದಳು ಸೀತಮ್ಮ

'ಹೌದು! ಅಸಾಮಾನ್ಯ ಧೈರ್ಯದ ಪಿಂಡ ಆತ ಹೀಗೆ ತೋರಿದ ಸಾಹಸವನ್ನು ಸತ್ಕಾರ್ಯಕ್ಷೇತ್ರದಲ್ಲಿ ಪ್ರದರ್ಶಿಸುತ್ತಿದ್ದರೆ, ಯಾರ ರಾಜ ದಂಡವನ್ನು ಕಿತ್ತುಕೊಳ್ಳುತ್ತಿದ್ದನೋ ಏನೊ! ಮಾಡುವುದೇನು? ಅವನಿಗೂ ಭಾಗ್ಯವಿಲ್ಲ ಅಂತಹ ತಮ್ಮನ ಅಣ್ಣನಾಗಿರುವ ಸುದೈವ ನನಗೂ ಇಲ್ಲ. ಇಬ್ಬರ ಕರ್ಮಗಳು ಸೇರಿ ಹೀಗೆಲ್ಲ ಆದುವು' ಎಂದು ವೆಂಕಟರಾಯನು ಕಣ್ಣನ್ನು ಒರಸಿಕೊಂಡ.